

ತೈಲವರ್ಣ ಕೃತಿ

# ಯುವ ಕಲಾವಿದ
# ಕಾಳಿದಾಸ ದೈವಜ್ಞ



**ಯು**ವ ಕಲಾವಿದ ಕಾಳಿದಾಸ ಎಲ್. ದೈವಜ್ಞ ಬೆಳಗಾವಿ ಜಿಲ್ಲೆಯ ಕಿತ್ತೂರಿನಲ್ಲಿ ಜನಿಸಿದರು (೨-೭-೧೯೮೦). ತಂದೆ ಶ್ರೀ ಎಲ್. ಜಿ. ದೈವಜ್ಞ, ಶಿಲ್ಪ ಕಲಾವಿದ, ವಿಗ್ರಹ ಕರ್ಮಿ ಮತ್ತು ಕಲಾಶಿಕ್ಷಕ. ಕಲೆಯ ವಾತಾವರಣವನ್ನು ಉಸಿರಾಡುತ್ತ ಬೆಳೆದ ಇವರು ಹೈಸ್ಕೂಲು ಶಿಕ್ಷಣ ಮುಗಿಸಿದ ನಂತರ, ಶಿಲ್ಪ ಕಲಾವಿದ ಶ್ರೀ ಶಶಿಧರ್ ಜಿ. ಪತ್ತಾರರ ಮಾರ್ಗದರ್ಶನದಲ್ಲಿ ಮುಂದುವರಿದರು. ಜೊತೆಯಲ್ಲೇ ಕೆನ್ ಕಲಾಶಾಲೆಯಲ್ಲಿ ಅಭ್ಯಾಸ ಮಾಡಿದರು. ಮುಂದೆ ಚಿತ್ರಕಲಾ ಪರಿಷತ್ತಿನ ಬಿ. ಎಫ್. ಎ. ವಿಭಾಗದಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾಗಿದ್ದಾರೆ. ಪ್ರೊ॥ ಎಂ. ಎಸ್. ನಂಜುಂಡರಾವ್, ಪ್ರೊ॥ ಕೆ. ಎಸ್. ಅಪ್ಪಾಜಯ್ಯ, ಶ್ರೀ ಜೆ. ಎಂ. ಎಸ್. ಮಣಿ ಮತ್ತು ಶ್ರೀಮತಿ ಪ್ರತಿಭಾ ಸಿಂಗ್ ಅವರ ಮಾರ್ಗದರ್ಶನದಲ್ಲಿ ತಮ್ಮ ಕಲಾಭ್ಯಾಸವನ್ನು ಶ್ರೀಮಂತಗೊಳಿಸಿಕೊಂಡಿದ್ದಾರೆ. ಚಿತ್ರಕಲಾ ಅಕಾಡೆಮಿಗಳಲ್ಲಿ ತಮ್ಮ ಕಲಾಕೃತಿಗಳನ್ನು ಪ್ರದರ್ಶಿಸಿದ್ದಾರೆ. ಪ್ರಸ್ತುತ ಚಿತ್ರಕಲಾ ಪರಿಷತ್ತಿನ ಸ್ನಾತಕೋತ್ತರ ವಿಭಾಗದಲ್ಲಿ ವ್ಯಾಸಂಗವನ್ನು ಮುಂದುವರಿಸಿರುವ ಇವರು ಜಲವರ್ಣದ ಪ್ರತಿಕೃತಿ, ಆಕ್ರಿಲಿಕ್, ತೈಲವರ್ಣ ಹಾಗೂ ಶಿಲ್ಪಕಲೆಯ ವಿಭಾಗದಲ್ಲಿ ಪರಿಣತಿಗಳಿಸಿದ್ದಾರೆ.


ಬಾಬು ಜತ್ಕರ್
ಉಪನ್ಯಾಸಕರು, ಚಿತ್ರಕಲಾ ಮಹಾವಿದ್ಯಾಲಯ
ಕರ್ನಾಟಕ ಚಿತ್ರಕಲಾ ಪರಿಷತ್, ಕುಮಾರಕೃಪಾ ರಸ್ತೆ, ಬೆಂಗಳೂರು-೫೬೦ ೦೦೧




ಜಲವರ್ಣ ಕೃತಿ



ಜಲವರ್ಣ ಕೃತಿ



ತೈಲವರ್ಣ ಕೃತಿ



ತೈಲವರ್ಣ ಕೃತಿ



ಜಲವರ್ಣ ಕೃತಿ

# ಹೊಸತು

## ಒಳಗೇನಿದೆ.....




*ಚಿತ್ರಗಳು : ರವಿಕುಮಾರ್ ಅಜ್ಜೀಪುರ, ಶ್ರೀಹರಿ, ಜಿ. ಎಂ. ಬೊಮ್ನಳ್ಳಿ*
*ಸತೀಶ್ ಯಲ್ಲಾಪುರ, ಹರಿಣಿ*
*ಛಾಯಾಚಿತ್ರ : ಕೆ. ಪಿ. ಸ್ವಾಮಿ*
*ವಿನ್ಯಾಸ : ನವಕರ್ನಾಟಕ ವಿನ್ಯಾಸ*
*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


## ಈ ತಿಂಗಳು

**ವಾ**ಜಪೇಯಿ ಸರ್ಕಾರ ಐದು ವರ್ಷಗಳನ್ನು ಪೂರೈಸಿದೆ. ಈ ಅವಧಿಯ ಸಾಧನೆಗಳನ್ನು ಜನರಿಗೆ ಪರಿಚಯ ಮಾಡಿಕೊಡಲು ಸಂಭ್ರಮದ ಕಾರ್ಯಕ್ರಮಗಳು ಜರುಗಲಿವೆ. ಕರುಣಾನಿಧಿ ಮತ್ತು ಚಂದ್ರಬಾಬು ನಾಯ್ಡು ಅವರ ಪ್ರತಿಮೆಗಳನ್ನು ಮಾಡಿಸಿ ಮೆರವಣಿಗೆಗಳಲ್ಲಿ ಕೊಂಡೊಯ್ಯುವುದು ಸೂಕ್ತವಾಗಿರುತ್ತದೆ. ನಮ್ಮ ದೇಶದ ಪಾಪದ ಹೊರೆ ಜಾಸ್ತಿಯಾಗಲು ಅವರ ಕಾಣಿಕೆಯು ಮಹತ್ವದ್ದು. ಜಾರ್ಜ್ ಫರ್ನಾಂಡಿಸ್ ಸಂಪುಟ ಬಿಟ್ಟಿದ್ದು ಮತ್ತು ಮತ್ತೆ ಸೇರಿದ್ದು ಸಹ ಒಂದು ಸಾಧನೆ. ಅಂದರೆ ತೆಹೆಲ್ಕಾ ಪ್ರಕರಣವನ್ನು ಮುಚ್ಚಿಹಾಕಿದ್ದು ಎಂದರ್ಥ. ಬ್ರಿಟನ್ನಿನ ಬ್ಲೇರ್ ಸಂಪುಟದಲ್ಲಿ ಒಂದು ನೀತಿಗೆ ಬದ್ಧವಾಗಿ ರಾಜಿನಾಮೆ ನೀಡಿದ ರಾಬಿನ್ ಕುಕ್‌ನಂತಹ ಸಚಿವನಿದ್ದಂತೆ ವಾಜಪೇಯಿ ಸಂಪುಟದಲ್ಲಿ ಒಬ್ಬರಾದರೂ ಇದ್ದಿದ್ದರೆ ಅದನ್ನು ಗಣನೀಯ ಸಾಧನೆ ಎನ್ನಬಹುದಿತ್ತು. ನಮ್ಮಲ್ಲಿ ಕತ್ತು ಹಿಡಿದು ದಬ್ಬಿದರೆ ಮತ್ತೆ ಬಾಗಿಲು ಬಡಿಯುವುದು ಆರಂಭ. ಹಾಗೆ ಬಡಿದು ಒಳಬಂದವರಲ್ಲಿ ಜಾರ್ಜ್ ಪ್ರಮುಖರು. ಇನ್ನು ಕೆಲವರು ಇನ್ನೂ ಬಡಿಯುತ್ತಲೇ ಇದ್ದಾರೆ. ಸಾರ್ವಜನಿಕ ಸಂಪತ್ತನ್ನು ಶೌರಿಯ ನೇತೃತ್ವದಲ್ಲಿ ಖಾಸಗಿಯವರು ಲೂಟಿ ಮಾಡಿದ್ದು, ಶಿಕ್ಷಣ ಕ್ಷೇತ್ರವನ್ನು ಹೊಲಸುಗೊಳಿಸಿದ್ದು, ದೇಶವನ್ನು ಅಮೆರಿಕೆಯ ಅಡಿಯಾಳಾಗಿಸಿದ್ದು, ಶ್ರೀ ರಾಮಚಂದ್ರನ ಹರಕೆಗೆ ಸಾವಿರ ಮಂದಿಯನ್ನು ಬಲಿಕೊಟ್ಟಿದ್ದು ಮುಂತಾದುವನ್ನೆಲ್ಲಾ ಸಾಧನೆಯ ಪಟ್ಟಿಯಲ್ಲಿ ಸೇರಿಸಬೇಕಾದ್ದು ನಮ್ಮ ಮರೆವನ್ನು ದೂರ ಮಾಡಲು ಅಗತ್ಯ.

ಈ ತಿಂಗಳ ಘಟನೆಗಳಲ್ಲಿ ಇರಾಕಿನ ಅಧ್ಯಕ್ಷ ಸದ್ದಾಂ ಹುಸೇನ್‌ಗೆ ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್ ನೀಡಿದ ಆಜ್ಞೆ ಅನನ್ಯವಾದ್ದು. ''ನೀನು ಶ್ವೇತಭವನ ಬಿಟ್ಟು ಪರಾರಿಯಾಗದಿದ್ದರೆ ವಿವಿಧ ದೇಶಗಳಲ್ಲಿ ಅಮೆರಿಕಾದ ಪ್ರಜೆಗಳನ್ನು ಹಾದಿಬೀದಿಗಳಲ್ಲಿ ಕೊಲ್ಲಲಾಗುವುದು'' ಎಂದು ಬಿನ್ ಲಾಡೆನ್ ತಂಡ ಬುಷ್‌ಗೆ ಆಜ್ಞೆ ನೀಡಿದರೆ ಅದೆಷ್ಟು ಸಮರ್ಥನೀಯವೋ ಅಷ್ಟೇ ಸಮರ್ಥನೀಯ ಸದ್ದಾಂ ತನ್ನ ಮಕ್ಕಳೊಡನೆ ದೇಶ ಬಿಟ್ಟು ಹೋಗಬೇಕೆಂಬ ಬುಷ್ ಆಜ್ಞೆ. ಇರಾಕನ್ನು ಆಕ್ರಮಣ ಮಾಡಿದರೆ ಶ್ವೇತಭವನವನ್ನು ಉರುಳಿಸುತ್ತೇವೆ ಎಂದು ಯಾರೂ ಹೇಳಿಲ್ಲವಾದ್ದರಿಂದ ಅಮೆರಿಕಾದ ಕೌಬಾಯ್ ಪ್ರೆಸಿಡೆಂಟ್ ತನ್ನ ದುಷ್ಕೃತ್ಯವನ್ನು ಜಾರಿಗೊಳಿಸಲು ಅಡ್ಡಿಯಿಲ್ಲ, ಇರಾಕಿನ ತೈಲದಲ್ಲಿ ಮೀಯಲು ಬಾಧಕವಿಲ್ಲ. ಪ್ರಪಂಚ ಇಂತಹ ಬರ್ಬರತೆಗೆ ತನ್ನನ್ನು ಅರ್ಪಿಸಿಕೊಂಡಿದೆ.

ಮಾರ್ಚ್ ೮ರಂದು ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯ ಸಂದರ್ಭ. ಮುಖ್ಯಮಂತ್ರಿ ಎಸ್. ಎಂ. ಕೃಷ್ಣ ಸ್ವಲ್ಪ ಜೆ. ಎಚ್. ಪಟೇಲರ ಧಾಟಿಯನ್ನು ಅನುಸರಿಸಿ ಮಹಿಳೆಯರಿಗೆ ನುಡಿಮುತ್ತುಗಳ ಮಳೆಯನ್ನು ಸುರಿಸಿದರು. ಚೆನ್ನಾಗಿ ಅಲಂಕಾರ ಮಾಡಿಕೊಂಡು ಗಂಡಂದಿರನ್ನು ಓಲೈಸುವುದರ ಮೂಲಕ ಅವರನ್ನು ಲಾಟರಿ, ಹೆಂಡ ಮುಂತಾದ ದುಶ್ಚಟಗಳಿಂದ ದೂರವಿಡಬೇಕೆಂಬ ಅದ್ಭುತ ಸಲಹೆಯನ್ನು ಮಹಿಳೆಯರಿಗೆ ಉಚಿತವಾಗಿ ನೀಡಿದ ಮಾನ್ಯ ಕೃಷ್ಣ ಅವರು ದೊಡ್ಡ ಸಮಾಜ ಸೇವಾ ಧುರೀಣರಾಗಿ ರಾರಾಜಿಸುವುದು ಖಚಿತವೆನಿಸುತ್ತದೆ. ಅವರ ಈ ಸರ್ವಜ್ಞನುಡಿಯನ್ನು ಕೇಳುವ ಮೊದಲೇ ಮಂಡ್ಯದಲ್ಲಿ ಮಹಿಳೆಯರು ಮೆರವಣಿಗೆಯಲ್ಲಿ ತೆರಳಿ ಲಾಟರಿ ಅಂಗಡಿಗಳನ್ನು ಮುಚ್ಚಿಸುವ ಕೆಲಸ ಆರಂಭಿಸಿಬಿಟ್ಟಿದ್ದರು. ಕೆಲವರಿಗೆ ಅಲಂಕಾರ, ಇನ್ನು ಕೆಲವರಿಗೆ ಅಹಂಕಾರ; ಹೀಗಿದೆ ನಮ್ಮ ಗುಣ ವಿಭಜನೆ. ಮುಖ್ಯಮಂತ್ರಿಯವರ ಪ್ರಕಾರ ಮಹಿಳೆಯರು ಹಾವ ಭಾವ ವಿಲಾಸಗಳನ್ನು ಪ್ರದರ್ಶಿಸುತ್ತಾ ತೂಕಡಿಸುತ್ತಿರಬೇಕೆಂಬ ಆಶಯ ಖಂಡಿತವಾಗಿಯೂ ಇನ್ನು ಫಲಿಸಲಾರದೆಂದು ಕಂಡುಕೊಂಡರೆ ದೇಶಕ್ಕೆ ಕ್ಷೇಮವೆನಿಸುತ್ತದೆ.

ಕಾಲಿಬಂಗನ್ ಎಂಬುದು ಹರಪ್ಪ ನಾಗರಿಕತೆಯ ಒಂದು ಭಾಗ. ಆರುಸಾವಿರ ವರ್ಷಗಳ ಹಿಂದೆ ಜಮೀನನ್ನು ಉಳುತ್ತಿದ್ದ ಮಾದರಿಗೆ ಅಲ್ಲೊಂದು ದಾಖಲೆ ಲಭಿಸಿದೆ. ಉತ್ಖನನ ಶಾಸ್ತ್ರಜ್ಞರು ವರ್ಷಗಟ್ಟಲೆ ಕೆಲಸ ಮಾಡಿ ಅದನ್ನು ಜಗತ್ತಿಗೆ ತೆರೆದಿಟ್ಟರು. ಹಾರೆ-ಪಿಕಾಶಿಗಳಿಂದ ಅಗೆದರೆ ಉತ್ಖನನವು ಮಣ್ಣು ಪಾಲಾಗುವುದೆಂಬ ಎಚ್ಚರದಿಂದ ನಿಧಾನವಾಗಿ ಬರಲುಗಳಿಂದ ಗುಡಿಸುತ್ತಾ ಈ ದಾಖಲೆಯನ್ನು ಉಳಿಸಿದ್ದು ಆ ತಜ್ಞರ ವಿಶಿಷ್ಟ ಕೊಡುಗೆ. ಇದು ಲಕ್ನೋ ಉಚ್ಚ ನ್ಯಾಯಾಲಯಕ್ಕೆ ಅಪ್ರಸ್ತುತ. ಒಂದು ತಿಂಗಳೊಳಗಾಗಿ ಉತ್ಖನನ ಮುಗಿಸಿ ರಾಮಮಂದಿರದ ಭೂತ-ಭವಿಷ್ಯತ್ತುಗಳನ್ನು ನಿರ್ಧರಿಸಬೇಕೆಂಬ ತರಾತುರಿಯಲ್ಲಿ ತಜ್ಞರ ಪಾಡು ಹೇಗಿದ್ದೀತೆಂದು ಊಹಿಸಿಕೊಳ್ಳಬೇಕು. ದೆಹಲಿಯ ಪಾರ್ಲಿಮೆಂಟ್ ಭವನವಿರುವ ಜಾಗದಲ್ಲಿ ಐದನೆಯ ಶತಮಾನದಲ್ಲಿ ಒಂದು ಭವ್ಯವಾದ ಅರಮನೆ ಇದ್ದಿತಂತೆ. ಅದರಲ್ಲಿ ಸ್ವತಃ ಶ್ರೀ ಕೃಷ್ಣ ಪರಮಾತ್ಮನೇ ವಾಸಿಸಿದ್ದನೆಂಬ ನಂಬಿಕೆಯೂ ವ್ಯಾಪಕವಾಗಿದೆಯಂತೆ. ಅಂತಹ ಶ್ರೇಷ್ಠ ಆವಾಸವನ್ನು ಯಾವನೋ ದುರಾತ್ಮ ನೆಲಸಮ ಮಾಡಿದ್ದ. ಆ ಜಾಗದಲ್ಲಿ ಈಗ ಪಾರ್ಲಿಮೆಂಟ್ ಭವನ ಬಂದು ಕೂತುಬಿಟ್ಟಿದೆ. ಇಪ್ಪತ್ತೊಂದನೆಯ ಶತಮಾನದಲ್ಲಿ ಇದಕ್ಕೆ ತಕ್ಕ ಶಾಸ್ತಿ ಮಾಡಿ ಹಳೆಯ ಆವಾಸವನ್ನು ಅಗೆದು ತೆಗೆಯುವ ಕೆಲಸ ನಡೆಯಬೇಕಿದೆ !! ನ್ಯಾಯಾಲಯ ಇನ್ನೂ ಹಾಗೆಂದು ಹೇಳದಿದ್ದರೂ ಪಾರ್ಲಿಮೆಂಟಿನ ವರ್ಚಸ್ಸನ್ನು ಕಡಿಮೆಗೊಳಿಸಿದರೆ ಆಮೇಲೆ ಅಗೆತ ಹಾಯಾಗಿ ನಡೆಸಬಹುದೆಂದು ವಾಜಪೇಯಿ ಸರ್ಕಾರಕ್ಕೆ ತಿಳಿದಿರುವುದರಿಂದ ಆ ದಿಕ್ಕಿನಲ್ಲಿ ಮುನ್ನಡೆ ಸಾಧಿಸಲಾಗುತ್ತಿದೆ. ಹೀಗೆ ಪ್ರಜಾಪ್ರಭುತ್ವ ಚಿರಾಯುವಾಗುತ್ತದೆ ಮತ್ತು ನಾಡಿನ ಜನ ಕುಂಭಕರ್ಣರಾಗಿಯೇ ಉಳಿದರೆ ವಾಜಪೇಯಿ ನಂತರ ಅಡ್ವಾನಿಯವರ ಬದಲು ನರೇಂದ್ರ ಮೋದಿಯೇ ಪ್ರಧಾನಿಯೂ ಆಗಿಬಿಡುತ್ತಾರೆ. ಅದೇ ವಾಜಪೇಯಿ ಸರ್ಕಾರದ ಐದು ವರ್ಷಗಳ ಆಡಳಿತದ ಪರಿಣಾಮವೆಂದು ಮುರಳಿ ಮನೋಹರ ಜೋಶಿ ಬತ್ತಳಿಕೆಯಲ್ಲಿರುವ ಇತಿಹಾಸಕಾರರು ಬರೆಯಲು ಧಾವಿಸಬಹುದು.

[signature]

ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೪ ಸಂಚಿಕೆ-೯ ಏಪ್ರಿಲ್ ೨೦೦೩



*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೨೬

*ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**

## ಸಂಪಾದಕೀಯ

## ಬೆಳವಣಿಗೆಗೆ ಚಾಲನೆ ನೀಡಲಾರದ ಸತ್ವಹೀನ ಬಜೆಟ್ - ೨೦೦೩

**ವಾ**ರ್ಷಿಕ ಬಜೆಟ್ ಅರ್ಥವ್ಯವಸ್ಥೆಯಲ್ಲಿ ಮೂಡಿಬರುವ ವೈಪರೀತ್ಯಗಳನ್ನು ಸರಿಪಡಿಸುವ, ಸಾಮಾಜಿಕ ನ್ಯಾಯವನ್ನು ವೃದ್ಧಿಪಡಿಸುವ, ಜನತೆಯ ಉತ್ಪಾದನಾಶಕ್ತಿಯನ್ನು ಹಲವು ಸಂಕೋಲೆಗಳಿಂದ ಬಿಡಿಸಿ ಅದನ್ನು ಅಭಿವೃದ್ಧಿಯತ್ತ ಕೊಂಡೊಯ್ಯುವಂತೆ ಪ್ರೋತ್ಸಾಹಿಸುವ, ಅಂತಹ ಇತರ ಉದ್ದೇಶಗಳನ್ನು ನೆರವೇರಿಸುವ ನಿಟ್ಟಿನಲ್ಲಿ ಬಳಸಬಹುದಾದ ಒಂದು ಪ್ರಬಲ ತಾಂತ್ರಿಕ ಉಪಕರಣ. ಈ ರೀತಿಯ ಸ್ವಾಗತಾರ್ಹ ಬದಲಾವಣೆಗಳನ್ನು ತರದೆ ಅರ್ಥವ್ಯವಸ್ಥೆಯಲ್ಲಿ ಸರಿಪಡಿಸಲಾಗದ ಬಹುಕಾಲೀನ ಆಘಾತವನ್ನೂ ಉಂಟುಮಾಡಬಹುದು. ಆಳುವವರು ಸಮತಾವಾದಿಗಳೇ ಇರಲಿ, ಬಂಡವಳಿಗರೇ ಇರಲಿ ಜನತೆಯ ಹಿತ ಅವರ ಉತ್ಪಾದಕ ಶಕ್ತಿಗಳನ್ನು ವೃದ್ಧಿಪಡಿಸುವುದರಲ್ಲಿದೆ ಎಂಬುದನ್ನು ಅಲ್ಲಗಳೆಯುವಂತಿಲ್ಲ. ಉತ್ಪಾದಕ ಶಕ್ತಿಗಳನ್ನು ಅವುಗಳು ಸಿಲುಕಿಕೊಂಡಿರುವ ಸಂಕೋಲೆಯಿಂದ ಬಿಡಿಸಿ, ಬೆಳವಣಿಗೆಯತ್ತ ದೂಡುವುದು ಎಂದರೆ ಏನು ಎಂಬ ಚಿಂತನೆಯಲ್ಲಿ ಹಲವು ಸಾಮಾಜಿಕ ರಾಜಕೀಯ ಭಿನ್ನಾಭಿಪ್ರಾಯಗಳು ಸಾಧ್ಯವಿದ್ದು, ಅವು ವಿವಿಧ ರಾಜಕೀಯ ಸಿದ್ಧಾಂತಗಳಾಗಬಹುದು. ಆದರೆ ಶಿಕ್ಷಣ, ಆರೋಗ್ಯ, ವಸತಿ ಸೌಕರ್ಯಗಳನ್ನು ಕಲ್ಪಿಸುವುದು ಸಮಾಜದ ಆರ್ಥಿಕ ಉತ್ಪಾದಕತೆಯ ಅಭಿವೃದ್ಧಿಗೆ ಹೊಸ ಶಕ್ತಿ ಕೂಡಿಸಿದಂತೆ ಎಂಬುದು ಶುದ್ಧ ಅರ್ಥಶಾಸ್ತ್ರದ ತಿಳಿವು. ರಾಜಕೀಯವಾಗಿ ಯಾವ ಬೇಳೆಯನ್ನೂ ಬೇಯಿಸಿಕೊಳ್ಳುವ ಅಗತ್ಯವಿಲ್ಲದವರು ಈ ದೃಷ್ಟಿಯ ಆಧಾರದ ಮೇಲೆ ಬಜೆಟನ್ನು, ಸರ್ಕಾರದ ಆರ್ಥಿಕ ನೀತಿಯನ್ನು ವಿಮರ್ಶಿಸಿಯಾರು. ಬಡಜನರ ಉತ್ಪಾದಕ ಸಾಮರ್ಥ್ಯದ ವಿಕಾಸಕ್ಕೆ ಒತ್ತುಕೊಡುವುದನ್ನು ಧರ್ಮ, ದತ್ತಿ, ಸಹಾಯ, ವಿನಾಯ್ತಿ, ದಯೆ ಎಂದೆಲ್ಲಾ ವರ್ಣಿಸಿ ಅವಹೇಳನ ಮಾಡುವವರೊಡನೆ ಚರ್ಚೆಗೆ ನಿಲ್ಲುವುದು ವ್ಯರ್ಥ.

ಜಸವಂತ ಸಿಂಗರು ಬಜೆಟ್ಟಿನಲ್ಲಿ ಬಡ್ಡಿಯ ದರವನ್ನು ಇಳಿಸುವ ಪ್ರಸ್ತಾಪ ಮಾಡುತ್ತಾ ತನ್ನ ಮೊಮ್ಮಗಳ ಭವಿಷ್ಯದ ಹಿತದೃಷ್ಟಿಯಿಂದ ಇಂದು ತಾವು ಅಪ್ರಿಯವಾದರೂ ಈ ಜವಾಬ್ದಾರಿಯುತ ತೀರ್ಮಾನವನ್ನು ಮಾಡಿರುವುದಾಗಿ ಹೇಳಿಕೊಂಡಿದ್ದಾರೆ. ಅವರ ಸ್ವಂತ ಮೊಮ್ಮಕ್ಕಳಿಗೆ ಇದರ ಅಗತ್ಯ ಬರಲಾರದಾದರೂ ಈ ದೃಷ್ಟಿಯನ್ನು ಒಪ್ಪಬೇಕಾದದ್ದೇ! ''ರಾಷ್ಟ್ರೀಯ ಸೃಜನಶೀಲ ಸಾಮರ್ಥ್ಯವನ್ನು ಬಿಡುಗಡೆ ಮಾಡುವುದು'', ''ಇಲ್ಲಿ ನಮ್ಮ ಆರ್ಥಿಕ ಮತ್ತು ಸಾಮಾಜಿಕ ನೀತಿಯ ಕ್ರೋಢೀಕರಣ ಇದೆ.'' ಪ್ರಧಾನಿಯವರು ಕೆಂಪುಕೋಟೆಯ ಮೇಲಿನಿಂದ ಸಾರಿದ ''ನಮ್ಮ ಪ್ರಜೆಗಳ ಜೀವನ ವ್ಯಾಪ್ತಿಯ ಕಳವಳ''ಗಳ ಪರಿಹಾರ ಮಾರ್ಗವನ್ನು ಈ ಬಜೆಟ್‌ನಲ್ಲಿ ಐದು ಅತಿ ಪ್ರಮುಖ ಕ್ಷೇತ್ರಗಳನ್ನು ಗಮನಕ್ಕೆ ತೆಗೆದುಕೊಳ್ಳುವುದರ ಮೂಲಕ ಗುರುತಿಸಿದ್ದೇವೆ– ಎಂಬ ಸಚಿವರ ನುಡಿಮುತ್ತುಗಳಿಗೆ ಸಂಬಂಧಪಟ್ಟಂತೆ ಬಡತನ ನಿರ್ಮೂಲನ, ಆರೋಗ್ಯ, ಶಿಕ್ಷಣ, ವಸತಿ ಮತ್ತು ಉದ್ಯೋಗ ಕ್ಷೇತ್ರಗಳನ್ನು ಪಟ್ಟಿಮಾಡಲಾಗಿದೆ.

ಬಡತನ ರೇಖೆಯಡಿ ಇರುವ ಶೇ. ೩೦ಕ್ಕೂ ಹೆಚ್ಚಿನ ಜನರ ಹಸಿವಿನ ಪರಿಹಾರಕ್ಕೆ ಅಂತ್ಯೋದಯ ಅನ್ನ ಯೋಜನೆಯಡಿ ಇನ್ನೂ ಐವತ್ತು ಲಕ್ಷ ಕುಟುಂಬಗಳನ್ನು ೫೦೭ ಕೋಟಿ ರೂಪಾಯಿಗಳ ವೆಚ್ಚದಲ್ಲಿ ಸೇರಿಸಿಕೊಳ್ಳುವುದು ಒಂದು ಯೋಜನೆ. ಸರ್ಕಾರದ ಕಣಜದಲ್ಲಿ ಧಾನ್ಯ ಕೊಳೆಯುತ್ತಿದ್ದರೂ ಈ ಅಲ್ಪ ಪ್ರಯತ್ನ ಸಮಸ್ಯೆಯ ಪರಿಹಾರಕ್ಕೆ ಹೇಗೆ ಸಾಕು? ಗ್ರಾಮೀಣ ಹಾಗೂ ಬಡನಗರವಾಸಿಗಳ ವಸತಿ ಕುರಿತು, ಪ್ರಾಥಮಿಕ ಶಿಕ್ಷಣ ಕುರಿತು ಇಲ್ಲಿ ಯಾವ ಚಿಂತನೆಯೂ ಇಲ್ಲ. ನಗರ ಪ್ರದೇಶದ ಖಾಸಗೀ ಶಿಕ್ಷಣಕ್ಕೆ ಒತ್ತುಕೊಟ್ಟು ಅದನ್ನು ಬಡಜನರ ಶಿಕ್ಷಣವೆಂದು ಹೇಳುವುದು ಸಮರ್ಥನೀಯವಲ್ಲ. ಪ್ರಾಥಮಿಕ ಆರೋಗ್ಯ ಕ್ಷೇತ್ರ ವಿಕಾಸಕ್ಕೆ ಇಲ್ಲಿ ಏನೂ ಆದ್ಯತೆಯಿಲ್ಲ. ಚಿಕಿತ್ಸೆ ಅಗತ್ಯವಿದ್ದವರು ದಿನಕ್ಕೆ ಒಂದು ರೂಪಾಯಿ ಆರೋಗ್ಯ ವಿಮೆಗೆ ಕೊಡಲಿ ಎನ್ನುವುದು ಬಡವರನ್ನು ಕುರಿತ ಕ್ರೂರ ವಿಡಂಬನೆ ಎನಿಸುತ್ತದೆ. ದೇಶದ ಜನರ ಆರೋಗ್ಯವನ್ನು ರಕ್ಷಿಸಲಾಗದಿದ್ದರೂ ಪರದೇಶದ ರೋಗಿಗಳನ್ನು ಬರಮಾಡಿಕೊಂಡು ಚಿಕಿತ್ಸೆ ನೀಡಿ, ಹಣ ಸಂಪಾದಿಸುವ ವ್ಯವಹಾರವನ್ನು ಬಜೆಟ್ ಮಂಡಿಸಿದೆ. ಮಧ್ಯಮ ವರ್ಗದವರ, ಅದರಲ್ಲೂ ವೇತನ ಪಡೆಯುವವರಿಗೆ (ಪಿಂಚಣಿದಾರರೂ ಇದೇ ಗುಂಪಿನವರಾಗಿರುವುದನ್ನು ಗಮನಿಸಿ) ೬೦೦೦ ಕೋಟಿ ನೇರ ತೆರಿಗೆ ವಿನಾಯಿತಿಗಳನ್ನು ಘೋಷಿಸಿ, ಅದೇ ಕಾಲದಲ್ಲಿ ಸಾರ್ವಜನಿಕವಾಗಿ ಎಲ್ಲರ ಮೇಲೆ ಪರಿಣಾಮ ಬೀರುವ ರೂ. ೬,೦೦೦ ಕೋಟಿಯಷ್ಟು ಅಪರೋಕ್ಷ ತೆರಿಗೆ ವಿಧಿಸಲಾಗಿದೆ. ಇದಲ್ಲದೆ ಶೇ. ೮ರ ಸೇವಾಶುಲ್ಕ ಜೀವನದ ಏಳೆಂಟು ಕ್ಷೇತ್ರಗಳನ್ನು ತಟ್ಟಲಿದೆ. ಇದು ನಮ್ಮ ಅಮಾಯಕ ಜನತೆಯ ಬಗ್ಗೆ ಪ್ರಧಾನಿಯವರ ಕಳಕಳಿಯ ವೈಖರಿ! ವರ್ಷಕ್ಕೆ ಒಂದು ಕೋಟಿ ಉದ್ಯೋಗ ಸೃಷ್ಟಿಸುವೆವು ಎಂದವರು ಅದನ್ನು ಸಂಪೂರ್ಣವಾಗಿ ಮರೆತಿದ್ದಾರೆ. ಈ ಬಜೆಟ್ಟಿನಲ್ಲಿ ಮೂಲಭೂತ ಸೌಕರ್ಯಗಳೆಂಬ ಹೆಸರಿನಲ್ಲಿ ವಾಣಿಜ್ಯಕ್ಕೆ ಉಪಯೋಗವಾಗುವ ಹೆದ್ದಾರಿಗಳ, ಬಂದರುಗಳ, ವಿಮಾನ ನಿಲ್ದಾಣಗಳ, ಅಂತರರಾಷ್ಟ್ರೀಯ ಮಟ್ಟದ ವೈಭವಪೂರ್ಣ ಸಭಾಭವನಗಳ ರಚನೆಯ ಮಾತಿದ್ದು ಇದಕ್ಕಾಗಿ ರೂ. ೬೦,೦೦೦ ಕೋಟಿ ರೂಪಾಯಿಗಳ ವೆಚ್ಚ ಎನ್ನಲಾಗಿದೆ. ಈ ಮೂಲಕ ಅಪಾರ ಉದ್ಯೋಗ ಸೃಷ್ಟಿಯಾಗುತ್ತದೆ ಎಂದು ಹೇಳುತ್ತಾ, ಈ ವರ್ಷ ಸರ್ಕಾರದ ಕಡೆಯಿಂದ ಇದಕ್ಕೆ ಎರಡು ಸಾವಿರ ಕೋಟಿ ರೂ. ವೆಚ್ಚ ಎಂದು ಹೇಳಿದರೆ ಏನು ಸಾಧಿಸಿದಂತಾಯ್ತು? ಈ ಬಜೆಟ್ಟಿನಲ್ಲಿ ಇವಿಷ್ಟೇ ಸಾಧಾರಣ ಜನತೆಗೆ ಸಂಬಂಧಪಡಬಹುದು ಎಂಬ ವಿಷಯಗಳಿದ್ದು, ಈ ಸರ್ಕಾರದ ಬಡಜನ ಕುರಿತ ಕಳಕಳಿ ಪೊಳ್ಳು ಎಂಬುದು ಸ್ಪಷ್ಟವಾಗುತ್ತದೆ.

ಪರಿಸ್ಥಿತಿಗೆ ಬರ, ಕೃಷಿಕ್ಷೇತ್ರದ ವೈಫಲ್ಯ, ಇರಾಕ್ ಯುದ್ಧ ಇವುಗಳ ಬಗ್ಗೆ ಹೇಳುತ್ತಾ ಹೋಗುವುದು ಜಾಣ್ಮೆಯ ಮಾತು. ಕೃಷಿಕ್ಷೇತ್ರದ ವೈಫಲ್ಯ ಹತ್ತು ವರ್ಷಗಳಿಂದ ಈ ಕ್ಷೇತ್ರಕ್ಕೆ ಯಾವ ಮಹತ್ವದ ನೀತಿಯನ್ನೂ ಪಾಲಿಸದೆ, ಹಣ ಹೂಡಿಕೆ ಹರಿಯದೆ ಆಗಿರುವ ಪರಿಣಾಮ. ಕಣಜದ ತುಂಬ ಧಾನ್ಯ ತುಂಬಿರಲು ಬರ ಕಾರಣವೆಂದು ಯಾರೂ ಒಪ್ಪುವುದಿಲ್ಲ. ಕೈಗಾರಿಕಾ ಕ್ಷೇತ್ರದಿಂದ ಮಹಾಕ್ರಾಂತಿ ಬಯಸಿ ಅದಕ್ಕೇ ಗಮನ ನೀಡುತ್ತಾ ಬಂದಿದ್ದು, ಆ ಕ್ಷೇತ್ರ ವಾಸ್ತವದಲ್ಲಿ ವಾರ್ಷಿಕ ಸರಾಸರಿ ಶೇ. ೫ರಷ್ಟು ಪ್ರಗತಿಯನ್ನೂ ಸಾಧಿಸಲಾಗಿಲ್ಲ. ಇದಕ್ಕೆ ಕಾರಣ ಆ ಕ್ಷೇತ್ರವನ್ನು ಬೆಂಬಲಿಸಬೇಕಾದ ಬಹುಭಾಗ ಗ್ರಾಮೀಣ ಜನ ಬಡವರು. ಇವರನ್ನು ಗಮನಿಸದೆ ಅಂತರರಾಷ್ಟ್ರೀಯ ಮಟ್ಟದ ರಫ್ತು-ಆಮದುಗಳಿಂದಲೇ ತಾನು ಬದುಕುತ್ತೇನೆಂದು ಕೈಗಾರಿಕಾ ಕ್ಷೇತ್ರ ಇನ್ನೂ ನಂಬಿರುವುದು ಆಶ್ಚರ್ಯಕರ. ಜಗತ್ತಿನಾದ್ಯಂತ ಅತಿ ಶ್ರೀಮಂತ ರಾಷ್ಟ್ರಗಳಲ್ಲೂ ಉದ್ಯಮ ಕ್ಷೇತ್ರ ಬದುಕಿರುವುದು ಆಂತರಿಕವಾಗಿ ಅವರ ಉತ್ಪಾದನೆಯ ಶೇ. ೮೦ರಷ್ಟು ಬಳಕೆಯಾಗುವುದರಿಂದ. ಅಪಾರ ಜನತೆಯ ಬೇಡಿಕೆಯ ಸಾಮರ್ಥ್ಯ ಬೆಳೆಯಬೇಕಾದರೆ ಉದ್ಯೋಗ ಸೃಷ್ಟಿಯಾಗಬೇಕು. ಬರೇ ಕಾರು, ಏರ್‌ಕಂಡೀಷನರ್‌ಗಳ ವ್ಯಾಪಾರದಿಂದ ಒಟ್ಟಾರೆ ಆರ್ಥಿಕತೆ ಬೆಳೆಯುವುದಿಲ್ಲ. ಹೀಗಾಗಿ ಈ ಬಜೆಟ್ ಒಂದು ವರ್ಗದ ಪರವಾಗಿದ್ದೂ, ಸಮಸ್ತಜನ ಪರವೆಂಬ, ಬೆಳವಣಿಗೆಗೆ ಪ್ರಬಲ ಒತ್ತುಕೊಡುವ ಬಜೆಟ್ ಎಂದು ನಂಬಿಸಲು ಪ್ರಯತ್ನಪಡುತ್ತದೆ. ಪರಿಣಾಮದಲ್ಲಿ ಯಾರ ಹಿತವನ್ನೂ ಸಾಧಿಸಲಾರದ ಬರಿ ಬೆಡಗಿನ ಬಜೆಟ್ಟಾಗುತ್ತದೆ. ಜಸ್ವಂತರು ಹೇಳಿರುವ ಒಂದು ಸತ್ಯವಾದ ಮಾತೆಂದರೆ ''ಈ ಬಜೆಟ್ ನಮ್ಮ ಪಕ್ಷದ ಸಾಮಾಜಿಕ ನಿಲುವಿನ ಅಡಕ!'' ನಮ್ಮ ಮೊಮ್ಮಕ್ಕಳ ಭವಿಷ್ಯ ಇನ್ನೂ ಆತಂಕಕಾರಿಯೇ. ತೆರಿಗೆಗಳನ್ನು ಘೋಷಿಸುವುದು, ಹಿಂದಕ್ಕೆ ತೆಗೆದುಕೊಳ್ಳುವ ರಾಜಕೀಯ ಗಂಭೀರ ಚರ್ಚೆಗೆ ತಕ್ಕ ವಿಷಯವಲ್ಲ.

**– *ಕೆ. ಎಸ್. ಪಾರ್ಥಸಾರಥಿ***

# ಮಾನವ ಜನಾಂಗದ ಶತ್ರು ಅಮೆರಿಕಾ ಸರ್ಕಾರ

ಇರಾಕಿನ ಬಳಿ ಮಾರಕಾಸ್ತ್ರಗಳು ಎಷ್ಟಿದ್ದವೋ ತಿಳಿಯದು; ಈಗಂತೂ ಅವು ನಾಶವಾಗಿವೆ. ಇನ್ನೂ ಏನಾದರೂ ಉಳಿದಿದ್ದರೆ ಅವನ್ನು ಬಳಸಿ ಅಮೆರಿಕಾದ ಮೇಲೆ ಸಮರ ಸಾರಲು ಸದ್ದಾಂಗೆ ಸಾಧ್ಯವಿಲ್ಲ. ಹಾಗೇನಾದರೂ ಸಾರಿದರೆ ಇರಾಕನ್ನು ನೂರು ಬಾರಿ ಬಡಿದುಹಾಕಲು ಬುಷ್‌ಗೆ ಮಿಲಿಟರಿ ಸಾಮರ್ಥ್ಯವಿದೆ. ಒಮ್ಮೆ ಇರಾಕಿಗೆ ಅಮೆರಿಕಾದ ಪ್ರಾಬಲ್ಯದ ಪರಿಚಯ ಆಗಿದೆ. ಹಾಗಿದ್ದರೆ ಇರಾಕಿನ ಮೇಲೆ ಯುದ್ಧ ಏಕೆ ? ಶಸ್ತ್ರಾಸ್ತ್ರಗಳನ್ನು ವಿಶ್ವಸಂಸ್ಥೆಯ ಮೂಲಕ ನಾಶಮಾಡಿಸಿ, ನಿರಾಯುಧವಾದ ಇರಾಕನ್ನು ವಿಶ್ವಸಂಸ್ಥೆಯ ಭದ್ರತಾ ಮಂಡಲಿಯ ತೀರ್ಮಾನದ ವಿರುದ್ಧವಾಗಿ ಆಕ್ರಮಣ ನಡೆಸುವ ಅಮೆರಿಕಾ ರಕ್ತಪಿಪಾಸು ಮತ್ತು ತೈಲಪಿಪಾಸು. ಇರಾಕಿನಲ್ಲಿ ಪ್ರಜಾಪ್ರಭುತ್ವವಿಲ್ಲವೆನ್ನುವ ಅಮೆರಿಕಾದ ಅಧ್ಯಕ್ಷ ಯಾವ ಪ್ರಜಾಪ್ರಭುತ್ವವನ್ನು ಮಾನ್ಯ ಮಾಡುತ್ತಾನೆ ? ಪ್ರಪಂಚದ ಎಲ್ಲ ರಾಷ್ಟ್ರಗಳಲ್ಲೂ ಯುದ್ಧದ ವಿರುದ್ಧ ದನಿಯೆತ್ತಿರುವವರು ಪ್ರಜೆಗಳು. ಅವರ ಅಭಿಪ್ರಾಯಕ್ಕೆ ಮೊದಲು ಬುಷ್ ತಲೆ ಬಾಗಿದರೆ ಆಮೇಲೆ ಆತನ ಪ್ರಜಾಪ್ರಭುತ್ವದ ಮಾತಿಗೆ ಅರ್ಥ ಬಂದೀತು.

ತೋರಿಕೆಗಾದರೂ ಒಂದು ಯುದ್ಧಕ್ಕೆ ಕೆಲವು ಕಾರಣಗಳನ್ನು ನೀಡಲಾಗುತ್ತದೆ. ಆದರೆ ಇರಾಕ್ ಪ್ರಸಂಗದಲ್ಲಿ ಬಹಿರಂಗವಾಗಿ, ದುರಹಂಕಾರದಿಂದ, ಅಮೆರಿಕಾ ಎಲ್ಲ ನೀತಿಗಳನ್ನು ಕೈಬಿಟ್ಟಿದೆ. ಸದ್ದಾಂ ತನ್ನ ದೇಶದ ಜನರನ್ನು ಕೊಂದಿದ್ದಾನೆಂದು ಆಪಾದನೆ ಮಾಡುವ ಅಮೆರಿಕಾ ಬೇರೆ ದೇಶಗಳ ಲಕ್ಷಗಟ್ಟಲೆ ಜನಗಳನ್ನು ಕೊಂದಿದೆ. ಬೇರೆ ದೇಶದವರನ್ನು ಮಾತ್ರವೇ ಕೊಲ್ಲುವವನು ಶ್ರೇಷ್ಠನೇನು ? ವಿಪರ್ಯಾಸವೆಂದರೆ ಈವರೆಗೆ ಅಮೆರಿಕಾದ ಪಿತೂರಿಗೆ ಬಲಿಯಾಗಿದ್ದ ಅಂಗೋಲ ಯುದ್ಧದಲ್ಲಿ ಆ ದೇಶಕ್ಕೆ ಬೆಂಬಲ ನೀಡುತ್ತದಂತೆ. ಅಂತೆಯೇ ಮೆಕ್ಸಿಕೊ ಮತ್ತು ಚಿಲಿ. ಬುಷ್-ಬ್ಲೇರ್ ಸೇರಿದಂತೆ ನಾಲ್ಕು ಮಂದಿ ಅಂತರರಾಷ್ಟ್ರೀಯ ದರೋಡೆಕೋರರು (ಸ್ಪೇನ್ ಮತ್ತು ಪೋರ್ಚುಗಲ್ ಇನ್ನಿತರ ದೇಶಗಳು) ಹಿಂದಿನ ವಸಾಹತುಶಾಹಿ ಲೂಟಿಯ ಸವಿಯನ್ನು ನೆನೆದು ಮತ್ತೆ ಇರಾಕಿನ ತೈಲ ಲಪಟಾಯಿಸಹೊರಟಿದ್ದಾರೆ. ಭಾರತವನ್ನು ಅಮೆರಿಕಾದ ಪೈಶಾಚಿಕ ಕೃತ್ಯಕ್ಕೆ ಶಾಮೀಲಾಗಿಸುವ ಕೇಂದ್ರ ಸರ್ಕಾರದ ನೀತಿಯು ಅತಿ ನೀಚ ದ್ರೋಹ ಎನಿಸಿಕೊಳ್ಳುತ್ತದೆ. ನಮ್ಮ ದೇಶವನ್ನು ಅಮೆರಿಕಾದ ದಾಸ್ಯಕ್ಕೆ ತಳ್ಳುವ ನಾಯಕರು ಘೋರ ಪ್ರಜಾವಂಚಕರು.

ತನ್ನ ದೇಶದ ಸಂಪತ್ತು ತನಗೇ ಮುಳುವಾಗುವುದು ಇರಾಕಿನ ದುರಂತ. ಅಷ್ಟೊಂದು ದೊಡ್ಡ ಪ್ರಮಾಣದಲ್ಲಿ ತೈಲ ಅಲ್ಲಿರದಿದ್ದರೆ ಹದ್ದುಕಣ್ಣಿನ ಬುಷ್ ಅದರತ್ತ ಅಸಡ್ಡೆಯಿಂದಿರುತ್ತಿದ್ದ. ಒಂದು ಶತಮಾನಕ್ಕೂ ಹೆಚ್ಚುಕಾಲ ಸಂಪತ್ತಿನ ಹರಣ ಮತ್ತು ದಬ್ಬಾಳಿಕೆಗೆ ಇರಾಕ್ ತುತ್ತಾಗಿದೆ. ಹಿಂದೆ ಆಟೋಮನ್ ಟರ್ಕಿಷ್ ಸಾಮ್ರಾಜ್ಯದ ಭಾಗವಾಗಿದ್ದ ಇರಾಕಿನ ಮೂರು ಪ್ರಾಂತ್ಯಗಳು ಉತ್ತರದ ಮೋಸುಲ್, ಮಧ್ಯದ ಬಾಗದಾದ್ ಮತ್ತು ದಕ್ಷಿಣದ ಬಸ್ರಾ; ಸಾಮ್ರಾಜ್ಯ ನಶಿಸಿದಾಗ ಅವು ಬ್ರಿಟನ್ ಮತ್ತು ಫ್ರಾನ್ಸ್‌ನ ವಶಕ್ಕೆ ಬಂದುವು. ಮೊದಲನೆ ಮಹಾಯುದ್ಧದ ಕಾಲದಲ್ಲಿ ಅಲ್ಲಿಯ ತೈಲನಿಕ್ಷೇಪಗಳನ್ನು ಸ್ವಾಧೀನಪಡಿಸಿಕೊಳ್ಳಲು ಬ್ರಿಟನ್ ಸೈನ್ಯವನ್ನು ಕಳಿಸಿತು. ಆಕಸ್ಮಿಕವೆಂದರೆ ಆ ಸೈನ್ಯದಲ್ಲಿ ಭಾರತೀಯ ಸೈನಿಕರೇ ಹೆಚ್ಚಾಗಿದ್ದರು. ಯುದ್ಧದ ನಂತರ ಇರಾಕ್ ಬ್ರಿಟನ್ನಿನ ಆಳ್ವಿಕೆಗೆ ಒಳಪಟ್ಟಿತು. ಕೆಲಸಕ್ಕೆ ಬಾರದ ಒಬ್ಬನನ್ನು ದೊರೆಯನ್ನಾಗಿ ಹೇರಿದ ಬ್ರಿಟನ್ ಆಗ್ಗೆ ಒಂದು ಟನ್ ತೈಲಕ್ಕೆ ನಾಲ್ಕು ಷಿಲಿಂಗ್ (ಅಂದರೆ ಸುಮಾರು ನಾಲ್ಕು ರೂಪಾಯಿ) ಬೆಲೆ ನೀಡುತ್ತಿತ್ತು!

ಸೈನ್ಯವು ಮಧ್ಯಪ್ರವೇಶ ಮಾಡಿ ಇರಾಕನ್ನು ಗಣರಾಜ್ಯವನ್ನಾಗಿ ಘೋಷಿಸಿದ್ದು ೧೯೫೮ರಲ್ಲಿ. ಅದಕ್ಕೆ ಮುಂಚೆ ದೊರೆ ಫೈಸಲ್ ಇದ್ದಾಗ ಇಡೀ ಕಾರುಬಾರು ಬ್ರಿಟನ್ನಿನ ಹೈಕಮೀಷನರ್‌ದೇ ಆಗಿತ್ತು. ಕುರ್ದ್‌ಗಳಿಗೆ ಘೋರ ಅನ್ಯಾಯ ನಡೆದಿದ್ದು ಆಗ. ಅವರು ವಾಸಿಸಿದ್ದ ಭೂಭಾಗವನ್ನು ಟರ್ಕಿ, ಇರಾಕ್, ಸಿರಿಯಾ ಮತ್ತು ಇರಾನ್‌ಗೆ ಹಂಚಿಬಿಡಲಾಯಿತು; ಈಗ ಬ್ಲೇರ್ ಅದೇ ಕುರ್ದರಿಗಾಗಿ ಮೊಸಳೆ ಕಣ್ಣೀರು ಸುರಿಸುತ್ತಾನೆ! ೧೯೨೮ರ ವೇಳೆಗೆ ಎಕ್ಸಾನ್ ಮತ್ತು ಮೋಬಿಲ್ ಕಂಪನಿಗಳು ಸುಮಾರು ಶೇ. ೨೪ರಷ್ಟು ತೈಲದ ಸಂಪತ್ತನ್ನು ತಮ್ಮದು ಮಾಡಿಕೊಂಡವು. (ಅವಕ್ಕೆ ಆಗ ಜೆರ್ಸಿ ಸ್ಟ್ಯಾಂಡರ್ಡ್ ಮತ್ತು ಸೊಕೋನಿ ಎಂಬ ಹೆಸರುಗಳಿದ್ದವು). ೧೯೪೧ರಲ್ಲಿ ದೊರೆಯ ವಿರುದ್ಧ ಬಂಡೆದ್ದ ಸೈನ್ಯವು ಬ್ರಿಟನ್ನನ್ನು ಒದ್ದೋಡಿಸಲು ಇಟಲಿ-ಜರ್ಮನಿಗಳ ಪರ ಸೇರುವ ಹುನ್ನಾರದಲ್ಲಿತ್ತು. ಆದರೆ ಬ್ರಿಟನ್ ದೊರೆಯನ್ನು ರಕ್ಷಿಸಿ ನೂಕಿ ಅಸ್-ಸಯೀದ್ ಎಂಬ ಬಾಲಬಡುಕನನ್ನು ಪ್ರಧಾನಿಯನ್ನಾಗಿ ಮಾಡಿತು. ಇರಾಕಿನಲ್ಲಿ ಸಂಪತ್ತಿನ ದೋಚುವಿಕೆಯ ವಿರುದ್ಧ ಪ್ರಜೆಗಳ ಪ್ರತಿಭಟನೆ ಸತತವಾಗಿ ಮುನ್ನಡೆದಿತ್ತು. ೧೯೫೨ರಲ್ಲಿ ವಿದ್ಯಾರ್ಥಿಗಳ ದಂಗೆಯನ್ನು ಹತ್ತಿಕ್ಕಲು ಬ್ರಿಟನ್ ಸೈನ್ಯವನ್ನು ಉಪಯೋಗಿಸಿತ್ತು. ಇಷ್ಟೆಲ್ಲಾ ನಡೆದದ್ದು ತೈಲದ ಲೂಟಿಗಾಗಿ. ಈಗಲೂ ಬುಷ್-ಬ್ಲೇರ್‌ಗಳಿಗೆ ಇರುವ ಆಕಾಂಕ್ಷೆ ಅದೇ : ತೈಲದ ಲೂಟಿ.

೧೯೫೩ರಲ್ಲಿ ಇರಾನಿನ ತೈಲವನ್ನು ತನ್ನ ದೇಶದ ಹತೋಟಿಗೆ ತೆಗೆದುಕೊಂಡ ಪ್ರಧಾನಿ ಮೊಸ್ಸಾದೆಕ್‌ನನ್ನು ಕೊಂದಿದ್ದು ಅಮೆರಿಕಾ ಸರ್ಕಾರ. ಈಗಲೂ ಇರಾಕಿನ ವಿರುದ್ಧ ಯುದ್ಧ ಹೂಡಲು ಕಾರಣವಾದ ಉಪಾಧ್ಯಕ್ಷ ಚೇನೀ, ರಕ್ಷಣಾ ಸಚಿವ ರಮ್ಸ್‌ಫೆಲ್ಡ್ ಮತ್ತು ರಾಷ್ಟ್ರೀಯ ರಕ್ಷಣಾ ಸಲಹೆಗಾರ್ತಿ ಕೊಂಡಲಿಸ್ಸಾ, ಮೂವರೂ ದೊಡ್ಡ ತೈಲ ಕಂಪನಿಗಳ ಮುಖ್ಯಸ್ಥರು. ೧೯೫೮ರಲ್ಲಿ ಇರಾಕ್ ಆಕ್ರಮಣಕ್ಕೆಂದು ಅಮೆರಿಕಾ ಮತ್ತು ಬ್ರಿಟನ್ ಸೈನ್ಯಗಳು ಲೆಬನಾನ್ ಮತ್ತು ಜೋರ್ಡಾನ್‌ಗಳಿಗೆ ಬಂದಿಳಿದಿದ್ದುವು. ೧೯೬೮ರಲ್ಲಿ ಸದ್ದಾಂ ಉಪಾಧ್ಯಕ್ಷನಾಗಿ, ೧೯೭೨ರಲ್ಲಿ ತೈಲ ಕಂಪನಿಗಳ ರಾಷ್ಟ್ರೀಕರಣಕ್ಕೆ ಕಾರಣನಾದ. ಆಗಿನಿಂದ ಆತನ ಮೇಲೆ ಅಮೆರಿಕಾ ವಿಷ ಕಾರುತ್ತಲೇ ಬಂದಿದೆ. ಬೇರೆಯವರ ಸಂಪತ್ತು ಕಸಿದುಕೊಳ್ಳದೆ ಜೀವಿಸುವ ಸಂಸ್ಕೃತಿಗೆ ಅಮೆರಿಕಾ ಯಾವಾಗ ಬದ್ಧವಾಗುತ್ತದೆಂಬುದು ವಿಶ್ವದ ಮುಂದಿರುವ ಇಂದಿನ ಮೊದಲ ಪ್ರಶ್ನೆ.

ಭಯೋತ್ಪಾದನೆಯನ್ನು ಈ ಎಲ್ಲದರ ಹಿನ್ನೆಲೆಯಲ್ಲಿ ಹುಟ್ಟುಹಾಕಿದ್ದು ಅಮೆರಿಕಾ. ತನ್ನ ಅನಿಷ್ಟ ದುರ್ವರ್ತನೆಯಿಂದ ಇನ್ನೂ ಹೆಚ್ಚು ಭಯೋತ್ಪಾದಕರನ್ನು ಸೃಷ್ಟಿಸುವ ಅಮೆರಿಕಾ ಬರುವ ದಿನಗಳಲ್ಲಿ ತನ್ನ ಪ್ರಜೆಗಳನ್ನು ಎಲ್ಲ ದೇಶಗಳಲ್ಲೂ ಹತ್ಯೆಗೆ ಗುರಿಯಾಗಿಸಿದರೆ ಆಶ್ಚರ್ಯವಿಲ್ಲ. ಆಗ ಭಯೋತ್ಪಾದಕರನ್ನು ದೂರುವ ಮೊದಲು ಅಮೆರಿಕಾದ ಕುಕೃತ್ಯಗಳು ಹೇಗೆ ಭಸ್ಮಾಸುರರಿಗೆ ಜನ್ಮ ನೀಡಿತೆಂಬುದನ್ನು ಸ್ಮರಿಸಬೇಕಾಗುತ್ತದೆ. ಅಮೆರಿಕಾದ ಇಬ್ಬರು ರಾಜತಾಂತ್ರಿಕ ಅಧಿಕಾರಿಗಳು ಇತ್ತೀಚೆಗೆ ರಾಜಿನಾಮೆ ನೀಡಿದರು. ಅಮೆರಿಕಾವನ್ನು ವಿಶ್ವದೆಲ್ಲೆಡೆ ಜನರು ದ್ವೇಷಿಸುವಂತೆ ಮಾಡುತ್ತಿರುವ ಬುಷ್ ನೀತಿಗೆ ರೋಸಿಹೋಗಿ ರಾಜಿನಾಮೆ ನೀಡುತ್ತಿರುವುದಾಗಿ ಅವರು ತಿಳಿಸಿದರು. ಅಮೆರಿಕಾದ ಅನಾಗರಿಕ, ಮೃಗೀಯ ದುಂಡಾವರ್ತಿಯನ್ನು ಖಂಡಿಸಿರುವ ಅವರಂಥವರನ್ನು ಮಾತ್ರವೇ ಭಾರತದ ಜನ ಗೌರವದಿಂದ ಕಾಣಲು ಸಾಧ್ಯ.

ವಿಶ್ವಸಂಸ್ಥೆಯನ್ನು ಸಹ ಲಘುವಾಗಿ ಕಾಣುವ, ಶಸ್ತ್ರ ತಪಾಸಣೆಯ ಹೆಸರಿನಲ್ಲಿ ಬೇಹುಗಾರರನ್ನು ಇರಾಕಿನೊಳಕ್ಕೆ ತೂರಿಸುವ ಅಮೆರಿಕಾದ ನೀತಿಗೆಟ್ಟ ನಡತೆಗೆ ಪ್ರತಿಯಾಗಿ ಭಾರತವು ತೆಗೆದುಕೊಳ್ಳಬೇಕಾದ ದಿಟ್ಟ ಕ್ರಮಗಳು ಮೂರು : (ಅ) ಅಮೆರಿಕಾವನ್ನು ಭಯೋತ್ಪಾದಕ ರಾಷ್ಟ್ರವೆಂದು ಘೋಷಿಸಲು ವಿಶ್ವಸಂಸ್ಥೆಯಲ್ಲಿ ಠರಾವನ್ನು ಮಂಡಿಸುವುದು; (ಆ) ಅಲಿಪ್ತ ರಾಷ್ಟ್ರಗಳು ಸದ್ಯಕ್ಕೆ ಅಮೆರಿಕಾದೊಡನೆ ರಾಜತಾಂತ್ರಿಕ ಸಂಬಂಧ ಕಡಿದುಕೊಳ್ಳಬೇಕೆಂಬ ಸಲಹೆಯನ್ನು ಮುಂದಿಡುವುದು; ಮತ್ತು (ಇ) ಸದ್ಯಕ್ಕೆ ಅಲಿಪ್ತ

೭ನೇ ಪುಟಕ್ಕೆ.....

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೦೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☎ : ೪೪೧೦೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☎ : ೪೨೪೯೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☎ : ೪೨೪೩೦೨




**ಮಾ**ಸಿಕ ಪತ್ರಿಕೆಗಳಲ್ಲೇ 'ಹೊಸತು' ಪತ್ರಿಕೆಯು ತನ್ನದೇ ಆದ ವೈಶಿಷ್ಟ್ಯ ಪೂರ್ಣ ಲೇಖನ-ಮಜಲುಗಳ ಸಂಗಮದೊಂದಿಗೆ ಛಾಪು ಮೂಡಿಸಿದೆ. ಸಾಮಾನ್ಯ ಓದುಗರನ್ನೂ ಕೂಡ ವೈಚಾರಿಕತೆಯ ವರ್ತುಲದಲ್ಲಿ ಸೆಳೆಯುತ್ತದೆ. ಶ್ರೀ ಸಿದ್ಧರಾಜು ರವರು ಶಬರಿಮಲೆಯ ಮಕರಜ್ಯೋತಿಯ ಬೆಳಕಿನ ಪವಾಡ ರಹಸ್ಯ ಬಯಲು ಮಾಡಿದ ಲೇಖನ ಅಚ್ಚರಿಪಡುವಂತಹದು. ಮೂಢಮತಿಯ ಭಕ್ತರು ಧಾರ್ಮಿಕ ವಂಚನೆಗೆ ಬೇಸ್ತು ಬೀಳುವ ಪರಿಪಾಠ ಇನ್ನಾದರೂ ಕೈಬಿಡಬೇಕು. ವೈಚಾರಿಕ ಪ್ರಜ್ಞೆಯನ್ನು ಬಿಂಬಿಸುವ ಲೇಖನ ಸ್ವಾಗತಾರ್ಹವಾಗಿದೆ.

ಶ್ರೀ ಎಸ್. ಎಸ್. ಹಿರೇಮಠರ ಗೋವಿನ ಹಾಡಿನ ಪರಾಮರ್ಶೆಯ ಲೇಖನ ಹಾಗೂ ಡಾ|| ಸಿ. ವಿ. ವತ್ಸಲಾರವರು ಬರೆದ ''ಮಂದ್ರ'' ಕಾದಂಬರಿಯ ವಿಮರ್ಶೆಯ ಅರ್ಥ ಪೂರ್ಣ ಲೇಖನ ಮನಸ್ಸಿನಲ್ಲಿ ಸದಾ ಉಳಿಯುವಂತಹವು.

ಭಾನಾಪುರ — *ಶಂಕರ ಕೆ. ಪತ್ತಾರ*

ಸಿದ್ಧರಾಜುರವರ ''ಶಬರಿಮಲೆಯ ಮಕರಜ್ಯೋತಿಯ ಬೆಳಕಿನ ರಹಸ್ಯ'' ಅಪ್ಪಟ ಸುಳ್ಳಿನ ಕಂತೆಯನ್ನು ಬಯಲಿಗೆಳೆದಿದೆ. ಜನರ ಮೌಢ್ಯ, ಅಂಧಾನುಕರಣೆ, ಮೂಢನಂಬಿಕೆಗಳನ್ನು ಹೊಡೆದೋಡಿಸಿ ವೈಜ್ಞಾನಿಕ ಮನೋಭಾವನೆ ಬಿತ್ತಬೇಕೆಂದು ಸಂವಿಧಾನದ ರಾಜ್ಯ ನಿರ್ದೇಶಕ ತತ್ವಗಳು ಒತ್ತಾಯಿಸುತ್ತವೆ.

ಸೇಡಂ — *ಅಣ್ಣಾಸಾಗರ್ ಬಿ. ಆರ್.*

'ಗೋವಿನ ಹಾಡು - ಒಂದು ಪರಾಮರ್ಶೆ' ಲೇಖನದಲ್ಲಿ ಲೇಖಕರು 'ಗೋವಿನ ಹಾಡಿನ' ಇನ್ನೊಂದು ಮುಖವನ್ನು ಪರಿಚಯಿಸುವಲ್ಲಿ ಸಫಲರಾಗಿದ್ದಾರೆ.

ಲೇಖಕರೆನ್ನುವ, 'ಸತ್ಯವಾಕ್ಯ, ಮಾತು ಕೊಡುವುದು ಇದೆಲ್ಲ ಕಾಲ ದೇಶಗಳಿಗೆ ಸಾಪೇಕ್ಷ ವಾಗಿರುವಂಥದು' ಎಂಬ ಮಾತು ಮನ ಮುಟ್ಟುವಂತಿತ್ತು. ಬಹುಶಃ ಈವತ್ತು ನಮ್ಮ ಮೌಲ್ಯ ಶಿಕ್ಷಣ ಪ್ರಾಚೀನ ಕಾಲ್ಪನಿಕ ವ್ಯಕ್ತಿಗಳ ಕಥೆ, ಚಾರಿತ್ರಿಕ ಘಟನೆಗಳ ಸುತ್ತ ಆವರಿಸಿರದೆ ವಾಸ್ತವ ಬದುಕಿಗೆ ಪೂರಕವಾಗುವ ಸಂದರ್ಭಾನುಸಾರ ನಮ್ಮವಾಗುವ ಮೌಲ್ಯಗಳ ಕುರಿತಾಗಿರಬೇಕು ಮತ್ತು ಅದು ವಾಸ್ತವದಿಂದ ಆರಿಸಿಕೊಡುವಂಥದಿರಬೇಕು.

ಕಾರ್ಕಳ — *ಅರವಿಂದ ಚೊಕ್ಕಾಡಿ*

ಇರಾಕ್ ಮೇಲೆ ಅಮೆರಿಕಾ ಯುದ್ಧ ಸಾರಿರುವುದನ್ನು ಖಂಡಿಸಿ ಹಲವಾರು ದೇಶಗಳು ರಾಷ್ಟ್ರವ್ಯಾಪಿ ಮುಷ್ಕರ ನಡೆಸಿವೆ. ಇದರ ಜೊತೆಗೆ ಲೇಖನ ರೂಪವಾಗಿ ಬರೆದು ತಿಳಿಸಿರುವ ಸೀಯಾರ್ಕೆಯವರಿಗೆ ಧನ್ಯವಾದಗಳು.

ಹೊನ್ನಯ್ಯನಹಳ್ಳಿ — *ನೆಲ್ಲೂರ ಕೆ. ಹನುಮೇಗೌಡ*

**ಗೋವಿನ ಹಾಡು – ನಿತ್ಯ ನೂತನ!**

ಗೋವಿನ ಹಾಡು - ಒಂದು ಪ್ರಿಸಂ ಇದ್ದಂತೆ ! ಇದರ ಮೂಲಕ ಯಾರು ಏನು ಬೇಕಾದರೂ ನೋಡಬಹುದು. ಆದರೆ ಬೆಳಕಿನ ಒಂದು ಕಿರಣ 'ಪ್ರಿಸಂ'ನ ಒಳಹೊಕ್ಕು ಹೊರಬಂದಾಗ ಏಳು ಬಣ್ಣಗಳಾಗಿ ಪ್ರಕಟಗೊಳ್ಳುವಂತೆ, ಗೋವಿನ ಹಾಡಿನ ಮೂಲಕ ನಮ್ಮ ಬದುಕಿನ ಬಗೆ ಬಗೆ ಬಣ್ಣಗಳನ್ನು ಮನಗಾಣಬಹುದು. ಹೀಗಾಗಿ, ಹಸು ಮತ್ತು ಹುಲಿಗಳು ತಮ್ಮ ನೈಸರ್ಗಿಕ ಹಸುತನ ಮತ್ತು ಹುಲಿತನಗಳನ್ನು ಕಳೆದುಕೊಂಡು 'ನಿಃಶಬ್ದ' ವಾಗಿಬಿಡುತ್ತವೆ. ಇದನ್ನೇ 'ಶಬ್ದದೊಳಗಣ ನಿಃಶಬ್ದ' ಎನ್ನುವುದು. ಈ ನಿಃಶಬ್ದವನ್ನು ಉಚಿತಾನುಚಿತ ವಿವೇಕದಿಂದ ಪರಿಭಾವಿಸಿಕೊಳ್ಳುವವನೇ ಸಹೃದಯಿ. ನಿಃಶಬ್ದವನ್ನು ಗ್ರಹಿಸಲಾರದೆ ನೈಸರ್ಗಿಕ ಹಸು ಮತ್ತು ಹುಲಿಗಳೆಂದೇ ತಿಳಿಯುವುದು ಕಾವ್ಯಾಭ್ಯಾಸವಲ್ಲ. ಎಸ್. ಎಸ್. ಹಿರೇಮಠ ಅವರು ದುರ್ಬಲ ಆಕಳು - ಪ್ರಬಲ ಹುಲಿ, ಶೋಷಕ- ಶೋಷಿತ, ಆತ್ಮಹತ್ಯೆ - ಸ್ವಹಿಂಸೆ ಎಂಬ ಪರಿಭಾಷೆಗಳ ಮೂಲಕ ನೈಸರ್ಗಿಕವಾದ ಹಸುತನ-ಹುಲಿತನಗಳನ್ನು ಮೀರಿದ್ದಾರೆಂಬುದು ಸ್ಪಷ್ಟವಾಗಿದೆ. ಆದರೆ, ''ಹಸುವಿನ ಹುಲ್ಲು ನೈಸರ್ಗಿಕ ಆಹಾರ, ಹುಲಿಗೆ ಆಕಳು ನಿಸರ್ಗದತ್ತ ಆಹಾರ'' – ಎಂದು ಹೇಳುವುದರ ಮೂಲಕ ಮರಳಿ ನೈಸರ್ಗಿಕ ನೆಲೆಗಳಿಗೆ ಹಿಂದಿರುಗಿದ್ದಾರೆ. ಕೊನೆಗೆ, ''ವೈದಿಕಶಾಹಿ ಹುಟ್ಟುಹಾಕಿರುವ ಸಾಂಸ್ಕೃತಿಕ ಭೂಮ ಕಲ್ಪನೆ'' ಯ ಮಾತಾಡಿದ್ದಾರೆ. ಒಮ್ಮೆ ನಿಸರ್ಗ ಮತ್ತೊಮ್ಮೆ ಸಂಸ್ಕೃತಿ – ಹೀಗೆ ಎರಡೂ ನೆಲೆಗಳಿಂದ ಹಸು-ಹುಲಿಗಳನ್ನು ನೋಡುವ 'ಗೊಂದಲ' ದಿಂದ ಹಿರೇಮಠರು ಪಾರಾಗಿಲ್ಲ.

'ಪರಿವರ್ತನೆ' ಸೃಷ್ಟಿನಿಯಮ, ಚರಿತ್ರೆಯ ಅನಿವಾರ್ಯತೆ ಕೂಡ. ಒಳಿತು ಮತ್ತು ಕೆಡುಕುಗಳು ಸಿದ್ಧವಸ್ತುಗಳಲ್ಲ! ಈ ಉಭಯ ವೈರುಧ್ಯಗಳು ಕಾಲಕ್ರಮೇಣ ಬದಲಾಗ ಬಹುದೆಂಬ ಪ್ರತಿಪಾದನೆ ನಮ್ಮ ದೇಶದ ಸಾಹಿತ್ಯದಲ್ಲಿ ಎದ್ದು ಕಾಣುತ್ತದೆ. ಇದನ್ನೇ ಕುವೆಂಪು ಅವರು ಕೈಕೆ-ಮಂಥರೆ-ರಾವಣನ ಪಾತ್ರ ಕಲ್ಪನೆಯಲ್ಲಿ ಸಮರ್ಥವಾಗಿ ಬಿಂಬಿಸಿದ್ದಾರೆ. ರಾಮಾಯಣದ ರಾವಣಾಸುರ, ಮಹಾಭಾರತದ ದುರ್ಯೋಧನ ಇವರಿಬ್ಬರ ಮನಃಪರಿವರ್ತನೆಯ ನೆಲೆಗಳು ಕನ್ನಡ ಕಾವ್ಯ ಪರಂಪರೆಯಲ್ಲಿ ವಿಶೇಷವಾಗಿದೆ. ಇಂಥ ರಾವಣ ಮತ್ತು ದುರ್ಯೋಧನ 'ತಿರ್ಯಕ್ ರೂಪಕ' ದಂತೆ 'ಹುಲಿ' ಯನ್ನು ಪರಿಭಾವಿಸಬೇಕು. ''ಯಾವ ಶೋಷಕನೂ ಇಂಥ ತ್ಯಾಗ ಮಾಡಿದ ನಿದರ್ಶನಗಳಿಲ್ಲ''– ಎಂಬ ಹಿರೇಮಠರ ಅಭಿಪ್ರಾಯದಲ್ಲಿ ಹಸು-ಹುಲಿಗಳನ್ನು ಶೋಷಕ ಮತ್ತು ಶೋಷಿತ ಎಂಬ ಏಕರೂಪಾತ್ಮಕ ಚೌಕಟ್ಟಿನಲ್ಲಿಟ್ಟು ನೋಡುವ ಗ್ರಹಿಕೆಯಿದೆ. ನಾವು ಆರಾಧಿಸುವ ಸಿದ್ಧಾಂತಮಾರಿಗೆ ಹಾಡೊಂದನ್ನು ಹರಕೆಯ ಕುರಿ ಮಾಡಿ, ಕೊಂದು ಕೂಗುವ ಬದಲು ಆ ಹಾಡಿನ ಬಗೆಬಗೆ ಬಣ್ಣಗಳೇನೆಂಬುದನ್ನು ಬಹುರೂಪಾತ್ಮಕ ದೃಷ್ಟಿಯಿಂದ ವಿವೇಚಿಸುವುದು ಹೆಚ್ಚು ಉಪಯುಕ್ತವೆನಿಸುತ್ತದೆ.

ಜಗದೇಕ ಸಂಸ್ಕೃತಿ ಮತ್ತು ಜಗದೇಕ ವಿಚಾರಗಳು ಅಬ್ಬರಿಸಿ ಬೊಬ್ಬಿರಿಯುತ್ತಿರುವಾಗ ಕನ್ನಡ ಗೋವಿನ ಸ್ಥಿತಿ-ಗತಿಗಳೇನು ? ಕರ್ನಾಟಕವೆಂಬ ದೊಡ್ಡಿಯೊಳಗಿರುವ ಕಂದರ ಪಾಡು ಎಂತಹುದು ? ಪೊರೆವ ತಾಯಿ, ಕಾಯುವ ಗೊಲ್ಲರು ಕೈ ಹಿಡಿವ ಬಂಧುಗಳಿಲ್ಲದೆ, ತಬ್ಬಲಿಯಾಗುತ್ತಿರುವ ಕರುಗಳಂತಿರುವ ನಾವು 'ಆರು ಎನಗೆ ಹಿತವರು ?' ಎಂದು ಕೇಳುವಂತಾಗಿದೆಯಲ್ಲವೆ ? ಹಸು ಸತ್ಯನಿಷ್ಠೆಯಿಂದ ಗವಿಯ ಬಾಗಿಲಿಗೆ ಹಿಂದಿರುಗಬಹುದು, ಹುಲಿ ಮನಕರಗಿ ಎದೆಯೊಡೆದು ಕಣಿವೆಗೆ ಹಾರಿ ಬಿದ್ದು ಸಾಯಬಹುದು – ಇವುಗಳ ಸಾಧ್ಯಾಸಾಧ್ಯತೆಗಳ ತರ್ಕ ಜಿಜ್ಞಾಸೆಯಲ್ಲಿ ಕಾವ್ಯಾತ್ಮವನ್ನು ಕಳೆದುಕೊಳ್ಳದೆ 'ಬಡಕರು' ವಿನ ಪ್ರಶ್ನೆಗೆ ಕಿವುಡಾಗದೆ ಆಲೋಚಿಸುವಂಥ ಮನೋಧರ್ಮವನ್ನು 'ಗೋವಿನ ಹಾಡು' ಹುಟ್ಟುಹಾಕುತ್ತಿರುವುದು ಆ ಹಾಡಿನ ನಿತ್ಯನೂತನತೆಗೆ ಸಾಕ್ಷಿಯಾಗಿದೆ.

ಕೋಲಾರ — *ವಿ. ಚಂದ್ರಶೇಖರ ನಂಗಲಿ*

**ಅಯೋನಿಜ ಯಾರು?**

'ಹೊಸತು' ವಿನ ಫೆಬ್ರವರಿ ಸಂಚಿಕೆಯಲ್ಲಿ ರಾಯಚೂರಿನ ಪಾಂಡುರಂಗ ಗುಡಿಯವರು ಬರೆದಿರುವ ಲೇಖನದಲ್ಲಿ 'ಅಯೋನಿಜ' ಎಂದರೆ, ಗಂಡನಿಂದಲ್ಲದೆ ಬೇರೆಯವನಿಂದ ಹುಟ್ಟಿದವನು ಎಂದು ಅರ್ಥೈಸಿದ್ದಾರೆ. ಯೋನಿಯಿಲ್ಲದವನಾಗಿ ಜನಿಸಿದವನು ಎಂಬುದು ಇದರ ಅರ್ಥ. ಇಂಥ ಸ್ತ್ರೀಯಿಂದಲೇ ಎಂದು ಗುರುತಿಸಲಿಕ್ಕಾಗದಂತೆ ಜನಿಸಿದವನು – ಎಂದು ಸತ್ಯಕ್ಕೆ ಸನಿಹವಾಗುವಂತೆ ಅರ್ಥೈಸಬಹುದು.

ಈ ಶಬ್ದ ಸೃಷ್ಟಿಗೊಂಡಾಗ ಮಾತೃಪ್ರಧಾನ ವ್ಯವಸ್ಥೆಯೇ ಸಮಾಜದಲ್ಲಿ ಜಾರಿಯಲ್ಲಿತ್ತು – ಎಂಬುದನ್ನು ಈ ಶಬ್ದವೇ ಹೇಳುತ್ತದೆ. ಜನನಕ್ಕೆ ಕಾರಣೀಭೂತನಾದ ಪುರುಷನನ್ನು ಗುರುತಿಸಲಿಕ್ಕಾಗದ ಆಗಿನ ಸಾಮಾಜಿಕ ವ್ಯವಸ್ಥೆಯಲ್ಲಿ ಮಗುವನ್ನು 'ಯೋನಿಜ' ಎನ್ನುತ್ತಿದ್ದರು. ಯಾವುದಾದರೂ ಬಲವತ್ತರವಾದ ಕಾರಣದಿಂದಾಗಿ ಮಗು-ತಾಯಿ ಬೇರೆ-ಬೇರೆಯಾದಾಗ ಅದು ಯಾರ ಮಗುವೆಂದು ಸಂದಿಗ್ಧಕ್ಕೊಳಗಾದಾಗ ಆ ಮಗು ಅಯೋನಿಜವಾಗುತ್ತಿತ್ತು.

ಈ ರೀತಿ ಅಯೋನಿಜರಾಗಿ ಜನಿಸಿದವರೆಲ್ಲರೂ ಪುರುಷರೇ! ವ್ಯಾಸನ ಮಗ ಶುಕಮುನಿ ಮತ್ಸ್ಯಗಂಧಿ ಅಥವಾ ಸತ್ಯವತಿಯ ಮಗನೆಂಬುದು ಖಚಿತವಿದ್ದರೂ ಇವನೂ ಅಯೋನಿಜನೇ.

**ಘಟಕಂಚುಕಿ ಸಮಾರಂಭ**

ಘಟಕಂಚುಕಿ ಸಮಾರಂಭ ಪೇಶ್ವೆ ಬಾಜೀರಾಯನ ಕಾಲದಲ್ಲಷ್ಟೇ ಇತ್ತು ಎಂದೇನಿಲ್ಲ. ಪೂರ್ವ ಕಾಲದಿಂದಲೇ ಈ ದೇಶದ ಕೆಲವು ಜನಾಂಗದವರಲ್ಲಿ ಇದು ಆಚರಣೆಯಲ್ಲಿತ್ತು. ಸ್ವಾಮಿ ದಯಾನಂದ ಸರಸ್ವತಿ ಅವರು ತಮ್ಮ ಸತ್ಯಾರ್ಥ ಪ್ರಕಾಶಿಕೆಯಲ್ಲಿ ಈ ಕಹಿ ಸತ್ಯವನ್ನು ಉಲ್ಲೇಖಿಸಿದ್ದಾರೆ.

**ಕಾಮ ಮತ್ತು ಧರ್ಮ**

ಕಾಮ ಧರ್ಮಕ್ಕಿಂತ ಪ್ರಬಲ ಭಾವನೆಯೆಂಬುದು ಸಹಜವೇ. ಕಾಮ ನಿಸರ್ಗ ಸಹಜ. ಸೃಷ್ಟಿಯ ಆರಂಭದೊಂದಿಗೇ ಇದರ ಸೃಷ್ಟಿ. 'ಧರ್ಮ'ದ ಉಗಮ ತೀರ ಇತ್ತೀಚೆಗೆ. ಕಾಮದ ಇದುವರೆಗಿನ ವಯಸ್ಸಿಗೆ ಹೋಲಿಸಿದರೆ, ಧರ್ಮದ ವಯಸ್ಸು ಸೆಕೆಂಡಿನ ಎಷ್ಟೋ ಭಾಗ ಕಿರಿದು. ನಿಸರ್ಗ ಸಹಜ ಭಾವನೆಗಳ ಮುಂದೆ ಧರ್ಮದ ಆಟ ಹೇಗೆ ನಡೆದೀತು ?

ಗದಗ — *ನೀಲಗುಂದ ಸ್ವಾಮೀಜಿ*

'ಹೊಸತು' ವಿಶೇಷ ಸಂಚಿಕೆಯಲ್ಲಿ ಪ್ರಕಟವಾಗಿರುವ ''ಗೋವಿನ ಪಾವಿತ್ರ್ಯದ ಕಲ್ಪಿತ ಕಥೆ'' ಲೇಖನ ಸೊಗಸಾಗಿದೆ. ೧೦ ವರ್ಷಗಳ ಹಿಂದೆ ನಾನು ಒಂದು ಪ್ರಚೋದಿತ ಕುಹಕ-ನುಡಿಗೆ ಮನನೊಂದು ''ಗೋಮಾಂಸ ಭಕ್ಷಕರು ಯಾರು ?'' ಎಂಬ ಒಂದು ಲೇಖನವನ್ನು ಬರೆದಿದ್ದೆ. ಯಾರೂ ಪ್ರಕಟಿಸಲಿಲ್ಲ. ಮಾಂಸಾಹಾರಕ್ಕಾಗಿ ಕೊಲ್ಲಬಹುದಾದ ಪ್ರಾಣಿಗಳ ಪಟ್ಟಿಗೆ 'ಒಂಟೆ' ಯನ್ನು ಸೇರಿಸಿಲ್ಲ ಎಂಬ ಮಾತು ಬಿಟ್ಟರೆ ಉಳಿದೆಲ್ಲ ವಿವರಗಳು ನನ್ನ ಲೇಖನದಲ್ಲಿವೆ. ಅಷ್ಟೇ ಅಲ್ಲ, ಯಾವ ಯಾವ ದೇವತೆಗಳಿಗೆ ಯಾವ ಯಾವ ಬಣ್ಣದ, ವಯಸ್ಸಿನ ಹಸು-ಕರುಗಳು ಇಷ್ಟ ಎಂಬ ಪಟ್ಟಿಯನ್ನು ಮಾಡಿದ್ದೇನೆ.

ನಮ್ಮ ಕೇಸರೀಕರಣದ ಸರ್ಕಾರ ಇತಿಹಾಸವನ್ನು ಹಿಂದುತ್ವದ ಹಿನ್ನೆಲೆಯಲ್ಲಿ ಪುನರ್ರಚಿಸಲು ಹೊರಟಿದೆ. ಪೌರೋಹಿತ್ಯದ ಬೋಧನೆಯನ್ನು ವಿಶ್ವವಿದ್ಯಾನಿಲಯದ ಹಂತದಲ್ಲಿ ಜಾರಿಗೊಳಿಸಿದೆ ! ಇತಿಹಾಸಕಾರರು ವೇದೋಪನಿಷತ್ತುಗಳನ್ನು ಆಧಾರ ವಾಗಿಟ್ಟುಕೊಂಡು ಇತಿಹಾಸ ಪೂರ್ವಕಾಲವಾದ ಪ್ರಾಗೈತಿಹಾಸಿಕ ಕಾಲವನ್ನು ದ್ರಾವಿಡೇತರ, ಆರ್ಯೇತರ ಎಂದು ಹೆಸರಿಸಿದ್ದಾರೆ. ವೇದೋಪನಿಷತ್ತು, ಪುರಾಣೇತಿ ಹಾಸಗಳಲ್ಲಿ ಉಲ್ಲೇಖವಾಗಿರುವ ಕಿರಾತ, ದಸ್ಯು, ನಿಷಧ, ನಿಷಾದ, ಮ್ಲೇಚ್ಛ, ವ್ಯಾಧ ಮೊದಲಾದ ಪದಗಳು ಆದಿವಾಸಿ ಬುಡಕಟ್ಟುಗಳೆಂದು ಹೆಸರಿಸುತ್ತಾರೆ. ಆದಿವಾಸಿ ಬುಡಕಟ್ಟುಗಳಲ್ಲಿ ಕೋಲ್, ಮುಂಡ, ಸಂತಾಲ್, ಹೋ, ಭೂಮಿಚ್, ನಾಗ – ಮೊದಲಾದವು ಪ್ರಪ್ರಾಚೀನವಾದವು. ಕೋಲ್ ಮತ್ತು ಮುಂಡ ಅತ್ಯಂತ ಪ್ರಾಚೀನ ವಾದವುಗಳೆಂದು ಡಾ|| ಶಂಬಾ ಜೋಶಿ, ಡಾ|| ವಿ. ಕೃ. ಗೋಕಾಕ್, ಡಿ. ಡಿ. ಕೋಸಾಂಬಿ, ದೇವೀಪ್ರಸಾದ್ ಚಟ್ಟೋಪಾಧ್ಯಾಯ ಮುಂತಾದ ಸಂಶೋಧಕರು ಸ್ಪಷ್ಟವಾಗಿ ಹೇಳಿದ್ದಾರೆ. ಮಹಾಭಾರತದಲ್ಲಿ ಧರ್ಮರಾಯನ ಸಾರಥಿಯಾದ ಸಾತ್ಯಕಿ ಕೌರವನ ಸೈನ್ಯದಲ್ಲಿದ್ದ ಮುಂಡರನ್ನು ಕುರಿತು ''ಇಂದ್ರನು ರಾಕ್ಷಸರನ್ನು ಕೊಂದಂತೆ ನಾನು ಈ ಮುಂಡರನ್ನು ಕೊಲ್ಲುತ್ತೇನೆಂದು'' ಕಿರುಚುತ್ತಾನೆ. ಡಾ|| ಗೋಕಾಕರು ''ಸಪ್ತಸಿಂಧುವಿನ ಸಂಸ್ಕೃತಿಯ ದ್ರಾವಿಡಾರ್ಯ ಮುಂಡಾವಶೇಷ ಸಂಗಮವಾಗಿ ಸಂಕೀರ್ಣ ರೂಪತಾಳು''ವುದನ್ನು ದಾಖಲಿಸಿದ್ದಾರೆ. ಕೆಲವರು ಸಿಂಧೂ ಸಂಸ್ಕೃತಿಯನ್ನು 'ಕೋಲಾರಿಯನ್ ಸಂಸ್ಕೃತಿ' ಎಂದು ಕರೆದಿದ್ದಾರೆ. ಕೇಂದ್ರ ಸರ್ಕಾರ ಈ ಸಂದರ್ಭದಲ್ಲಾದರೂ ಪ್ರಾಗೈತಿಹಾಸಿಕ ಕಾಲವನ್ನು ''ಮುಂಡ ಕಾಲ''ವೆಂದೂ, ಸಂಸ್ಕೃತಿಯನ್ನು 'ಮುಂಡ ಸಂಸ್ಕೃತಿ' ಎಂದೂ ಧೈರ್ಯಮಾಡಿ ಹೆಸರಿಸುತ್ತದೆಯೆ ?

*ಬೆಂಗಳೂರು* **ಎನ್. ಚಂದ್ರಪ್ಪ**

### ಮನೋಭಾವ

ಮನಸ್ಸಿನ ಭಾವನೆಗಳ ಅಭಿವ್ಯಕ್ತಿಯೇ ಮನೋಭಾವ ಎಂಬ ಅರ್ಥ ಹೊಸದೇನಲ್ಲ. ಆಯಾ ವ್ಯಕ್ತಿಯ ಸಂಸ್ಕಾರ, ಆಚರಣೆಗಳ ಮೊತ್ತವೇ ಮನೋಭಾವವಾಗಿ ರೂಪುಗೊಳ್ಳುತ್ತದೆ. ಆಲಸಿಯಾದವನ ಮನೋಭಾವ ಗಮನಿಸಿಯೇ 'ನಾಳೆ ಮಾಡುವ ಕೆಲಸ ಇಂದೇ ಮಾಡು' ಎಂದಿರುವುದು.

ಧನಾತ್ಮಕವಾಗಿ ಚಿಂತಿಸುವ ಪ್ರವೃತ್ತಿ ಬೆಳೆಸಿಕೊಳ್ಳುವುದು ಆಯಾ ವ್ಯಕ್ತಿಯ ಮನೋಭಾವದ ಉನ್ನತೀಕರಣಕ್ಕೆ ಪೂರಕ. ಮನೋಭಾವನೆಯು ಆಯಾ ವ್ಯಕ್ತಿಯ ಚಾರಿತ್ರ್ಯದ ಮಾನದಂಡವಾಗಿ ಪರಿಗಣಿಸಬಹುದಾಗಿದೆ. ೫೦೦ ವರ್ಷಗಳಿಂದ ಸಾಗಿಬಂದ ರೇಷ್ಮೆ ಕೃಷಿಯಲ್ಲಿ ರೈತರು ಕೈ ತಟ್ಟಿ ಬಿಡಲು ಸಾಧ್ಯವಿಲ್ಲ ಎಂಬ ಮನೋಭಾವ ಕಳೆದ ದಶಕದ ತನಕವೂ ಅಧಿಕಾರಿಗಳಲ್ಲಿತ್ತು. ಆದರೆ ಕೆಲವರ ಪ್ರಾಮಾಣಿಕ ಪ್ರಯತ್ನದಿಂದ ಇಂದು ಕೈ ತಟ್ಟೆಯಲ್ಲಿ ಹುಳು ಸಾಕುವುದನ್ನು ಕೈಬಿಟ್ಟು, ಉತ್ತಮ ಇಳುವರಿ ಪಡೆಯುತ್ತಿರುವುದನ್ನು ಕಾಣುತ್ತಿದ್ದೇವೆ. ಕೆಲವರ ಮನೋಭಾವದ ತೀವ್ರತೆಯೇ ಇಂಥ ಪರಿವರ್ತನೆಗೆ ಕಾರಣವಾಗಿದೆ. ಕಾರ್ಯ ಕೈಗೊಳ್ಳುವ ಮುಂಚೆಯೇ ಅದರ ವಿಫಲತೆ ಬಗ್ಗೆ ಋಣಾತ್ಮಕ ಧೋರಣೆ ತಾಳುವುದು ಸರ್ವೇಸಾಮಾನ್ಯ.

ಹವಾಯಿ ಚಪ್ಪಲಿ ಬಗ್ಗೆ ಯಾರಿಗೆ ತಿಳಿದಿಲ್ಲ ? ಹವಾಯಿ ದ್ವೀಪಕ್ಕೆ ಚಪ್ಪಲಿಗಳ ಮಾರಾಟಕ್ಕಾಗಿ ಕಂಪನಿ ಒಬ್ಬ ಪ್ರತಿನಿಧಿಯನ್ನು ನಿಯೋಜಿಸಿತಂತೆ. ಅವನು ಈ ದ್ವೀಪಕ್ಕೆ ಹೆಲಿಕಾಪ್ಟರ್‌ನಲ್ಲಿ ಬಂದಿಳಿದ. ಅಲ್ಲಿಯ ಜನಜೀವನ ಅಭ್ಯಾಸ ಮಾಡಲು ಒಂದು ತಿಂಗಳು ನೆಲೆಸಿದ. ಇಷ್ಟವಾದ ಭೋಜನಾದಿ ಸೇವನೆಯಲ್ಲಿ ಕಂಪನಿಯ ಹಣ ಪೋಲುಮಾಡಿ ಹಿಂತಿರುಗಿ ವರದಿ ತಯಾರಿಸಿದ. ವರದಿಯ ಸಾರಾಂಶವಿಷ್ಟೆ: ದ್ವೀಪದ ಜನ ಬರೀ ಕಾಲಲ್ಲಿಯೇ ಅಲೆದಾಡುವವರಾಗಿದ್ದಾರೆ. ಇದು ಅವರಿಗೆ ಒಗ್ಗಿಹೋಗಿದ್ದು ಚಪ್ಪಲಿಯ ಅಗತ್ಯವೇ ಇಲ್ಲ. ಕಂಪೆನಿಗೆ ಇವನ ವರದಿ ಬಗ್ಗೆ ಸಂದೇಹ ಬಂತು. ಇನ್ನೊಬ್ಬ ಪ್ರತಿನಿಧಿಯನ್ನು ನಿಯೋಜಿಸಿದರು. ಹೆಲಿಕಾಪ್ಟರ್‌ನಲ್ಲಿ ಬಂದಿಳಿದ. ಜನ ಬರಿಗಾಲಲ್ಲಿ ತಿರುಗಾಡುವುದನ್ನು ಕಂಡ. ಖುಷಿಗೊಂಡು ತತ್‌ಕ್ಷಣ ಸಂದೇಶ ಕಳುಹಿಸಿದ : 'ಇಲ್ಲಿ ಜನರ ಕಾಲಿಗೆ ಚಪ್ಪಲಿ ಇಲ್ಲ. ತುರ್ತಾಗಿ ಒಂದು ಲೋಡು ಚಪ್ಪಲಿ ರವಾನಿಸುವುದು.' ಕಂಪೆನಿ ಲೋಡು ಚಪ್ಪಲಿ ಸಾಗಾಟಕ್ಕೆ ಕ್ರಮ ಕೈಗೊಳ್ಳಲು ಸಜ್ಜಾಯಿತು. ಲೋಡು ಬರುವುದರೊಳಗೆ ಪ್ರತಿನಿಧಿ ಚಪ್ಪಲಿಗಳ ಅಗತ್ಯದ ಬಗ್ಗೆ, ಮುಳ್ಳುಗಳಿಂದ ರಕ್ಷಿಸಿಕೊಳ್ಳುವ ಬಗ್ಗೆ, ಚರ್ಮದ ರಚನೆ ಬಗ್ಗೆ ತಿಳುವಳಿಕೆ ನೀಡಿದ. ಅವನ ಬೋಧನೆಯಿಂದ ಉತ್ತೇಜಿತರಾಗಿ ಜನ ಚಪ್ಪಲಿ ಕೊಳ್ಳಲು ಮುಂದಾದರು. ಚಪ್ಪಲಿ ಬಳಕೆಯಲ್ಲಿ ಕ್ರಾಂತಿ ಮಾಡಿದ. ಹವಾಯಿ ದ್ವೀಪ ತನ್ನ ಹೆಸರನ್ನು ಶಾಶ್ವತಗೊಳಿಸಿತು.

ಚಪ್ಪಲಿ ಬಳಸದೆ ಇರುವವರಿಗೆ ಅದರ ಅಗತ್ಯ ಇಲ್ಲ ಎಂದವನ ಮನೋಭಾವಕ್ಕೂ ಚಪ್ಪಲಿಯ ಬಳಕೆ ಬರಿಗಾಲಿಗೆ ಅಗತ್ಯ ಎಂದು ಯೋಚಿಸಿದವನ ಮನೋಭಾವಕ್ಕೂ ಇರುವ ವ್ಯತ್ಯಾಸವನ್ನು ಯಾರೊಬ್ಬರೂ ಅಂದಾಜಿಸಬಹುದಾಗಿದೆ. ವ್ಯಕ್ತಿಯ ಮನೋಭಾವದಲ್ಲಿ ಸುಧಾರಣೆಯಾಗಬೇಕಾದ್ದು ಈಗಿನ ಭ್ರಷ್ಟಾಚಾರ ಯುಗದಲ್ಲಿ ತುರ್ತು ಅಗತ್ಯವಾಗಿದೆ ಎಂದೆನಿಸುವುದಿಲ್ಲವೇ ?

*ಹೆಬ್ಬೂರು* **ಕ್ಷಿತಿಜ ಬೀದರ್**

*....... ೫ನೇ ಪುಟದಿಂದ (ಸಂಪಾದಕೀಯ )*

ರಾಷ್ಟ್ರಗಳು ಅಮೆರಿಕಾದೊಡನೆ ವ್ಯಾಪಾರ ಸಂಬಂಧಗಳನ್ನು ರದ್ದುಗೊಳಿಸಿ ಎಲ್ಲೆಡೆ ಅಮೆರಿಕಾದ ಮಿಲಿಟರಿ ನೆಲೆಗಳನ್ನು ಮುಚ್ಚುವಂತೆ ಆಗ್ರಹಪಡಿಸುವುದು.

ನಮ್ಮ ದೇಶದಲ್ಲಿ ''ಪ್ರವೀಣ'' ತೋಗಡಿಯಾನಂತಹ ರೋಗಿಷ್ಠ ಮನಸ್ಸುಗಳವರು ಮಾತ್ರ ಅಮೆರಿಕಾದ ಬೆಂಬಲಿಗರಾಗಿ ತೊತ್ತಿನವರಂತೆ ವರ್ತಿಸುತ್ತಾರೆ. ಸ್ವದೇಶದ ಜನರನ್ನು ಕೊಂದು ಅವರ ಕೈಗಳು ಕೆಂಪಾಗಿವೆ; ಆದ್ದರಿಂದ ಬೇರೆಯವರ ರಕ್ತ ಚೆಲ್ಲುವ ಬುಷ್‌ಗೆ ಹಸ್ತಲಾಘವ ಕೊಡಲು ಅವರಿಗೆ ಮುಜುಗರವೆನಿಸದಿರಬಹುದು. ಆದರೆ ಆರೋಗ್ಯಕರ ಮನಸ್ಸಿನವರ ಆಶಯಗಳೇ ಬೇರೆ. ಅವರಿಗೆ ಯುದ್ಧ ಬೇಕಿಲ್ಲ, ಇರಾಕಿನಲ್ಲಿ ಸಾವು-ನೋವುಗಳು ಬೇಕಿಲ್ಲ, ಮಕ್ಕಳ ಮಾರಣಹೋಮ ಬೇಕಿಲ್ಲ, ಇರಾಕಿನ ತೈಲ ಸಂಪತ್ತಿನ ದರೋಡೆ ಬೇಕಿಲ್ಲ. ಯಾವುದೇ ದೇಶದ ಜನರಂತೆ ಇರಾಕಿನ ಜನ ಸಹ ಸಾರ್ವಭೌಮತ್ವ ಮತ್ತು ಸ್ವಾವಲಂಬನೆ ಸಾಧಿಸಲು ಅರ್ಹರಾಗಿದ್ದಾರೆ, ಸಮರ್ಥರೂ ಆಗಬೇಕಾಗಿದೆ. ಅದಕ್ಕೆ ಭಾರತದ ಸರ್ಕಾರ ಅಡ್ಡಗಾಲು ಹಾಕುವುದು ರಾಜಕೀಯ ಅನೈತಿಕತೆಯ ಪರಮಾವಧಿ ಎನಿಸಿಕೊಳ್ಳುತ್ತದೆ.

*ಮಾರ್ಚ್ ೧೮, ೨೦೦೩* **-ಜಿ. ರಾಮಕೃಷ್ಣ**

'ಗೋವಿನ ಹಾಡಿನ' ಬಗೆಗೆ ಬರೆದ ವಿಸ್ತಾರವಾದ ಲೇಖನ ಒಂದನ್ನು ೨೦೦೩ರ ಮಾರ್ಚ್ ತಿಂಗಳ 'ಹೊಸತು' ಸಂಚಿಕೆಯಲ್ಲಿ ಓದಿ ಚಕಿತನಾದೆ. ಗೋವಿನ ಹಾಡು ಒಂದು ಸುಂದರ, ಸರಳ ಪದ್ಯ. ಅದನ್ನು ಚಿಕ್ಕ ಮಕ್ಕಳನ್ನು ಮನಸ್ಸಿನಲ್ಲಿಟ್ಟುಕೊಂಡು ಕವಿ ಬರೆದಿದ್ದಾನೆ. ಹುಡುಗನಾಗಿದ್ದಾಗ ನಾನೂ ಅದನ್ನು ಓದಿ ಪ್ರಭಾವಿತನಾಗಿದ್ದೇನೆ. ಆ ವಯಸ್ಸಿನ ಹುಡುಗರಿಗೆ ಆ ಪದ್ಯ ಓದಿದಾಗ ಪುಣ್ಯಕೋಟಿಯ ಸತ್ಯಸಂಧತೆ, ಅದರಿಂದ ಹುಲಿಯಂತಹ ದುಷ್ಟ ಪ್ರಾಣಿಯೂ ಪರಿವರ್ತನೆಗೊಂಡುದು ಹೃದಯ ಕಲಕುವುದರಲ್ಲಿ ಅನುಮಾನವೇ ಇಲ್ಲ. ಈಸೋಪನ ಕತೆಗಳಲ್ಲಿ, ಪಂಚತಂತ್ರದ ಕತೆಗಳಲ್ಲಿ ಇದೇ ರೀತಿ ಪ್ರಾಣಿ ಪಕ್ಷಿಗಳು ಮಾತನಾಡುವುದೂ, ಆ ಪ್ರಾಣಿ ಪಕ್ಷಿಗಳ ಮಾತು ಹಾಗೂ ನಡತೆ ಸಣ್ಣ ವಯಸ್ಸಿನವರ ಮೇಲೆ ಇದೇ ರೀತಿ ಗಾಢ ಪರಿಣಾಮ ಬೀರಿರುವುದೂ ಉಂಟು.

ಗೋವಿನ ಕತೆಯನ್ನಾಗಲಿ, ಪಂಚತಂತ್ರದ ಕತೆಗಳನ್ನಾಗಲಿ, ಈಸೋಪನ ಕತೆಗಳನ್ನಾಗಲಿ ಈ ಸೀಮಿತ ಉದ್ದೇಶಕ್ಕೆ ಆ ಕವಿಗಳು ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಅದರ ಅಚ್ಚಳಿಯದ ಪ್ರಭಾವ ಆ ವಯಸ್ಸಿನ ಮಕ್ಕಳ ಮೇಲೆ ಬಿದ್ದು, ಅದರಿಂದ ಅವರು ಪ್ರಭಾವಿತರಾಗಿದ್ದಾರೆ.

ಈ ಸೀಮಿತ ಉದ್ದೇಶಕ್ಕಾಗಿ ಬರೆದ ಈ ಸುಂದರ ಕವಿತೆಯನ್ನು 'ಹೊಸತು' ಲೇಖಕರು ವಿಸ್ತಾರವಾಗಿ ವಿವಿಧ ಮುಖಗಳಿಂದ ನೋಡಲು ಹೊರಟಿರುವುದನ್ನು ಓದಿದಾಗ, ಅವರು ಗೋವಿನ ಹಾಡನ್ನು ವಿಮರ್ಶೆ ಮಾಡಲು ಹೊರಟಿದ್ದಾರೆ ಎನಿಸುವುದಿಲ್ಲ, ಕುರಿಯನ್ನು ಕೊಚ್ಚಿ ಹಾಕುವಂತೆ ಗೋವಿನ ಹಾಡನ್ನು (ವಿಮರ್ಶೆ ಎಂಬ ಕಸಾಯಿ ಖಾನೆಯಲ್ಲಿ) ಕೊಚ್ಚಿ ಕೊಚ್ಚಿ ನೋಡುವ ಕೆಲಸ ಮಾಡಿದ್ದಾರೆ ಎನ್ನಿಸುತ್ತದೆ.

ಗೋವಿನ ಹಾಡು ಅಂದಿಗೆ ಮಾತ್ರವಲ್ಲ, ಇಂದಿಗೂ ಎಂದೆಂದಿಗೂ ಮಕ್ಕಳು ಓದಿ ಪ್ರಭಾವಿತರಾಗುವ ಒಂದು ಸುಂದರ ಹಾಡು.

ವಯಸ್ಸಾದ ನನಗೆ ಹಸು ಹಸುವೇ, ಹುಲಿ ಹುಲಿಯೇ ಎಂಬ ಪರಿಜ್ಞಾನ ಈಗ ಮೂಡಿದೆಯಾದರೂ, ಬಾಲ್ಯದಲ್ಲಿ ನಾನು ಓದಿದ ಗೋವಿನ ಹಾಡನ್ನು ನಾನು ಆಗ ಅರ್ಥೈಸಿಕೊಂಡ ರೀತಿಯೇ ಸರಿ, ಅದನ್ನು 'ಹೊಸತು' ಲೇಖಕರ ರೀತಿಯಲ್ಲಿ ಚಿಕಿತ್ಸಕ ಬುದ್ಧಿಯಿಂದ ನೋಡುವುದು ಸಾಧುವಲ್ಲ ಎಂದು ದೃಢವಾಗಿ ಹೇಳಬಲ್ಲೆ.

*ಬೆಂಗಳೂರು* **ಎಚ್. ಎಸ್. ದೊರೆಸ್ವಾಮಿ**

# ಭಾರತೀಯತೆ ಮತ್ತು ವೈವಿಧ್ಯತೆ

**ಡಾ॥ ವಸು**

**ಭಾ**ರತ ಹಲವು ಧರ್ಮ, ಹಲವು ಭಾಷೆ, ನೂರಾರು ದೈವಗಳನ್ನು ಹೊಂದಿದ ಬಹು ಸಂಸ್ಕೃತಿಯ ರಾಷ್ಟ್ರ. ಭಾರತದಲ್ಲೇ ಹುಟ್ಟಿ ಬೆಳೆದ ನಮಗೆ ಇದೊಂದು ಅದ್ಭುತವಾದ ವಿಚಾರ ವೆನಿಸಲಾರದು. ಆದರೂ ವೈವಿಧ್ಯತೆಯಲ್ಲಿ ಏಕತೆ ಎಂಬ ಮಾತನ್ನು ಹೇಳುತ್ತಲೇ ಬಂದಿದ್ದೇವೆ. ವಿಭಿನ್ನ ಜನಾಂಗಗಳು ಒಂದು ಧರ್ಮವನ್ನು ಅನುಸರಿಸುವ ಪಾಶ್ಚಾತ್ಯ ರಾಷ್ಟ್ರಗಳನ್ನಾಗಲಿ, ಮಧ್ಯಪ್ರಾಚ್ಯವನ್ನಾಗಲಿ ನೋಡುವಾಗ ಭಾರತದ ವೈವಿಧ್ಯತೆಯ ಬಗೆಗೆ ಮತ್ತೊಮ್ಮೆ ಚರ್ಚಿಸಲೇಬೇಕೆನಿಸುತ್ತದೆ.

ಮೊದಲು ಯೂರೋಪಿನ ಉದಾಹರಣೆಯನ್ನು ತೆಗೆದುಕೊಳ್ಳುವುದಾದರೆ, ಏಸುಕ್ರಿಸ್ತ ಹುಟ್ಟಿ ತನ್ನ ಧರ್ಮ ಬೋಧನೆಯನ್ನು ಆರಂಭಿಸಿದಾಗ ಯಹೂದಿಗಳು, ಜೊರಾಸ್ಟರನ ಧರ್ಮಾನುಯಾಯಿಗಳು, ಪ್ರಾಚೀನ ಗ್ರೀಕರ ಆಚರಣೆಗಳು, ಹಲವಾರು ಬುಡಕಟ್ಟು ಸಂಸ್ಕೃತಿಯ ಜನರು ತಮ್ಮ ಹಿಂದಿನ ನಂಬಿಕೆಗಳನ್ನೆಲ್ಲಾ ತೊರೆದು ಕ್ರೈಸ್ತ ಧರ್ಮವನ್ನು ಸ್ವೀಕರಿಸಿದರು. 'ದೇವಪುತ್ರ' ಏಸುವಿನ ಮರಣಾನಂತರ ನಿರಂತರ ಪ್ರಚಾರದೊಂದಿಗೆ ಕ್ರೈಸ್ತ ಧರ್ಮ ಹರಡುತ್ತಾ ಪಶ್ಚಿಮದ ಕಡೆ ಮುನ್ನಡೆಯಿತು. ರೋಂ ಸಾಮ್ರಾಜ್ಯದ ಚಕ್ರವರ್ತಿಗಳಲ್ಲಿ ಕ್ರೈಸ್ತ ಧರ್ಮವನ್ನು ಸ್ವೀಕರಿಸಿದ ಮೊದಲಿಗ ಕಾನ್ಸ್ಟಂಟೈನ್. ಈತನಿಂದಾಗಿ ರೋಂ ಸಾಮ್ರಾಜ್ಯದಾದ್ಯಂತ ಕ್ರೈಸ್ತ ಧರ್ಮ ಹರಡಿತು. ಇಲ್ಲಿ ಕೇವಲ ಹರಡಿತು ಎನ್ನುವುದಕ್ಕಿಂತ ಇಡೀ ಯೂರೋಪನ್ನು ಈ ಧರ್ಮ ಆವರಿಸಿತು ಎನ್ನುವುದೇ ಸರಿ. ಯೂರೋಪಿನಲ್ಲಿದ್ದ ವಿವಿಧ ಜನಾಂಗ, ಸಂಸ್ಕೃತಿಯ ಜನರೆಲ್ಲಾ ಒಂದು ಧಾರ್ಮಿಕ ಹಿಡಿತಕ್ಕೆ ಒಳಗಾದರು. ರೋಂ ಸಾಮ್ರಾಜ್ಯದ ಪತನಾನಂತರ ವ್ಯಾಟಿಕನ್‌ನಲ್ಲಿ ಪೋಪರ ಆಳ್ವಿಕೆ ಆರಂಭವಾಯಿತು. 'ಧರ್ಮ ರಾಜ್ಯ' 'ದೇವ ರಾಜ್ಯ'ದ ಕಲ್ಪನೆಯೊಂದಿಗೆ ಮಧ್ಯಕಾಲೀನ ಯೂರೋಪಿನಲ್ಲಿ ಕ್ರೈಸ್ತ ಧರ್ಮ ಆರ್ಭಟಿಸಿತು. ಅವೈಜ್ಞಾನಿಕ ಆಲೋಚನೆಗಳನ್ನು ಬಿತ್ತಿ ಧರ್ಮ ಮೆರೆಯಿತು. ಒಟ್ಟಿನಲ್ಲಿ ಯೂರೋಪಿನ ಜನರೆಲ್ಲ ವೈವಿಧ್ಯತೆಯನ್ನು ತೊರೆದು ಒಂದು ನಂಬಿಕೆಯಡಿಯಲ್ಲಿ ಬದುಕಲಾರಂಭಿಸಿದರು.

ಹಾಗೆಯೇ ಮಧ್ಯಪ್ರಾಚ್ಯದಲ್ಲಿ ಕ್ರಿ.ಶ. ಏಳನೆಯ ಶತಮಾನದ ಆದಿ ಭಾಗದಲ್ಲಿ ಇಸ್ಲಾಂ ಧರ್ಮ ಉದಯಿಸಿದಾಗ ಹಲವು ಮೂರ್ತಿ ಪೂಜಕ ಸಮಾಜಗಳು ಇಸ್ಲಾಂ ಧರ್ಮವನ್ನು ಸ್ವೀಕರಿಸಿದವು. ಮುಂದೆ ಧರ್ಮಾಧಿಕಾರಿಗಳೇ ಸರ್ವಾಧಿಕಾರಿಗಳಾದರು. ನಿರಂತರವಾಗಿ ತಮ್ಮ ತಮ್ಮಲ್ಲೇ ಹೋರಾಡುತ್ತಿದ್ದ ಬುಡಕಟ್ಟುಗಳು ಒಂದಾಗಿ ಒಂದು ಧರ್ಮವನ್ನು ಅಳವಡಿಸಿ ಕೊಂಡು ಬದುಕತೊಡಗಿದವು. ಆ ಪ್ರದೇಶದ ಜನರಲ್ಲಿದ್ದ ವೈವಿಧ್ಯಮಯವಾದ ಸಾಂಸ್ಕೃತಿಕ ಅಂಶಗಳು ಅಳಿದು ಬಹುಮಟ್ಟಿಗೆ ಏಕರೂಪ ಸಂಸ್ಕೃತಿ ಬೆಳೆಯಲು ಕಾರಣವಾಯಿತು. ಖುರಾನ್‌ಗೆ ಅನುಗುಣವಾದ ಜೀವನಕ್ರಮ ಆರಂಭವಾಯಿತು. ಬಹುದೇವತಾರಾಧನೆ, ಹತ್ತಾರು ರೀತಿಯ ಜೀವನಶೈಲಿಗಳು ನಿಧಾನವಾಗಿ ಇಸ್ಲಾಂ ಪ್ರವಾಹದಲ್ಲಿ ಕೊಚ್ಚಿಹೋದವು. ಅರಬ್ಬಿ ಮತ್ತು ಪರ್ಷ್ಯನ್ ಭಾಷೆಗಳು ಪ್ರಧಾನ ಭಾಷೆಗಳಾಗಿ ಚಲಾವಣೆಗೆ ಬಂದವು. ಹಲವು ಉಪಭಾಷೆಗಳೂ ಪ್ರಮುಖ ಭಾಷೆಗಳಲ್ಲಿ ಲೀನವಾಗಿರಬಹುದು. ಭಾರತವನ್ನು ಪ್ರವೇಶಿಸುವವರೆಗೆ ಇಸ್ಲಾಂ ಧರ್ಮದ ಹರಡುವಿಕೆ ಸರಾಗವಾಗಿ ನೆರವೇರಿರಬೇಕು. ಇದರಿಂದ ತಮ್ಮ ಮೂಲ ಬದುಕನ್ನು ತೊರೆದು ಹೊಸದೊಂದು ನೆಲೆಗೆ ಹೊಂದಿಕೊಂಡರು. ಯೂರೋಪಿನ ಕ್ರೈಸ್ತ ಧರ್ಮವಾಗಲೀ, ಮಧ್ಯಪ್ರಾಚ್ಯದ ಇಸ್ಲಾಂ ಆಗಲಿ ವಿವಿಧತೆಯನ್ನು ಹೋಗಲಾಡಿಸಿ ಏಕರೂಪತೆಯನ್ನು ಸಾಧಿಸುವುದೇ ಅದರ ಮೂಲ ಗುರಿಯಾಯಿತು. ಧರ್ಮದೊಡನೆ ಬೆಳೆದುಬಂದ ಏಕಾತ್ಮಕ ಆಡಳಿತ ಇದಕ್ಕೆ ಮತ್ತಷ್ಟು ದಾರಿಮಾಡಿಕೊಟ್ಟಿತು.

ಇದೇ ವಿಷಯವನ್ನು ಭಾರತಕ್ಕೆ ಅನ್ವಯಿಸಿ ಚರ್ಚಿಸಿದರೆ ಭಾರತೀಯ ಪ್ರತಿಕ್ರಿಯೆ ವಿಶಿಷ್ಟವಾಗಿ ಕಂಡುಬರುತ್ತದೆ. ವೈದಿಕ ಧರ್ಮದಿಂದ ಹೊರಗಿದ್ದ ನೂರಾರು ಸಾಂಸ್ಕೃತಿಕ ಹಿನ್ನೆಲೆಯ ಜನರು ವೈದಿಕ ಧರ್ಮದ ಒಳ ಹೋಗಲಾರದೆ, ಹೊರ ಉಳಿಯಲಾರದೆ ಬವಣೆ ಪಡುತ್ತಿದ್ದಾಗ, ಹಾಗೂ ವೈದಿಕ ಧರ್ಮದೊಳಗೂ ಸಮಾನತೆಯಿಲ್ಲದೆ ಜನ ಚಡಪಡಿಸುತ್ತಿದ್ದಾಗ ಬೌದ್ಧ ಹಾಗೂ ಜೈನ ಧರ್ಮಗಳು ಹುಟ್ಟಿಕೊಂಡವು. ಜನ ಪ್ರವಾಹದೋಪಾದಿಯಲ್ಲಿ ಈ ಮತದ ಅನುಯಾಯಿಗಳಾದರು. ತಮ್ಮ ವೈವಿಧ್ಯಮಯ ನಂಬಿಕೆಗಳನ್ನು ತೊರೆದು ಬುದ್ಧನ ತತ್ವಗಳನ್ನು ತಮ್ಮ ಬದುಕಿಗೆ ಅಳವಡಿಸಿಕೊಳ್ಳುತ್ತಾ ಬಂದರು. ಹಿಂದೆ ನಂಬಿದ್ದ ಭಗವಂತನಿಗಿಂತ ಅಂದಿನ ಬದುಕು ಮುಖ್ಯವೆಂದು ಕಂಡುಕೊಂಡರು. ಆದರೂ ಬೌದ್ಧ ಧರ್ಮವನ್ನು ಸ್ವೀಕರಿಸಿದಷ್ಟೇ ಜನ ಹೊರಗುಳಿದವರೂ ಇದ್ದರು. ಬೌದ್ಧ ಧರ್ಮಕ್ಕೆ ವಿದೇಶೀಯರು ಮಾರುಹೋದಾಗ ಮಹಾಯಾನ ಬೌದ್ಧ ಧರ್ಮ ಹುಟ್ಟಿಕೊಂಡಿತು. ಸಾಮ್ರಾಜ್ಯ ಕಟ್ಟಿದ ಕುಶಾನರು ಬೌದ್ಧ ಮತ ಸ್ವೀಕರಿಸುವ ಮೂಲಕ ಮತ್ತಷ್ಟು ಹೊಸತನವನ್ನು ತಂದುಕೊಟ್ಟರು. ಪೂರ್ಣವಾಗಿ ವೈದಿಕವೂ ಅಲ್ಲದ, ಬೌದ್ಧವೂ ಅಲ್ಲದ, ಪಾಶ್ಚಿಮಾತ್ಯ ಸಂಸ್ಕೃತಿಯೂ ಅಲ್ಲದ ಒಂದು ಮಿಶ್ರ ಸಂಸ್ಕೃತಿ ಇದರಿಂದ ಹುಟ್ಟಿಕೊಂಡಿತು. ಹೀಗೆ ಬೆಳೆದು ಬಂದ ಬೌದ್ಧ ಧರ್ಮವಾಗಲೀ, ಸಮಕಾಲೀನವಾದ ಜೈನ ಧರ್ಮವಾಗಲೀ ಪ್ರಮುಖ ಧರ್ಮಗಳಾಗಿ ಮೂಡಿಬಂದವೇ ಹೊರತು ಏಕೈಕ ಧರ್ಮವಾಗಿ ಉಳಿಯಲಿಲ್ಲವೆಂಬುದು ಐತಿಹಾಸಿಕ ಸತ್ಯ.

ಸಂಸ್ಕೃತಿಯ ಭಾಗವಾದ ಕಲೆಯ ವಿಚಾರವನ್ನು ಗಮನಿಸುವುದಾದರೆ ಮಹಾಯಾನ ಬೌದ್ಧಪಂಥ ಭಾರತದ ಶಿಲ್ಪಕಲೆಯಲ್ಲಿ ಹೊಸತನವನ್ನು ಮೂಡಿಸಿತು. ಈ ಪಂಥದಲ್ಲಿ ಬುದ್ಧ ಭಗವಾನನಾದ. ಆದ್ದರಿಂದ ಸುಂದರವಾದ ಬುದ್ಧನ ಪ್ರತಿಮೆಯನ್ನು ಕೆತ್ತಿ ಪೂಜಿಸಲು ಆರಂಭಿಸಿದರು. ಇವರಿಂದ ಆರಂಭವಾದ ಗಾಂಧಾರ ಶಿಲ್ಪಕಲೆ ಭಾರತದ ಶಿಲ್ಪಕಲಾ ಕ್ಷೇತ್ರಕ್ಕೆ ನೀಡಿದ ಅದ್ಭುತವಾದ ಕೊಡುಗೆ. ಇತರರು ಬುದ್ಧನ ಸುಂದರ ಶಿಲ್ಪಗಳಿಂದ ಪ್ರಭಾವಿತರಾಗಿ ಶಿವನ ಮತ್ತು ವಿಷ್ಣುವಿನ ಶಿಲ್ಪಗಳನ್ನು ಕೆತ್ತತೊಡಗಿದರು. ಇವರ ಜೊತೆಯಲ್ಲಿ ಬಂದ ಜೈನರು ಜಿನಬಿಂಬವನ್ನೂ ಶಕ್ತಿ ದೇವತಾರಾಧಕರು ಮಾತೃದೇವತೆಗಳ ಶಿಲ್ಪಗಳನ್ನೂ ಮಾಡತೊಡಗಿದರು. ಸುಮಾರು ಕ್ರಿ.ಶ. ೬ನೆಯ ಶತಮಾನದ ಹೊತ್ತಿಗೆ ಶಿಲ್ಪಶಾಸ್ತ್ರ ಗ್ರಂಥಗಳು ರಚಿತವಾದವು. ಈ ಗ್ರಂಥಗಳಿಂದಾಗಿ ಭಾರತೀಯ ಶಿಲ್ಪ ಶಾಸ್ತ್ರಕ್ಕೆ ಒಂದು ಚೌಕಟ್ಟು ಹಾಕಲಾಯಿತು. ಸ್ಥಳೀಯ ಅಂಶಗಳು ಈ ಚೌಕಟ್ಟನ್ನು ಭೇದಿಸುವ ನಿರಂತರ ಪ್ರಯತ್ನ ಮಾಡುತ್ತವೆ.

ಸಂಸ್ಕೃತಿಯೊಂದು ಪ್ರಧಾನವಾಗುವ ನಿಟ್ಟಿನಲ್ಲಿ ಪ್ರಜ್ಞಾಪೂರ್ವಕವಾಗಿ, ಕೆಲವೊಮ್ಮೆ ಅಪ್ರಜ್ಞಾಪೂರ್ವಕವಾಗಿ, ಪ್ರಯತ್ನವನ್ನು ನಡೆಸುತ್ತಿರುತ್ತದೆ. ಅದೇ ಸಂದರ್ಭದಲ್ಲಿ ಮುಖ್ಯವಾಹಿನಿಯ ಸೆಳೆತದಿಂದ ದೂರ ಉಳಿಯುವ ಪ್ರಕ್ರಿಯೆಯೂ ನಡೆಯುತ್ತಿರುತ್ತದೆ ಎನ್ನುವ ವಿಚಾರದ ಬಗೆಗೆ ಮುಂದೆ ವಿಶ್ಲೇಷಿಸುವ ಪ್ರಯತ್ನ ಮಾಡಿದ್ದೇನೆ. ಹನ್ನೆರಡನೆಯ ಶತಮಾನದ ವೀರಶೈವ ಚಳವಳಿಯ ಸಂದರ್ಭದಲ್ಲಿ ಹಲವು ದೇವೋಪಾಸನೆಯನ್ನು ನೇರವಾಗಿ ಖಂಡಿಸಿ ಶಿವೋಪಾಸನೆಗೆ ಒತ್ತು ಕೊಡಲಾಯಿತು. ಸಾವಿರಾರು ಜನ ತಮ್ಮ ಮೂಲ ಸಂಸ್ಕೃತಿಯನ್ನು ತೊರೆದು ಸಾಮಾಜಿಕ ಮೇಲುಕೀಳಿನ ವಿರುದ್ಧದ ಹೋರಾಟವಾಗಿ ಹೊಸದೊಂದು ಆಲೋಚನೆಯ ಕಡೆ ನಡೆದರು. ವೀರಶೈವ ಸಿದ್ಧಾಂತ ಒಂದು ಕಡೆ ವೈದಿಕ ವಿರುದ್ಧವಾಗಿಯೂ ಮತ್ತೊಂದು ಕಡೆ ಬಹುಸಂಸ್ಕೃತಿಯ ವಿರುದ್ಧವಾಗಿಯೂ ಕಾಣಿಸಿ ಕೊಳ್ಳುತ್ತದೆ. ಮಾರಿ, ಮಸಣಿ, ಮೊರದೈವ, ಕಲ್ಲು ದೈವವನ್ನು ಪೂಜಿಸುವ ವಿಭಿನ್ನ ಸಂಸ್ಕೃತಿಯನ್ನು ಹೀಗಳೆಯುವುದನ್ನು ಇಲ್ಲಿ ಕಾಣಬಹುದು. ಇದು ಸಮಾಜದಲ್ಲಿ ಧಾರ್ಮಿಕ ಹಾಗೂ ಸಾಮಾಜಿಕ ಏಕರೂಪತೆ ತರುವ ಮೂಲಕ ಸುಧಾರಣೆಯನ್ನು ತರುವ ಚಳವಳಿಯಾಗಿತ್ತು. ಆದರೆ ಶಿವೋಪಾಸನೆಯ ಏಕರೂಪತೆಯನ್ನು ಸಮಾಜದಲ್ಲಿ ತರುವ ಪ್ರಯತ್ನ ಎಷ್ಟರಮಟ್ಟಿಗೆ ಯಶಸ್ವಿ ಯಾಯಿತು ? ಕೆಲವೇ ವರ್ಷಗಳಲ್ಲಿ ವೀರಶೈವ ಪಂಥದ ಒಳಗೇ ಜನ ತಮ್ಮ ಮೂಲಭಿನ್ನತೆಯನ್ನು ಉಳಿಸಿಕೊಂಡಿದ್ದು ಮಾತ್ರವಲ್ಲದೆ ಭಾರತದ ವೈವಿಧ್ಯತೆಯ ಕಾಡನ್ನು ಸೇರಿದ ಒಂದು ಮಿಶ್ರತಳಿಯ ಪಂಥವಾಯಿತು.

ಸಮಗ್ರ ಮಧ್ಯಪ್ರಾಚ್ಯವನ್ನು ಗೆದ್ದ ಇಸ್ಲಾಂ ಆಗಲಿ, ಪಾಶ್ಚಿಮಾತ್ಯವನ್ನು ರೂಪಿಸಿದ ಕ್ರೈಸ್ತ ಧರ್ಮವಾಗಲಿ ಭಾರತಕ್ಕೆ ಬಾರದೆಯಿರಲಿಲ್ಲ. ಕ್ರಿ.ಶ.ದ ಆರಂಭದಲ್ಲೇ ಸೇಂಟ್ ಥಾಮಸ್ ಮತ ಪ್ರಚಾರಕ್ಕಾಗಿ ಭಾರತಕ್ಕೆ ಬಂದಿರಬೇಕು. ಕ್ರೈಸ್ತ ಧರ್ಮದ ಧ್ವಜವನ್ನು ಹೊತ್ತು ತಂದಿದ್ದ ಪೋರ್ಚುಗೀಸರು ಗೋವಾವನ್ನು ೧೫೧೦ರಲ್ಲಿ ವಶಪಡಿಸಿಕೊಂಡಾಗಿನಿಂದಲೂ ನಿರಂತರವಾಗಿ ಕ್ರೈಸ್ತ ಧರ್ಮದ ಹರಡುವಿಕೆಗೆ ತೊಡಗಿಸಿಕೊಂಡರು. ಅನಂತರ ಬ್ರಿಟಿಷ್ ವಸಾಹತು ಆಳ್ವಿಕೆ ಆರಂಭವಾದಾಗಲೂ ಮಿಷನರಿಗಳು ಕ್ರೈಸ್ತ ಧರ್ಮ ಪ್ರಚಾರ ಹಾಗೂ ಶಿಕ್ಷಣ ಪ್ರಸಾರವನ್ನು ಜೊತೆಜೊತೆಯಲ್ಲೇ ಆರಂಭಿಸಿದರು. ಸುಮಾರು ೫೦೦ ವರ್ಷಗಳು ಕಳೆದರೂ ಭಾರತದಲ್ಲಿ ಕ್ರೈಸ್ತ ಧರ್ಮ ಯೂರೋಪಿನಂತೆ ಏಕೆ ಸ್ವೀಕೃತವಾಗಲಿಲ್ಲ ? ಬಹುಶಃ ಕ್ರೈಸ್ತ ಧರ್ಮದ ತತ್ವಗಳು ಯೂರೋಪಿನ ಭೌಗೋಳಿಕ ಸಾಮಾಜಿಕ ಹಿನ್ನೆಲೆಗೆ ಒಗ್ಗಿಕೊಂಡಂತೆ ಭಾರತಕ್ಕೆ ಒಗ್ಗಿಕೊಳ್ಳುವುದು ಸಾಧ್ಯವಿರಲಿಲ್ಲವೆ ? ಕ್ರೈಸ್ತ ಧರ್ಮವನ್ನು ಸ್ವೀಕರಿಸಿದ ಜನರೂ ತಮ್ಮ ದೇವರಗೂಡಿನಲ್ಲಿ ಹಿಂದಿದ್ದ ದೇವರ ಪಟದ ಅಥವಾ ಮೂರ್ತಿಯ ಜಾಗಕ್ಕೆ ಕ್ರಿಸ್ತನ ಶಿಲುಬೆಯನ್ನು ಇರಿಸಿದರೇ ಹೊರತು ಹಿಂದಿಗಿಂತ ಹೆಚ್ಚಿನ ವ್ಯತ್ಯಾಸವೇನೂ ಆಗಲಿಲ್ಲ. ಭಾರತದ ಜಾತಿ ವ್ಯವಸ್ಥೆಯಿಂದಲೂ ಪೂರ್ಣವಾಗಿ ಅವರು ಹೊರಬರಲಿಲ್ಲ. 'ಮಾರಮ್ಮ' 'ಮರಿಯಂ' ಆದಳು ಅಷ್ಟೆ. ತನ್ನ ಕಷ್ಟಗಳ ನಿವಾರಿಸಿಕೊಳ್ಳಲು ಮಾರಿಯಮ್ಮನಿಗೆ ಕೊಂಡೊಯ್ಯುತ್ತಿದ್ದ ನೈವೇದ್ಯವನ್ನು ಮೇರಿಯ ಗುಡಿಗೆ ತೆಗೆದುಕೊಂಡು ಹೋಗುತ್ತಲಿದ್ದಾರೆ. ದೈವ ಬದಲಾದುದರಿಂದ ಅವರ ಮೂಲ ಸಂಸ್ಕೃತಿ ಬದಲಾಗಲಿಲ್ಲ. ಕ್ರೈಸ್ತ ಧರ್ಮ ಭಾರತದ ಸಮಸ್ಯೆಗಳಿಗೆ ಉತ್ತರ ಕೊಡಲಾಗದೆ ಅದೂ ಒಂದು ಧರ್ಮವಾಗಿ

ಮಾತ್ರ ಉಳಿದುಕೊಂಡಿತು. ಕ್ರೈಸ್ತ ಧರ್ಮದಿಂದ ಭಾರತದ ಚಿತ್ತಾರದ ಸಂಸ್ಕೃತಿಯ ಚಿತ್ರಪಟಕ್ಕೆ ಹೊಸ ಬಣ್ಣವೊಂದರ ಸೇರ್ಪಡೆಯಾಯಿತೇ ಹೊರತು ಏಕರೂಪತೆಯನ್ನಂತೂ ತರಲು ಸಾಧ್ಯವಾಗಲಿಲ್ಲ. ಇಸ್ಲಾಂ ಧರ್ಮ ಉತ್ತರ ಭಾರತದಲ್ಲಿ ದಾಳಿಕೋರರೊಂದಿಗೆ ಕಾಣಿಸಿಕೊಳ್ಳುವ ಮೊದಲು ಕೇರಳದ ತೀರವನ್ನು ತಲುಪಿತ್ತು. ಅವರ ಮುಂದೆ ಮಾಪಿಳ್ಳಾ ಮುಸಲ್ಮಾನರಾಗಿ ಕೇರಳದ ಕೃಷಿ ಕಾರ್ಮಿಕರಾಗಿ ಸಮಾಜದಲ್ಲಿ ಸೇರಿ ಹೋದರು. ಉತ್ತರದಲ್ಲಿ ಸುಲ್ತಾನರು, ಮೊಘಲರು ಆಳ್ವಿಕೆಯನ್ನು ಆರಂಭಿಸಿದಾಗ ಇಸ್ಲಾಂ ಧರ್ಮದ ಪ್ರಚಾರವಾಯಿತು – ದೇಶದಾದ್ಯಂತ ಹರಡಿತು. ಆದರೆ ಯಾವೊಂದು ಪ್ರದೇಶದ ಜನರೂ ಪೂರ್ಣವಾಗಿ ಇಸ್ಲಾಂ ಧರ್ಮವನ್ನು ಸ್ವೀಕರಿಸಲಿಲ್ಲ. ಆದರೆ ಇಸ್ಲಾಂ ಧರ್ಮವನ್ನು ಸ್ವೀಕರಿಸದಿದ್ದ ಜನರೂ ಇಸ್ಲಾಂ ಸಂಸ್ಕೃತಿಯ ಹಲವು ಅಂಶಗಳನ್ನು ಸ್ವೀಕರಿಸಿದರು.

ಸಂಸ್ಕೃತಿಯಾಗಿ ಹರಿದು ಬಂದ ವಿಚಾರಗಳು ನಿರಂತರವಾಗಿ ಭಾರತೀಯರಿಂದ ಸ್ವೀಕೃತವಾಗುತ್ತಲೇ ಬದಲಾವಣೆಗೆ ತಮ್ಮನ್ನು ಒಳಪಡಿಸಿಕೊಳ್ಳುತ್ತಿವೆ. ಆದರೆ ಈ ಬದಲಾವಣೆ ಏಕತಾನವಾದುದಲ್ಲ (not uniform in nature). ಧರ್ಮದ, ಪಂಥದ, ಮತದ ಗುರುತನ್ನು ಹೊರತುಪಡಿಸಿದಂತೆ ಸಂಸ್ಕೃತಿ ಹರಡುತ್ತದೆ. ಧರ್ಮದ ಹರಡುವಿಕೆಯಲ್ಲಿ ಪ್ರಜ್ಞಾಪೂರ್ವಕವಾದ ಪ್ರಯತ್ನವಿರುತ್ತದೆ. ಉಳಿದಂತೆ ಸಹಜ ಪ್ರಕ್ರಿಯೆಯಲ್ಲಿ ಸಾಗುತ್ತದೆ. ಯಾವುದೇ ಒಂದು ಸಂಸ್ಕೃತಿ ಪ್ರತ್ಯೇಕವಾದ ಅಸ್ತಿತ್ವವನ್ನು ಹೊಂದಿರುವುದಿಲ್ಲ. ಸಂಸ್ಕೃತಿಯ ಪ್ರಭಾವ ಸುಗಂಧದಂತೆ ಪಸರಿಸುತ್ತದೆ. ಹರಡಿದ ಸುಗಂಧವನ್ನು ಹಿಂದಕ್ಕೆ ತೆಗೆದುಕೊಳ್ಳಲಾಗಲೀ, ಕೊಡಲಾಗಲೀ ಸಾಧ್ಯವಿಲ್ಲ. ಇಂದು ಇಸ್ಲಾಂ ಸಂಸ್ಕೃತಿಯ ಕಂಪು ಭಾರತದ ಭೂಮಿಯಲ್ಲಿ ಹೀಗೆ ಬೆರೆತುಹೋಗಿದೆ. ಆದ್ದರಿಂದ ಒಂದೊಂದನ್ನೇ ಹೆಕ್ಕಿ ತೆಗೆದು ಇದು ನಮ್ಮದಲ್ಲ ಎನ್ನುವುದು ಮೂರ್ಖತನದ ಪರಮಾವಧಿ. ಹಾಗೆಯೇ ಭಾರತದಲ್ಲಿ ಸೇರಿಹೋಗಿರುವ ಪಾಶ್ಚಿಮಾತ್ಯ ಅಂಶಗಳನ್ನು ನಮ್ಮದಲ್ಲವೆಂದು, ವಿದೇಶೀ ಮೂಲದ್ದೆಂದು ತೊಡೆದುಹಾಕುವ ಪ್ರಯತ್ನ ಅಸಂಬದ್ಧವಾದುದು. ಈ ಎಲ್ಲ ಅಂಶಗಳೂ ಭಾರತದ ವೈವಿಧ್ಯತೆಯನ್ನು ಹೆಚ್ಚಿಸುತ್ತಾ ಬಂದಿವೆ. ಊಟ, ಬಟ್ಟೆ, ವಾಸ್ತುಶಿಲ್ಪ, ಸಂಗೀತ, ಸಾಹಿತ್ಯ ಅಧ್ಯಾತ್ಮದವರೆಗೆ ಇಸ್ಲಾಂನ ಹಾಗೂ ಪಾಶ್ಚಿಮಾತ್ಯ ಪ್ರಭಾವವನ್ನು ಭಾರತದಲ್ಲಿ ಗುರುತಿಸಬಹುದು. ಇವೆಲ್ಲವನ್ನೂ ತನ್ನ ಮಡಿಲೊಳಗೆ ಹಾಕಿಕೊಳ್ಳುತ್ತಾ ತನ್ನತನವನ್ನು ಉಳಿಸಿಕೊಳ್ಳುತ್ತಾ ಬಂದಿರುವುದು ಭಾರತದ ವೈವಿಧ್ಯಮಯ ಬದುಕಿನ ವಿಶೇಷತೆ. ಈ ಹಿನ್ನೆಲೆಯಲ್ಲಿ ಭೌಗೋಳಿಕ ವೈವಿಧ್ಯತೆಯ ಕಾರಣವೂ ಇಲ್ಲದಿಲ್ಲ. ಪರ್ಯಾಯ ಪ್ರಸ್ಥಭೂಮಿಯನ್ನು ಹೊಂದಿರುವ ಭಾರತದಲ್ಲಿ ಕೆಲವರು ಸಾಗರದ ತಡಿಯಲ್ಲಿ ಬದುಕು ಸಾಗಿಸಿದರೆ ಮತ್ತೆ ಕೆಲವರು ಘಟ್ಟದ ಕಾಡುಗಳಲ್ಲಿ ಬದುಕುತ್ತಾ ಸಂಸ್ಕೃತಿಯನ್ನು ಹುಟ್ಟುಹಾಕುತ್ತಾರೆ. ಕೆಲವರಿಗೆ ಸುಂದರವಾಗಿ ಹರಿಯುವ ನದಿಯ ತೀರದಲ್ಲಿ ಬದುಕುವ ಅವಕಾಶ, ಮತ್ತೆ ಕೆಲವರಿಗೆ ಬೆಟ್ಟಗುಡ್ಡಗಳ ಸಾಹಸದ ಬದುಕು; ಹಿಮದಲ್ಲಿ ಬದುಕುವವರು ಒಂದು ಕಡೆಯಾದರೆ, ನೆರೆಯಲ್ಲೇ ಮರಳುಗಾಡಿನಲ್ಲಿ ಜೀವ ತೇದವರು. ಹೀಗೆ ಭಾರತದಲ್ಲಿನ ಭೌಗೋಳಿಕ ಮೇಲ್ಮೈಯಲ್ಲೂ ಒಂದೇ ಸ್ವರೂಪವಿಲ್ಲ.

ಮಧ್ಯಪ್ರಾಚ್ಯದಲ್ಲಿ ಪ್ರಮುಖ ಭೌಗೋಳಿಕ ಲಕ್ಷಣ ಮರುಭೂಮಿ. ಇದರಿಂದಾಗಿ ಬದುಕಿನಲ್ಲೂ ಏಕರೂಪತೆಯನ್ನು ಕಾಣುತ್ತೇವೆ. ಆ ಭೌಗೋಳಿಕ ಹಿನ್ನೆಲೆಯಲ್ಲೇ ರಚಿತವಾದ ಉತ್ತಮ ಬದುಕಿನ ನೀತಿ ಸಾರವಾದ ಕುರಾನ್ ಅನುಸರಿಸುವುದು ಅರಬ್ಬರಿಗೆ ಕಠಿಣವಾಗಲಿಲ್ಲ. ಭಾರತದಲ್ಲಿ ಇಸ್ಲಾಂ ಧರ್ಮ ಪ್ರಚಾರವಾಗುವ ಹೊತ್ತಿಗೆ ಅದು ಹುಟ್ಟಿ ನಾಲ್ಕು ಶತಮಾನಗಳೇ ಕಳೆದುಹೋಗಿದ್ದು ಸಾಕಷ್ಟು ಸಂಕೀರ್ಣವಾಗಿತ್ತು. ತನ್ನ ಮೂಲ ಆಲೋಚನೆಯಲ್ಲಿದ್ದ ಸ್ತ್ರೀ ಪರವಾದ ಧೋರಣೆಗಳನ್ನೆಲ್ಲಾ ಕಳೆದುಕೊಂಡು ಭಾರತವನ್ನು ಪ್ರವೇಶಿಸಿತು. ರಾಜಕೀಯ ಒತ್ತಡ, ಸ್ಥಳೀಯ ಸಂಸ್ಕೃತಿ ಇವೆಲ್ಲವೂ ಬೆರೆತ ಇಸ್ಲಾಂ ಸಂಸ್ಕೃತಿ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿಯೇ ರೂಪು ಪಡೆಯುತ್ತಾ ಹೋಯಿತು. ಸಂಸ್ಕೃತಿಯ ಜೊತೆಗೆ ಜನಾಂಗದ ಮಿಶ್ರಣವೂ ನಿರಂತರವಾಗಿತ್ತು. ಈ ಮಿಶ್ರಣದಿಂದ ಹೊಸಹೊಸ ಸಾಂಸ್ಕೃತಿಕ ಅಂಶಗಳು ಮೂಡಿಬಂದವು. ಇಂಡೋ ಸಾರಸೆನಿಕ್ ವಾಸ್ತುಶೈಲಿ ಬೆಳವಣಿಗೆಯಾಯಿತು. ಇದರ ಫಲವಾಗಿ ಉರ್ದು ಭಾಷೆ ಬೆಳೆದುಬಂದಿತು. ಹಾಗೆಯೇ 'ಸಿತಾರ್'ನಂತಹ ವಾದ್ಯ ಮಿಶ್ರ ಸಂಗೀತ ಶೈಲಿಗೆ ಕಾರಣವಾಯಿತು. ಈ ಮಿಶ್ರಣವೂ ಭಾರತದ ಭೌಗೋಳಿಕ ಹಿನ್ನೆಲೆಗೆ ಅನುಗುಣವಾಗಿಯೇ ನಡೆಯುತ್ತಾ ಸಾಗಿತು. ಆದ್ದರಿಂದಲೇ ಬಂಗಾಳದ ವಿಭಜನೆಯ ಸಂದರ್ಭದಲ್ಲಿ "ಬಂಗಾಳದ ಮುಸಲ್ಮಾನನ ಸಂಸ್ಕೃತಿ ಪಾಕಿಸ್ತಾನದ ಮುಸಲ್ಮಾನನಿಗಿಂತ ನೆರೆಮನೆಯ ಬಂಗಾಲಿ ಹಿಂದುವಿಗೆ ಹೆಚ್ಚು ಹತ್ತಿರವಾಗಿದೆ" ಎಂಬ ಮಾತನ್ನು ಕೇಳುತ್ತೇವೆ. ಇದರಿಂದ ಕಂಡುಬರುವ ಅಂಶ ಭೌಗೋಳಿಕ ಅಂತರ ಸಾಂಸ್ಕೃತಿಕ ಭಿನ್ನತೆಗೆ ಕಾರಣವಾಗುತ್ತದೆ. ಧಾರ್ಮಿಕ ಏಕತೆ ಕೃತಕವಾಗಿ ಕಂಡುಬರುತ್ತದೆ. ಈ ಎಲ್ಲ ಕಾರಣಗಳಿಂದ 'ಇಸ್ಲಾಂ' ಒಂದು ಧರ್ಮ, ಒಂದು ಸಂಸ್ಕೃತಿಯಾಗಿ ಕಾಣಿಸಿಕೊಂಡಿತೇ ಹೊರತು ಅದೊಂದೇ ಧರ್ಮವಾಗಲು ಸಾಧ್ಯವಾಗಲಿಲ್ಲ.

ಭೌಗೋಳಿಕವಾಗಿ ಮಾತ್ರವಲ್ಲದೆ ಜೀವ ವೈವಿಧ್ಯವೂ ಭಾರತದಲ್ಲಿ ಹೆಚ್ಚಾಗಿದೆ.

# ಬದಲಾವಣೆ

ಎಲ್ಲ ಎಲ್ಲಾ ಬದಲಾಗಿದೆ ಮನೆಯಲ್ಲಿ
ಕುದುರೆಯ ಮೇಲೆ ಕುಳಿತಿದ್ದ ಪುಟ್ಟಿ
ಪುಟ್ಟಿಯನು ಸುತ್ತುಮುತ್ತಿದ್ದ ಮಕ್ಕಳು
ಆ ಕುದುರೆಯ ರಂಗು ರಂಗಿನ ಲಗಾಮು ಎಲ್ಲ
ಎಲ್ಲ ಎಲ್ಲಾ ಬದಲಾಗಿದೆ ಮನೆಯಲ್ಲಿ;

ದಂಗು ಬಡಿಸುವ ಹೊಸತು ಹೊಸತು ಅಲ್ಲಿ
ಅಂಗಳದ ಗಿಡಗಳ ಕೊಂಬೆ ಕೊಂಬೆಗಳಲ್ಲಿ,
ಅಂಗಲಾಗಿದ್ದು ಒಣಗಿರುವ ಹಳದಿ ಎಲೆಗಳ
ಗೀಚಿ ಒದರುವ ಸೊಲ್ಲು,
ಪರಿಚಯದ ಗಂಧವಿಲ್ಲದ ಗಾಳಿಯಲ್ಲಿ;

ಮನೆಯಿಂದ ಅದನ್ನೆಲ್ಲ ಹೊರಚೆಲ್ಲುವ ಮೊದಲು
ಎಲ್ಲರಿಗೂ ತೂಕಡಿಕೆ ತುಂಬಿ
ಅರೆಮುಚ್ಚಿರುವ ಕಣ್ಣುಗಳು ;



ಗಿಡಗಳ ಕೊಂಬೆಗಳಲಿ ಎಲೆಗಳೇನೋ
ಬರಬಹುದು;

ಆದರೆ ಮೊದಲು
ಮಕ್ಕಳೆಲ್ಲ ಪುಟ್ಟಿಯನ್ನೇ ಸುತ್ತುಮುತ್ತುವುವು
ಆದರೆ ಆ ಎಲ್ಲ ಮಕ್ಕಳು
ಮೊದಲಿದ್ದಂತೆ ಮಕ್ಕಳಾಗಿರಬಹುದೆ ?
ಮತ್ತೆ ಅಲ್ಲಿ ಎಲ್ಲ ಎಲ್ಲವೂ
ಮೊದಲಿನಂತೆಯೇ ಆಗಿ ಉಳಿಯಬಹುದೆ ?
ಇಲ್ಲ

ಎಲ್ಲ ಎಲ್ಲಾ ಬದಲಾಗಿದೆ ಮನೆಯಲ್ಲಿ ;
ಎಲ್ಲ ಎಲ್ಲಾ ಬದಲಾಗುತ್ತಲೇ ಇದೆ
ಮನೆಯಲ್ಲಿ .

**ಪ್ರೊ|| ವಸಂತ ಕುಷ್ಟಗಿ**
ಎಂ. ಐ. ಜಿ. ೨೬, ಆದರ್ಶನಗರ ಮೊದಲ ಹಂತ
ಗುಲಬರ್ಗಾ - ೫೮೫ ೧೦೫

ಯೂರೋಪ್, ಉತ್ತರ ಅಮೆರಿಕ ಅಥವಾ ಮರಳುಗಾಡು ದೇಶಗಳಿಗೆ ಭಾರತವನ್ನು ಹೋಲಿಸಿದಾಗ ಒಂದು ಚದರ ಕಿ.ಮೀ. ಪ್ರದೇಶದಲ್ಲಿ ಕಾಣಬರುವ ಒಟ್ಟು ಸಸ್ಯ, ಪ್ರಾಣಿ, ಕೀಟಗಳ ಸಂಖ್ಯೆ ಭಾರತದಲ್ಲಿ ಅತ್ಯಂತ ಹೆಚ್ಚಾಗಿದೆ. ಶೀತವಲಯ ರಾಷ್ಟ್ರಗಳಲ್ಲಿ ಸೂಚಿಪರ್ಣ (coniferous) ಮರಗಳು ಮಾತ್ರ ಬೆಳೆಯುವುದರಿಂದ, ನಿತ್ಯಹರಿದ್ವರ್ಣದ ಕಾಡು ಅಥವಾ ಎಲೆ ಉದುರುವ ಕಾಡುಗಳಲ್ಲಿ ಕಾಣಬರುವ ವೈವಿಧ್ಯಮಯ ಸಸ್ಯಗಳು ಕಾಣಬರುವುದಿಲ್ಲ. ಅದಕ್ಕೆ ಹೊಂದಿಕೊಂಡಂತೆ ಬದುಕುವ ಇತರ ಜೀವ ವೈವಿಧ್ಯವೂ ಕಡಿಮೆಯಾಗಿರುತ್ತದೆ. ಹಾಗೆಯೇ ಮಾನವನೂ ಈ ವೈವಿಧ್ಯಮಯ ಸಸ್ಯಜೀವಿಗಳನ್ನು ತನ್ನ ಬದುಕಿಗೆ ಹೊಂದಿಸಿಕೊಳ್ಳುತ್ತಾ ಸಮಾಜ, ಸಂಸ್ಕೃತಿಯನ್ನು ಹುಟ್ಟುಹಾಕುತ್ತಾನೆ. ಮರಳುಗಾಡಿನಲ್ಲಿ ಬದುಕುವ ಜನರಿಗೆ ಖರ್ಜೂರದ ಮರ ಮತ್ತು ಒಂಟೆ ಬದುಕಿನ ಸರ್ವಸ್ವವಾಗುತ್ತದೆ. ಒಂದು ಚೀಲ ನೀರಿನಲ್ಲಿ ಒಂದು ದಿನವನ್ನೆಲ್ಲಾ ಕಳೆಯುವ ಆತನಿಗೆ ದಿನವೂ ಮೂರು ಹಿಡಿದು ಮುಳುಗುಹಾಕಿ ಪರಿಶುದ್ಧತೆಯನ್ನು ಮೆರೆಯಲಾಗುವುದಿಲ್ಲ. ಹೀಗೆ ಬದುಕಿನ ಮೌಲ್ಯಗಳು ಭೌಗೋಳಿಕ ಹಿನ್ನೆಲೆಗೆ ತಕ್ಕಂತೆ ವ್ಯತ್ಯಾಸವಾಗುತ್ತವೆ. ಅದರ ಭಾಗವಾಗಿ ತಲೆದೋರುವ ನೈತಿಕ ಮೌಲ್ಯಗಳಾಗಲಿ-ನೈತಿಕತೆಗೆ ಚೌಕಟ್ಟು ಹಾಕುವ ಧರ್ಮವಾಗಲಿ ಭೌಗೋಳಿಕ ಹಿನ್ನೆಲೆಯಲ್ಲೇ ಸೃಷ್ಟಿಯಾಗುತ್ತದೆಂಬುದು ಸ್ಪಷ್ಟವಾಗುತ್ತದೆ.

ಈ ಹಿನ್ನೆಲೆಯಲ್ಲಿ ಕಲೆ, ಧರ್ಮ, ಭೌಗೋಳಿಕ ಲಕ್ಷಣಗಳು ಭಾರತದಲ್ಲಿ ವೈವಿಧ್ಯತೆಯನ್ನು ಸದಾ ಉಳಿಸಿಕೊಂಡು ಬಂದಿರುವುದನ್ನು ಗಮನಿಸಿದಾಗ ಭಾಷಾ ವಿಚಾರವನ್ನು ಅಲ್ಲಗಳೆಯಲಾಗುವುದಿಲ್ಲ. ಒಂದೇ ಭಾಷಾ ಸೂತ್ರವು ಭಾರತದಂತಹ ರಾಷ್ಟ್ರಗಳಿಗೆ ರಾಜೀ ಸೂತ್ರವಾಗುವುದಿಲ್ಲವೆಂಬುದು ನನ್ನ ನಂಬಿಕೆ. ಮೂಲ ಭಾಷೆಯಿಂದ ನೂರಾರು ಉಪಭಾಷೆಗಳು ಹುಟ್ಟಿಕೊಳ್ಳಲೂ ಸಹ ಜನ ಒಂದು ಭೌಗೋಳಿಕ ಪ್ರದೇಶದಿಂದ ಚದುರಿ ಬೇರೆ ಬೇರೆ ಪ್ರದೇಶಗಳಿಗೆ ಹರಡಿಹೋಗುವುದು ಕಾರಣವಾಗುತ್ತದೆ. ಭೌಗೋಳಿಕವಾಗಿ ದೂರವಾದಂತೆ, ಭಾಷಾ ಅಭಿವ್ಯಕ್ತಿ ವ್ಯತ್ಯಾಸವಾಗುತ್ತಾ ಹೋಗುತ್ತದೆ. ಐಸ್‌ಲ್ಯಾಂಡಿನಲ್ಲಿ ಬದುಕುವ 'ಎಸ್ಕಿಮೊ' ಜನಾಂಗ ಎಂಟು ವಿಭಿನ್ನ ರೀತಿಯ ಬಿಳಿಯ ಬಣ್ಣವನ್ನು ಗುರುತಿಸುತ್ತಾರೆ. ಹಿಮದಲ್ಲೇ ಬದುಕುವ ಅವರು ಎಲ್ಲಕ್ಕೂ 'ಬಿಳಿ' ಎಂಬ ಒಂದೇ ಪದದಿಂದ ಹೇಳಲು ಸಾಧ್ಯವೇ ? ಹಾಗೆಯೇ ಬೇರೆ ಯಾವ ದೇಶದ ಜನರೂ ಬಿಳಿಯ ಬಣ್ಣದಲ್ಲಿನ ವ್ಯತ್ಯಾಸವನ್ನು ಗುರುತಿಸಲಾರರು. ಇಂಗ್ಲಿಷ್ ಭಾಷೆಯಲ್ಲಿ 'ಆಂಟಿ' ಎಂಬ ಸಂಬಂಧ ಸೂಚಕ ಪದ ಭಾರತದ ಅತ್ತೆ, ಚಿಕ್ಕಮ್ಮ, ದೊಡ್ಡಮ್ಮ, ಅತ್ತಿಗೆ, ಸೋದರತ್ತೆ ಈ ಎಲ್ಲಾ ಸಂಬಂಧಗಳನ್ನೂ ಒಳಗೊಳ್ಳಲಾರದು. ಭಾರತದ 'ಅತ್ತೆ' ಇಂಗ್ಲಿಷ್‌ನ ಆಂಟಿಗೆ ಸಮಾನವಾಗಲಾರದು. ಈ ವೈವಿಧ್ಯಮಯ ಬದುಕನ್ನು ಪ್ರತಿಬಿಂಬಿಸಲಾರದೆ ಇರುವುದರಿಂದಲೇ-ಭಾರತದಲ್ಲಿ ನೂರು ವರ್ಷಗಳು ಇಂಗ್ಲಿಷ್ ಆಡಳಿತ ಭಾಷೆಯಾದರೂ ಅದು ಹೊರೆಯಾಗಿಯೇ ಕಂಡುಬರುತ್ತದೆ. ವಿರೋಧಾಭಾಸವೆಂದರೆ ಮತ್ತೊಂದು ಕಡೆ ಇಂಗ್ಲಿಷ್ ವ್ಯಾಮೋಹವನ್ನು ಕಾಣುತ್ತೇವೆ. ಭಾಷೆಯನ್ನು ಆಡಳಿತಾತ್ಮಕವಾಗಿಯೋ, ಒತ್ತಾಯವಾಗಿಯೋ ಕಲಿಸುವ ಪ್ರಯತ್ನ ನಡೆದರೆ ಜನ ಅದರಿಂದ ತಪ್ಪಿಸಿಕೊಳ್ಳುತ್ತಲೇ ಹೋಗುತ್ತಾರೆ. ಅದೇ ಸಂಸ್ಕೃತಿಯಾಗಿ ಆತ್ಮೀಯವಾಗಿ ಹರಿದುಬಂದಾಗ ತಮ್ಮದಾಗಿಸಿಕೊಳ್ಳುತ್ತಾ ಬಂದಿದ್ದಾರೆ. ಎಂದರೆ ಜನ ಒಂದು ಕಡೆ ಇಂಗ್ಲಿಷ್‌ನೊಡನೆ ಘರ್ಷಣೆಯನ್ನೂ ಮತ್ತೊಂದು ಕಡೆ ಸಂವಾದವನ್ನೂ ಮಾಡುತ್ತಾ ಬಂದಿದ್ದಾರೆ. ಸಂವಾದದಲ್ಲಿ ಪರಸ್ಪರ ಕೊಳುಕೊಡುಗೆಯನ್ನೂ ಹೇರಿಕೆಯಾದಾಗ ಸಂಘರ್ಷವನ್ನೂ ಕಾಣುತ್ತೇವೆ. ಭಾಷೆಯೊಂದು ಉಪಭಾಷೆ ಎಂಬ ಕಾರಣಕ್ಕಾಗಲಿ, ಲಿಪಿ ಇಲ್ಲದ ಭಾಷೆಯೆಂಬ ಕಾರಣಕ್ಕಾಗಲಿ, ಗ್ರಾಮ್ಯ ಎಂದಾಗಲಿ ಅನಾಗರಿಕವೆಂದಾಗಲಿ ತಳ್ಳಿಹಾಕುವುದು ಅಥವಾ ನಾಶಪಡಿಸುವುದರಿಂದ ಜ್ಞಾನ ಭಂಡಾರವೊಂದನ್ನು ಒಡೆದು ಹಾಕಿದಂತಾಗುತ್ತದೆ. ಜಾಗತೀಕರಣದ ಹಿನ್ನೆಲೆಯಲ್ಲಿ ಜಗತ್ತೆಲ್ಲಾ ಇಂಗ್ಲಿಷ್‌ಮಯವಾದೀತೇ ಎಂಬ ಭಯವಾಗಲಿ, ಇಂಗ್ಲಿಷ್ ಕಲಿತರೆ ಎಲ್ಲಾದರೂ ಸಲ್ಲುತ್ತೇವೆ ಎಂಬ ನಂಬಿಕೆಯಾಗಲಿ ಶಾಶ್ವತವಾದುದಲ್ಲ. ಪರ್ಯಾಯ ವ್ಯವಸ್ಥೆಯನ್ನು ವೈವಿಧ್ಯತೆಯ ಅಂತಃಶಕ್ತಿ ಸೃಷ್ಟಿಸುತ್ತಾ ಹೋಗುತ್ತದೆ. ಮಾರುಕಟ್ಟೆ ಸಂಸ್ಕೃತಿಯ ಹಿನ್ನೆಲೆಯ ಆಂಗ್ಲಭಾಷೆ ತನ್ನ ಸರಕಿನ ಮಾರಾಟಕ್ಕೆ ಸ್ಥಳೀಯ ಭಾಷಾ ಕಲಿಕೆಯ ಅನಿವಾರ್ಯತೆಯನ್ನು ಅರ್ಥಮಾಡಿಕೊಳ್ಳುತ್ತಿರುವುದು ಸೋಜಿಗದ ವಿಚಾರವೇನೂ ಅಲ್ಲ. ಬ್ರಿಟಿಷ್ ವಸಾಹತುಶಾಹಿ ಸಂದರ್ಭದಲ್ಲಿ ತಮ್ಮಂತೆ ಯೋಚಿಸುವ ಇಂಗ್ಲಿಷ್ ಮಾತನಾಡುವ ವರ್ಗವನ್ನು ಹುಟ್ಟುಹಾಕಿ ಅವರ ಬೆಂಬಲವನ್ನು ಆಡಳಿತಕ್ಕೆ ಪಡೆದುಕೊಳ್ಳಲು ನಿರ್ಧರಿಸಿತು. ಅದೇ ಸಂದರ್ಭದಲ್ಲಿ ಸ್ಥಳೀಯ ಭಾಷೆ ಇತಿಹಾಸವನ್ನು ತಿಳಿಯುವ ಪ್ರಯತ್ನವೂ ನಡೆಯಿತು. ಆ ನಿಟ್ಟಿನಲ್ಲಿ ನಿಘಂಟುಗಳು ಶಾಸನ ಸಂಗ್ರಹಗಳು ಪ್ರಕಟವಾದವು. ಹಾಗೆಯೇ ಇಂದು ನವವಸಾಹತುಶಾಹಿಯ ಸಂದರ್ಭದಲ್ಲಿ ಕೇವಲ ಭಾಷೆಯನ್ನು ಮಾತ್ರವಲ್ಲದೆ

'ಕೊಂಡ ವಸ್ತು ಗ್ರಾಹಕನಿಗೆ ಬೇಡವಾದರೆ ಅಂಗಡಿಯಾತ ಮರಳಿ ಪಡೆಯಬೇಕು'

ಮಳೆಗಾಲದಲ್ಲಿ ಛತ್ರಿ, ಒಯ್ಯುವರು ಚಳಿಗಾಲಕ್ಕೆ ಸ್ವೆಟರ್ ಒಯ್ಯುವರು ಈಗ ಬೇಸಿಗೆಯಲ್ಲಿ ಬೇಡ ಅಂತಿದ್ದಾರೆ !

ಸಂಸ್ಕೃತಿಯನ್ನೂ ಅರ್ಥಮಾಡಿಕೊಳ್ಳುವ ಪ್ರಯತ್ನ ಜರುಗುತ್ತಿದೆ. ವ್ಯಾಪಾರದ ಜನರೂ ಭಾರತದಂತಹ ರಾಷ್ಟ್ರಕ್ಕೆ ಒಂದೇ ಮಂತ್ರವನ್ನು ಬೋಧಿಸಲಾರರೆಂಬುದನ್ನು ಈ ನೆಲ ಉತ್ತರಿಸುತ್ತದೆ. ಆ ಉತ್ತರ ಮೇಲ್‌ಸ್ತರದ ಸಮಾಜದಿಂದ ಬಾರದೆ ಕೆಳಸ್ತರದಿಂದ ಬರುತ್ತದೆ.

ಈ ಎಲ್ಲಾ ಹಿನ್ನೆಲೆಯಿಂದ ಭಾರತದ ಕೋಮುವಾದಿ ಭಾವನೆಯನ್ನು ಗಮನಿಸಿದಾಗ ಅದು ಅಸಹಜವಾಗಿ ಕಂಡುಬರುತ್ತದೆ. ಯಾವ ರಾಜಕೀಯ ಒತ್ತಡವೂ ಇಲ್ಲದಿದ್ದಲ್ಲಿ ಜನರಲ್ಲಿ ಮೂಡುವ ದ್ವೇಷ ಭಾರತೀಯ ನೆಲದಲ್ಲಿ ಅಸಹಜವಾದುದು. ಭಾರತದ ಇತಿಹಾಸದುದ್ದಕ್ಕೂ ನಡೆದ ಕೋಮು ಘರ್ಷಣೆಗಳು ಅಥವಾ ಹೋರಾಟಗಳು ರಾಜಕೀಯ ಅಥವಾ ಆರ್ಥಿಕ ಉದ್ದೇಶಗಳಿಂದ ಪ್ರೇರೇಪಿತವಾಗಿರುತ್ತವೆ. ತಮ್ಮದಲ್ಲದ ಸಂಸ್ಕೃತಿಯವರೊಡನೆ ಹೊಂದಾಣಿಕೆಯ ಬಾಳುವೆ ಮಾಡಿರುವುದು ನಿರಂತರವಾಗಿ ಕಾಣುತ್ತಾ ಬಂದ ಚಿತ್ರಣ. ಅದರಲ್ಲೂ ಇಸ್ಲಾಂ ಧರ್ಮ ಪರಕೀಯವೆನಿಸಿದಾಗ ಹಿಂದೂ ಮತ್ತು ಇಸ್ಲಾಂ ಸಂಸ್ಕೃತಿಯ ನಡುವಿನ ಅಂತರವನ್ನು ಕಡಿಮೆ ಮಾಡುವ ಪ್ರಯತ್ನ ಸೂಫಿ ಸಂತರಿಂದ ನಡೆಯಿತು. ಅವೆರಡೂ ಬೆಸೆದಾಗ ಹೊಮ್ಮಬಹುದಾದ ಹೊಸದೊಂದು ಕಂಪನ್ನು ತರುವ ಪ್ರಯತ್ನ ಆ ಸಂದರ್ಭದಲ್ಲಿ ಸಹಜವಾಗಿತ್ತು. ಕಬೀರ್, ನಾನಕ್, ಅಮೀರ್ ಖುಸ್ರು, ಶಿಶುನಾಳ ಶರೀಫರು ಇವರುಗಳು ಸಾಹಿತ್ಯದಲ್ಲಿ ಇಂತಹ ಗಾಢವಾದ ಭಾವನೆಗಳನ್ನು ಹೊರಹೊಮ್ಮಿಸಿದರು.

ಓದುಗರಿಗೆ ಈ ವಾದವನ್ನೆಲ್ಲಾ ಓದುವಾಗ ಒಂದು ಪ್ರಶ್ನೆಯಂತೂ ಹುಟ್ಟಿರಬಹುದು. ಭಾರತದಲ್ಲೂ ಒಂದು ಪ್ರಧಾನವಾದ ಧರ್ಮವಿದೆಯಲ್ಲ, ಅದರಿಂದ ಭಾರತದಲ್ಲಿ ಏಕತೆಯನ್ನು ಸಾಧಿಸಲು ಸಹಾಯಕವಾಗಿದೆ; ಬಹುದಿನಗಳಿಂದ ಇರುವ ಒಂದು ವಾದ 'ಹಿಂದೂ' ಒಂದು ಧರ್ಮವೇ ಅಲ್ಲವೇ ? ಏಕೆಂದರೆ ಉಳಿದ ಧರ್ಮಗಳಂತೆ ಅದಕ್ಕೊಂದು ಪವಿತ್ರ ಗ್ರಂಥ ಅಥವಾ ಬದುಕಿನ ನಿಯಮಾವಳಿ (Code of life) ಇಲ್ಲ. ಜೊತೆಯಲ್ಲೇ ಪ್ರತಿವಾದವು ಸಿದ್ಧವಾಗುತ್ತದೆ – 'ಭಗವದ್ಗೀತೆ' ನಮ್ಮ ಪವಿತ್ರ ಗ್ರಂಥವೆಂದು. ಆದರೆ 'ಹಿಂದೂ'ಗಳೆನಿಸಿಕೊಂಡವರಲ್ಲಿ ಶೇಕಡ ಒಂದು ಭಾಗಕ್ಕೆ ಭಗವದ್ಗೀತೆಯ ಪರಿಚಯವಿದೆಯೇ ಹೊರತು ಅದನ್ನೇ ಅನುಸರಿಸಿ ಜನರೆಲ್ಲ ಬದುಕುತ್ತಿಲ್ಲ. ಅದಕ್ಕೆ ಒಂದು ತತ್ವವಾಗಲಿ, ಸಿದ್ಧಾಂತವಾಗಲಿ ಇಲ್ಲ, ನಾಸ್ತಿಕತೆಯೂ ಇದೆ, ಆಸ್ತಿಕತೆಯೂ ಇದೆ. ಬಹುದೇವತಾರಾಧನೆಯನ್ನು ಒಪ್ಪಿಕೊಂಡಂತೆ ಏಕೇಶ್ವರ ವಾದವನ್ನೂ ಸಾರುತ್ತದೆ. ಒಂದು ಕಾಲಕ್ಕೆ 'ಹಿಂದೂ ಧರ್ಮ'ವೆಂದು ಕರೆದಾಗ ಹಿಂದೂಸ್ಥಾನದಲ್ಲಿ ಬದುಕುತ್ತಿದ್ದ ಜನರ ಜೀವನಕ್ರಮ ಎಂದು ಮಾತ್ರ ಅರ್ಥವನ್ನು ಹೊಂದಿತ್ತು. ಅದು ಇಷ್ಟೇ, ಹೀಗೇ ಎಂಬ ವ್ಯಾಖ್ಯಾನದೊಂದಿಗೆ ಹುಟ್ಟಿರಲಿಲ್ಲ. ಅದಕ್ಕೊಂದು ಅರ್ಥವನ್ನು ಕೊಡುವ ಪ್ರಯತ್ನ ವಿದೇಶೀ ಪ್ರವಾಸೀ ಬರವಣಿಗೆಗಳಲ್ಲಿ ಕಂಡುಬರುತ್ತದೆ. ಪೋರ್ಚುಗೀಸರು, ಬ್ರಿಟಿಷರು ಆರಂಭದಲ್ಲಿ ಭಾರತವನ್ನು ವಿವರಿಸುವಾಗ ಕೊಡುವ ವಿವರಣೆಗಳು, ಆನಂತರದಲ್ಲಿ ಭಾರತದ ಸುಧಾರಕರು ಕೊಟ್ಟ ವಿವರಣೆಗಳು 'ಹಿಂದೂ' ಪದಕ್ಕೆ ಚೌಕಟ್ಟನ್ನು ಹಾಕಿತು. ಮೂಲತಃ ಬಹುಸಂಸ್ಕೃತಿಯೇ ಭಾರತದ, ಅಲ್ಲಿನ ಜನರ, ಅವರ ಧರ್ಮದ ಲಕ್ಷಣ. ಶಿವ, ವಿಷ್ಣು, ಮಾರಿ, ಕಾಳಿ, ಭೂತ, ನಾಗ ಎಲ್ಲವನ್ನೂ ದೇವರೆಂದು ಒಪ್ಪಿದವರಿಗೆ ಅಲ್ಲಾ ಅಥವಾ ಏಸುವೇಕೆ ಹೊರಗುಳಿಯಬೇಕು ?

ಬಹುರೂಪಿ ಸಂಸ್ಕೃತಿಯನ್ನು ಒಪ್ಪಿಕೊಂಡ ಭಾರತೀಯರು ಹಿರಿದೆನ್ನದೆ, ಕಿರಿದೆನ್ನದೆ ನಿರಂತರವಾಗಿ ಸಾಂಸ್ಕೃತಿಕ ಕೊಳುಕೊಡುಗೆಯಲ್ಲಿ ತೊಡಗಿದ್ದಾರೆ. ಮಂದಿರಕ್ಕೆ- ಮಸೀದಿಯೂ, ಮಸೀದಿಗೆ-ಮಂದಿರವೂ, ಚರ್ಚ್‌ಗೆ-ದೇವಾಲಯವೂ, ದೇವಾಲಯಕ್ಕೆ- ವಿಹಾರವೂ, ವಿಹಾರಗಳಿಂದ-ಬಸದಿಗಳೂ ಕೊಳುಕೊಡುಗೆಯ ನಿರಂತರ ಪ್ರಕ್ರಿಯೆಯಲ್ಲಿ ಸಾಗಿಬಂದಿವೆ. ಇಂದು ಭಾರತದಲ್ಲಿ ಯಾವೊಂದು ಧಾರ್ಮಿಕ ಕಟ್ಟಡದಲ್ಲೂ ಮತ್ತೊಂದು ಧರ್ಮದ ಅಂಶಗಳನ್ನು ಬಿಟ್ಟು ನೋಡಲು ಸಾಧ್ಯವೇ ಇಲ್ಲ. ಆದ್ದರಿಂದ ಭಾರತೀಯತೆಯಲ್ಲಿ ವೈವಿಧ್ಯತೆ ಜೈವಿಕವಾಗಿ, ಭೌಗೋಳಿಕವಾಗಿ ಎಷ್ಟು ಸತ್ಯವೋ, ಸಾಂಸ್ಕೃತಿಕವಾಗಿಯೂ ಅಷ್ಟೇ ಸತ್ಯ. ಮೂಲಭೂತವಾದಿ ಜಾಗತೀಕರಣದ ಸಂದರ್ಭದ ಹಿನ್ನೆಲೆಯಲ್ಲೂ ಹೇರಬಹುದಾದ ಏಕರೂಪತೆಗೆ ಭಾರತ ಭಿನ್ನ ನೆಲೆಯಲ್ಲಿ ಉತ್ತರಿಸಬಲ್ಲದೆಂಬುದು ನನ್ನ ದೃಢ ನಂಬಿಕೆ.

ಡಾ|| ವಸು
ಇತಿಹಾಸ ಅಧ್ಯಾಪಕರು, ಸ್ನಾತಕೋತ್ತರ ಕೇಂದ್ರ , ಬೆಂಗಳೂರು ವಿಶ್ವವಿದ್ಯಾಲಯ, ತುಮಕೂರು



ನಾ. ದಿವಾಕರ

# ಬಾಬಾ ಬುಡನ್‌ಗಿರಿ ಅಯೋಧ್ಯೆಯ ನೆರಳಲ್ಲಿ

**ಗು**ಜರಾತ್‌ನ ವಿಧಾನಸಭಾ ಚುನಾವಣೆಯಲ್ಲಿ ಪ್ರಚಂಡ ಬಹುಮತದೊಂದಿಗೆ ಜಯಗಳಿಸಿದ ನಂತರ ಸಂಘಪರಿವಾರವು ತನ್ನ ಹಿಂದುತ್ವವಾದವನ್ನು ತೀಕ್ಷ್ಣಗೊಳಿಸಿ ಆಕ್ರಮಣಕಾರಿ ಹಾದಿ ಹಿಡಿದಿರುವುದು ಸ್ಪಷ್ಟವಾಗಿ ಕಂಡುಬರುತ್ತಿದೆ. ಗುಜರಾತನ್ನು ಫ್ಯಾಸಿಸಂನ ಒಂದು ಪ್ರಯೋಗಾಲಯವನ್ನಾಗಿ ಮಾಡಿಕೊಂಡು, ಅಲ್ಪಸಂಖ್ಯಾತರ ವಿರುದ್ಧ ಮಾರಣ ಹೋಮ ನಡೆಸಿ, ತನ್ನ ಹಿಂದೂ ರಾಷ್ಟ್ರದ ಪರಿಕಲ್ಪನೆಯ ಸ್ಪಷ್ಟ ಚಿತ್ರಣವನ್ನು ನೀಡಿರುವ ಸಂಘಪರಿವಾರವು ಈಗ ದೇಶದಾದ್ಯಂತ ಇದೇ ಪ್ರಯೋಗ ನಡೆಸುವ ಹುನ್ನಾರ ನಡೆಸಿದೆ. ನರೇಂದ್ರ ಮೋದಿಯಂತೆ ಇನ್ನೂ ಹಲವಾರು ಹಿಟ್ಲರ್- ಮುಸೋಲಿನಿಗಳನ್ನು ತಯಾರು ಮಾಡಲು ಸನ್ನದ್ಧವಾಗುತ್ತಿರುವ ಸಂಘಪರಿವಾರವು ಗುಜರಾತ್‌ನ ವಿಜಯ ಹಿಂದುತ್ವದ ವಿಜಯ ಎಂದು ಸಾರುತ್ತಿದೆ. ಉದಾರವಾದಿ ಪ್ರಧಾನಿ ವಾಜಪೇಯಿಯವರು ಸಹ ತಮ್ಮದೇ ಆದ ಸ್ವಯಂಸೇವಕ ಶೈಲಿಯಲ್ಲಿ ''ಈಗ ವಿಜಯ ಪರ್ವ ಮುಗಿದಿದೆ, ಇನ್ನು ಯುದ್ಧ ಪರ್ವ ಆರಂಭಗೊಳ್ಳುತ್ತದೆ'' ಎಂದು ಹೇಳಿರುವುದು ಮುಂಬರುವ ದಿನಗಳ ಕುರುಹಾಗಿದೆ. ಮಾನವ ಇತಿಹಾಸದಲ್ಲಿ ಹಿಂದೆಂದೂ ಕಂಡಿರದಂತಹ ಮಾನವ ವಿರೋಧಿ ನರಹತ್ಯೆಯನ್ನು ನಡೆಸಿ, ಗುಜರಾತ್‌ನ ಅಲ್ಪಸಂಖ್ಯಾತರನ್ನು ನಿರಂತರವಾಗಿ ಭಯಭೀತರನ್ನಾಗಿ ಮಾಡಿರುವ ಸಂಘಪರಿವಾರವು ಈಗ ಇಡೀ ದೇಶವನ್ನೇ ರಣರಂಗ ಮಾಡಲು ಸಜ್ಜಾಗುತ್ತಿದೆ. ಆದರೆ ಗುಜರಾತ್‌ನಲ್ಲಿ ಭಾ.ಜ.ಪ.ಕ್ಕೆ ಸಂದ ವಿಜಯ ಒಂದು ಮರೀಚಿಕೆಯೂ ಆಗುವ ಸಾಧ್ಯತೆ ಇದೆ. ಎಲ್ಲಾ ರಾಜ್ಯಗಳೂ ಗುಜರಾತ್ ಆಗಲು ಸಾಧ್ಯವಿಲ್ಲ. ಎಲ್ಲೆಡೆ ಗೋಧ್ರಾಗಳೂ ಸಂಭವಿಸುವುದಿಲ್ಲ. ಏನೇ ಆಗಲೀ ಈ ವಿಜಯದಿಂದ ಭಾ.ಜ.ಪ.ದ ನಾಯಕರು ಪುನಃ ಹಿಂದುತ್ವದ ಬೆನ್ನು ಹತ್ತಿರುವುದು ಸ್ಪಷ್ಟವಾಗಿದೆ. ಭಾ.ಜ.ಪ.ದ ಸಾಂಸ್ಕೃತಿಕ ರಾಷ್ಟ್ರೀಯತೆ ಪುನಃ ಚರ್ಚೆಗೆ ಒಳಪಡುತ್ತಿದೆ. ಹಳೆಯ ಗಂಡನ ಪಾದವೇ ಗತಿ ಎಂಬಂತೆ ಭಾ.ಜ.ಪ. ಪುನಃ ೯೦ರ ದಶಕದ ಕೋಮುವಾದಿ ರಾಜಕೀಯಕ್ಕೆ ಶರಣಾಗುತ್ತಿದೆ.

ಉತ್ತರ ಭಾರತದಲ್ಲಿ ಈಗಾಗಲೇ ತನ್ನ ಪೈಶಾಚಿಕ ಬಾಹುಗಳನ್ನು ಚಾಚಿ ನೆಲೆ ಮಾಡಿರುವ ಸಂಘಪರಿವಾರವು ಈಗ ದಕ್ಷಿಣ ಭಾರತವನ್ನು ಆಕ್ರಮಿಸುವ ಹಾದಿ ಅರಸುತ್ತಿದೆ. ಕರ್ನಾಟಕ ಸಂಘಪರಿವಾರದ ಧಾರ್ಮಿಕ ರಾಜಕೀಯಕ್ಕೆ ಪ್ರಶಸ್ತ ಸ್ಥಳ. ಭದ್ರ ಬುನಾದಿಯಿಲ್ಲದಿದ್ದರೂ ಜಯಲಲಿತಾ, ಕರುಣಾನಿಧಿ, ಚಂದ್ರಬಾಬು ನಾಯ್ಡು, ರಾಮಕೃಷ್ಣ ಹೆಗಡೆ ಮುಂತಾದ ಸಮಯ ಸಾಧಕ ರಾಜಕಾರಣಿಗಳ ಕೃಪೆಯಿಂದ ಭಾ.ಜ.ಪ. ದಕ್ಷಿಣ ಭಾರತದಲ್ಲಿ ಕೊಂಚಮಟ್ಟಿಗೆ ನೆಲೆ ಕಂಡುಕೊಂಡಿದೆ. ಈಗಲೂ ಭಾ.ಜ.ಪ.ವನ್ನು ಸಂಘಪರಿವಾರದಿಂದ ಭಿನ್ನವಾಗಿ ನೋಡದ ಈ ರಾಜಕಾರಣಿಗಳು ಯುದ್ಧ ಪರ್ವವನ್ನು ಸಾರುವ ವಾಜಪೇಯಿ-ಅಡ್ವಾನಿಯವರನ್ನು ಇನ್ನೂ ಉದಾರವಾದಿ ಗಳೆಂದೇ ಪರಿಗಣಿಸುತ್ತಾರೆ. ಕರ್ನಾಟಕದಲ್ಲಿ ಭಾ.ಜ.ಪ. ರಾಜಕೀಯವಾಗಿ ಭದ್ರ ನೆಲೆ ಹೊಂದಿಲ್ಲವೆಂದು ಹೇಳಬಹುದಾದರೂ ಸಂಘಪರಿವಾರವು ಇಲ್ಲಿ ದಟ್ಟವಾಗಿ ಹರಡಿದೆ. ಅಯೋಧ್ಯಾ ಗಲಭೆಗಳ ಸಮಯದಲ್ಲಿ ಕೋಮು ವಿಷಬೀಜ ಬಿತ್ತಲಾರಂಭಿಸಿದ ಸಂಘ ಪರಿವಾರವು ಸ್ವಲ್ಪಮಟ್ಟಿಗಾದರೂ ಯಶಸ್ಸು ಗಳಿಸಿದೆ ಎಂದು ಹೇಳಬಹುದು. ತನ್ನ ಕೋಮು ವಾದಿ ಫ್ಯಾಸಿಸ್ಟ್ ತಂತ್ರಗಳಿಗೆ ಅನುಕೂಲವಾಗುವಂತೆ ಸಂಘಪರಿವಾರವು ಇಲ್ಲಿಯೂ ಸಹ ಅನೇಕ ಸಮಸ್ಯೆಗಳನ್ನು ಹುಟ್ಟುಹಾಕಿದೆ. ಹುಬ್ಬಳ್ಳಿಯ ಈದ್ಗಾ ಮೈದಾನ ವಿವಾದಾಸ್ಪದ ವಿಷಯವಾದರೂ ಸಂಘಪರಿವಾರಕ್ಕೆ ಅದರಿಂದ ಯಾವುದೇ ಪ್ರಯೋಜನವಾಗಲಿಲ್ಲ. ಆದರೂ ಜನರಲ್ಲಿ ಕೋಮುವಾದದ ವಿಷಬೀಜ ಬಿತ್ತುವುದರಲ್ಲಿ ಸಂಘಪರಿವಾರ ಸಾಕಷ್ಟು ಯಶಸ್ವಿಯಾಗಿದೆ.

ಇಂಥ ಸನ್ನಿವೇಶದಲ್ಲಿ ಸಂಘಪರಿವಾರಕ್ಕೆ ೮೦ರ ದಶಕದಲ್ಲಿ ಬಾಬಾ ಬುಡನ್‌ಗಿರಿ ಒಂದು ವರವಾಗಿ ಪರಿಣಮಿಸಿತೆಂದು ಹೇಳಬಹುದು. ಚಿಕ್ಕಮಗಳೂರಿನ ಬಳಿ ಇರುವ ಬಾಬಾ ಬುಡನ್‌ಗಿರಿ ದತ್ತಪೀಠದ ವಿವಾದವನ್ನು ತನ್ನ ರಾಜಕೀಯ ದುರುದ್ದೇಶಗಳಿಗೆ ಬಳಸಿಕೊಳ್ಳುವುದರಲ್ಲಿ ಸಂಘಪರಿವಾರ ಬಹುಮಟ್ಟಿಗೆ ಯಶಸ್ವಿಯಾಗಿದೆ. ಗುಜರಾತ್ ಚುನಾವಣೆಗಳ ನಂತರ ಚುರುಕುಗೊಂಡಿರುವ ಸಂಘಪರಿವಾರದ ಚಟುವಟಿಕೆಗಳಿಗೆ ಬಾಬಾ ಬುಡನ್‌ಗಿರಿ ಕೇಂದ್ರ ಬಿಂದು ಆಗಲೂಬಹುದು. ಈಗಾಗಲೇ ತೊಗಾಡಿಯಾ ಮುಂತಾದ ಸಂಘದ ನಾಯಕಮಣಿಗಳು ಬಾಬಾ ಬುಡನ್‌ಗಿರಿ ಕರ್ನಾಟಕದ ಅಯೋಧ್ಯಾ ಆಗಲಿದೆ ಎಂದು ಹೇಳಿಕೆ ನೀಡಿರುವುದು ಗಮನಾರ್ಹ. ಆದರೆ ಇನ್ನೊಂದೆಡೆ ಪುರೋಗಾಮಿ ಗುಂಪುಗಳೂ ಒಂದಾಗಿ ಸಂಘಪರಿವಾರದ ಹುನ್ನಾರದ ವಿರುದ್ಧ ಹೋರಾಡುತ್ತಿವೆ. ಈ ಹಿನ್ನೆಲೆಯಲ್ಲಿ ಬಾಬಾ ಬುಡನ್‌ಗಿರಿ ಒಂದು ಪ್ರಮುಖ ಸಂಘರ್ಷ ಕೇಂದ್ರವಾಗುವ ಸಾಧ್ಯತೆಗಳಿವೆ. ಆದರೆ ಕೋಮು ಸೌಹಾರ್ದತೆ, ಬಹುಮುಖೀ ಸಂಸ್ಕೃತಿಯನ್ನು ಶತಮಾನಗಳಿಂದ ಕಾಪಾಡಿಕೊಂಡು ಬಂದಿರುವ ಚಿಕ್ಕಮಗಳೂರಿನ ಸಾಮಾನ್ಯ ಜನತೆ ಇದರಿಂದ ಅಪಾರ ನಷ್ಟ ಅನುಭವಿಸಲಿದ್ದಾರೆ. ಅಲ್ಲಿನ ಶಾಂತಿಯುತ ಜನಜೀವನ ಅಸ್ತವ್ಯಸ್ತಗೊಳ್ಳಲಿದೆ.

### ಬಾಬಾ ಬುಡನ್‌ಗಿರಿ ಇತಿಹಾಸ

ಪಶ್ಚಿಮ ಘಟ್ಟಗಳ ಸುಂದರ ತಾಣದಲ್ಲಿ ದಟ್ಟ ಅರಣ್ಯ ಹಾಗೂ ಕಾಫಿ ತೋಟಗಳಿಂದ ಆವೃತವಾಗಿರುವ ಬಾಬಾ ಬುಡನ್‌ಗಿರಿ ಬೆಟ್ಟವು ಚಿಕ್ಕಮಗಳೂರಿನಿಂದ ೫ ಕಿಲೋಮೀಟರ್ ದೂರದಲ್ಲಿದೆ. ಶತಮಾನಗಳಿಂದಲೂ ಸ್ಥಳೀಯ ಹಿಂದೂ ಮುಸ್ಲಿಂ ಸಮುದಾಯಗಳಿಗೆ

ಒಂದು ಯಾತ್ರಾ ಸ್ಥಳವಾಗಿರುವ ಈ ಬೆಟ್ಟದಲ್ಲಿಯೇ ''ಶ್ರೀ ಗುರು ದತ್ತಾತ್ರೇಯ ಸ್ವಾಮಿ ಬಾಬಾ ಬುಡನ್ ಪೀಠ'' ಎಂಬ ದರ್ಗಾ ಇದ್ದು, ಹಿಂದೂ ಮುಸ್ಲಿಂ ಸಮುದಾಯದ ಜನತೆ ಈ ದರ್ಗಾ ವಿಷಯದಲ್ಲಿ ಭಕ್ತಿ ಪೂರ್ವಕವಾಗಿ ನಡೆದುಕೊಳ್ಳುತ್ತಾರೆ. ಮುಸ್ಲಿಮರಿಗೆ ಇಲ್ಲಿನ ಗುಹೆಯಲ್ಲಿರುವ ದರ್ಗಾ ಒಬ್ಬ ಸೂಫಿ ಸಂತನ ಸಮಾಧಿಯಾದರೆ, ಹಿಂದೂಗಳಿಗೆ ಇದು ದತ್ತಾತ್ರೇಯ ಪೀಠವಾಗಿ ಪ್ರಸಿದ್ಧಿಯಾಗಿದೆ. ಈ ಕ್ಷೇತ್ರವನ್ನು ದಕ್ಷಿಣ ಭಾರತದ ಅತಿ ಪ್ರಾಚೀನ ಸೂಫಿ ಕ್ಷೇತ್ರವೆಂದು ಪರಿಗಣಿಸ ಲಾಗಿದೆ. ಅಧಿಕೃತವಾಗಿ ದಾಖಲೆಗಳಲ್ಲಿ ಈ ಕ್ಷೇತ್ರದ ಹೆಸರು ''ಶ್ರೀ ಗುರು ದತ್ತಾತ್ರೇಯ ಸ್ವಾಮಿ ಬಾಬಾ ಬುಡನ್ ಪೀಠ'' ಎಂದಿರುವುದು ಇಲ್ಲಿನ ಬಹುಮುಖೀ ಸಂಸ್ಕೃತಿಗೆ ಕುರುಹಾಗಿದೆ.

ಇಲ್ಲಿ ಲಭ್ಯವಿರುವ ಐತಿಹಾಸಿಕ ದಾಖಲೆಗಳ ಪ್ರಕಾರ ದಾದಾ ಹಯಾತ್ ಅಥವಾ ಅಬ್ದುಲ್ ಅಜೀಜ್ ಮಖಿ ಎಂಬ ಪ್ರವಾದಿ ಮಹಮದ್ ಪೈಗಂಬರನ ಶಿಷ್ಯ. ಆತ ಪ್ರವಾದಿಯ ಆಜ್ಞೆಯ ಮೇರೆಗೆ ಇಸ್ಲಾಂ ಹಾಗೂ ಶಾಂತಿ ಸಂದೇಶವನ್ನು ಹೊತ್ತು ಸೌದಿ ಅರೇಬಿಯಾದಿಂದ ಈ ಪ್ರದೇಶಕ್ಕೆ ಬಂದನೆಂದು ಹೇಳಲಾಗುತ್ತದೆ. ಸೂಫಿ ಸಂಪ್ರದಾಯದ ಹಾದಿಯಲ್ಲೇ ದಾದಾ ಹಯಾತ್ ತನ್ನ ಧ್ಯೇಯ ಸಾಧಿಸಲು ಇಲ್ಲಿಗೆ ಆಗಮಿಸಿದನೆಂಬ ಪ್ರತೀತಿ ಇದೆ. ಪ್ರವಾದಿ ಮಹಮದ್‌ರಿಗೆ ಬಹಳ ನಿಕಟವರ್ತಿಯಾಗಿದ್ದ ದಾದಾ ಹಯಾತ್ ಇಸ್ಲಾಂನ ಶರಿಯತ್ ಕಾನೂನಿನಲ್ಲಿ ಪರಿಣಿತನಾಗಿದ್ದನೆಂದೂ, ಆತ ಯಾತ್ರೆ ಕೈಗೊಂಡಾಗಲೆಲ್ಲಾ ಅವರ ಲಾಂಛನವನ್ನು (ಆಲಂ) ಹಿಡಿದು ಅವರೊಡನೆ ಸಂಚರಿಸುತ್ತಿದ್ದನೆಂದೂ ಹೇಳಲಾಗುತ್ತದೆ. ಪ್ರವಾದಿಯ ಆಜ್ಞೆಯ ಮೇರೆಗೆ ದಾದಾ ಹಯಾತ್ ತನ್ನ ಅನುಯಾಯಿಗಳೊಂದಿಗೆ ಭಾರತಕ್ಕೆ ಬಂದನೆಂದೂ ದಾಖಲಿಸ ಲಾಗಿದೆ. ಬಾಬಾ ಬುಡನ್‌ಗಿರಿಯನ್ನು ಹಿಂದೂ ಪುರಾಣಗಳಲ್ಲಿ ಚಂದ್ರದ್ರೋಣ ಪರ್ವತ ಎಂದೂ ಕರೆಯಲಾಗುತ್ತದೆ. ೬೨೧೪ ಅಡಿ ಎತ್ತರವಿರುವ, ಕರ್ನಾಟಕದಲ್ಲಿ ಅತಿ ಎತ್ತರವಾದ ಈ ಶಿಖರದ ಅಕ್ಕಪಕ್ಕಗಳಲ್ಲಿ ಮೇಲಗಿರಿ ಮತ್ತು ಕಲಹಟ್‌ಗಿರಿ ಎಂಬ ಎರಡು ಪರ್ವತಗಳಿವೆ. ದೈವ ಪ್ರೇರಣೆಯಿಂದ ದಾದಾ ಹಯಾತ್ ಹಾಗೂ ಅವನ ಅನುಯಾಯಿಗಳು ಈ ಪರ್ವತವನ್ನು ತಮ್ಮ ತಪಸ್ಸಿಗೆ ಸೂಕ್ತವೆಂದು ಆಯ್ಕೆ ಮಾಡಿದರೆಂದು ಹೇಳಲಾಗುತ್ತದೆ. ಹಿಂದೂ ಪುರಾಣಗಳಲ್ಲಿ ಈ ಮೂರು ಪರ್ವತಗಳನ್ನು ಅನೇಕ ಕಥೆಗಳಿಗೆ ಸಂಬಂಧಿಸಿದಂತೆ ಚಂದ್ರದ್ರೋಣ ಪರ್ವತ, ವಾಯು ಪರ್ವತ, ಮರುತಸಲೆ, ಜಲಪರ್ವತ, ದಾದಾ ದೋರಿ ಮುಂತಾದ ಹೆಸರುಗಳಿಂದ ಗುರುತಿಸಲಾಗುತ್ತದೆ. ಈಗ ಈ ಪರ್ವತವು ಬಾಬಾ ಬುಡನ್‌ಗಿರಿ ಎಂಬ ಹೆಸರಿನಿಂದ ಪ್ರಸಿದ್ಧಿಯಾಗಿದೆ. ಅನೇಕ ಹಿಂದೂ ಸಂತರು ಇದನ್ನು ದಾದಾ ಕಾ ಪಹಾಡ್ ಅರ್ಥಾತ್ ದಾದಾನ ಪರ್ವತ ಎಂದೂ ಕರೆಯುತ್ತಿದ್ದರು. ಪ್ರಸ್ತುತ ಬಾಬಾ ಬುಡನ್‌ಗಿರಿ ಹಜರತ್ ಜಮಾಲುದ್ದೀನ್ ಮಗ್ರಿಬಿ ಶಾ ಖಲಂದರ್ ಅಥವಾ ಬಾಬಾ ಬುಡನ್ ಎಂಬಾತನ ಹೆಸರಿನಿಂದ ಮೂಡಿಬಂದಿದೆ. ಈ ಸಂತನ ದರ್ಗಾ ಸಹ ಇಲ್ಲಿದೆ.

ದಾದಾ ಹಯಾತ್ ಭಾರತಕ್ಕೆ ಆಗಮಿಸಿದ ನಂತರ ಅವನಿಗೆ ಧಾರ್ಮಿಕವಾಗಿ ಸಕ್ರಿಯವಾಗಿದ್ದ ಒಂದು ಪ್ರದೇಶ ಅವಶ್ಯಕವಾಗಿತ್ತು. ಹಾಗಾಗಿ ದಾದಾ ಹಯಾತ್ ಈ ಸ್ಥಳವನ್ನು ಆಯ್ದುಕೊಂಡನೆಂದು ಹೇಳಲಾಗುತ್ತದೆ. ದಾದಾ ಹಯಾತ್‌ನ ಧಾರ್ಮಿಕ ಬೋಧನೆ ಎಂದಿಗೂ ಹಿಂದೂ ಸಮುದಾಯದ ವಿರುದ್ಧವಾಗಿರಲಿಲ್ಲ. ಬದಲಾಗಿ ದಾದಾ ಹಯಾತ್‌ನ ಬೋಧನೆಗಳು ಅಲ್ಲಿನ ಪಾಳೆಗಾರರ ವಿರುದ್ಧವಾಗಿತ್ತು. ಸಾಮಾನ್ಯ ಜನತೆಯನ್ನು ಅಪಾರವಾಗಿ ಶೋಷಣೆ ಮಾಡುತ್ತಿದ್ದ ಪಾಳೆಗಾರರ ವಿರುದ್ಧ ದಾದಾ ಹಯಾತ್ ಜನರಿಗೆ ಬೋಧನೆ ಮಾಡುತ್ತಿದ್ದ. ಹೀಗಾಗಿ ಅಲ್ಲಿನ ಪಾಳೆಗಾರರು ತಮ್ಮ ಪ್ರಾಬಲ್ಯ ಕುಂದುತ್ತಿರುವ, ಹಿಡಿತ ಶಿಥಿಲವಾಗುತ್ತಿರುವ ಸನ್ನಿವೇಶವನ್ನು ಸಹಿಸಲಾಗದೆ ದಾದಾ ಹಯಾತ್‌ನ ವಿರುದ್ಧ ಹೋರಾಟಕ್ಕೆ ಅಣಿಯಾದರು. ಅನೇಕ ಬಾರಿ ದಾದಾ ಹಯಾತ್‌ನನ್ನು ಕೊಲೆಗೈಯುವ ಸಂಚು ಫಲಕಾರಿಯಾಗದೆ ಒಮ್ಮೆ ಕೆಲವು ಪಾಳೆಗಾರರು ದಾದಾ ಹಯಾತ್‌ನ ಮೇಲೆ ಕತ್ತಿಗಳಿಂದ ಆಕ್ರಮಣ ಮಾಡಿದಾಗ ದಾದಾ ಹಯಾತ್ ತನ್ನ ಪವಾಡದಿಂದ ಕತ್ತಿಗಳನ್ನು ಹೂವಿನ ಹಾರಗಳನ್ನಾಗಿ ಮಾಡಿದನೆಂದು ಹೇಳಲಾಗುತ್ತದೆ. ತದನಂತರ ದಾದಾ ಹಯಾತ್‌ನ ದೈವಿಕ ಸ್ವರೂಪವನ್ನು ಮನಗಂಡ ಪಾಳೆಗಾರರು ಅವನ ತಪಸ್ಸಿಗೆ ಯಾವುದೇ ಅಡೆತಡೆ ಉಂಟು ಮಾಡಲಿಲ್ಲವೆಂದು ಹೇಳಲಾಗುತ್ತದೆ. ಈ ಸಂದರ್ಭದಲ್ಲಿ ಅಲ್ಲಿನ ಹಿಂದೂಗಳು ದಾದಾನನ್ನು ತ್ರಿಮೂರ್ತಿ ದೇವತೆಗಳಾದ ಬ್ರಹ್ಮ-ವಿಷ್ಣು-ಮಹೇಶ್ವರರ ಅವತಾರವೆಂದು ಪರಿಗಣಿಸಿದರೆಂಬ ಪ್ರತೀತಿಯೂ ಇದೆ.

ಹಿಂದೂ ಪುರಾಣಗಳಲ್ಲಿ ದತ್ತಾತ್ರೇಯನಿಗೆ ಉನ್ನತ ಸ್ಥಾನವಿದ್ದು ಸಪ್ತರ್ಷಿಗಳಲ್ಲಿ ಒಬ್ಬರಾದ ಆತ್ರೇಯ ಮುನಿ-ಸತಿ ಅನುಸೂಯರ ಪುತ್ರನೆಂದು ದತ್ತಾತ್ರೇಯನನ್ನು ಜನ ಪೂಜಿಸುತ್ತಾರೆ. ತ್ರಿಮೂರ್ತಿಗಳ ಅವತಾರವೆಂದು ಪರಿಗಣಿಸಲಾಗುವ ದತ್ತಾತ್ರೇಯನನ್ನು ಶತಮಾನಗಳಿಂದ ಇಲ್ಲಿ ಪೂಜಿಸಲಾಗುತ್ತಿದೆ. ದಾದಾ ಹಯಾತ್ ಇಲ್ಲಿಗೆ ಆಗಮಿಸುವ ಮುನ್ನವೂ ದತ್ತಾತ್ರೇಯನನ್ನು ಪೂಜಿಸಲಾಗುತ್ತಿತ್ತು ಎಂದು ಹಿಂದೂಗಳು ವಾದಿಸುತ್ತಾರೆ. ದತ್ತಾತ್ರೇಯ ಪೀಠಗಳು ಕರ್ನಾಟಕದ ಇತರೆಡೆಗಳಲ್ಲೂ ಇವೆ. ಬಾಬಾ ಬುಡನ್‌ಗಿರಿ ಪ್ರದೇಶದಲ್ಲಿ ದತ್ತಾತ್ರೇಯನ ಪರಿಕಲ್ಪನೆ ಇತ್ತೀಚೆಗೆ ಬಂದದ್ದು ಮತ್ತು ಈ ಪರಿಕಲ್ಪನೆಯ ಫಲವಾಗಿ ವೈಷ್ಣವ - ಶೈವ - ಸೂಫಿ ಮತಗಳ ಸಮ್ಮಿಲನ ಇಲ್ಲಿ ಉಂಟಾಯಿತೆಂದು ಕೆಲವು ಇತಿಹಾಸ ತಜ್ಞರು ವಾದಿಸುತ್ತಾರೆ. ಇಷ್ಟೇ ಅಲ್ಲದೆ, ಹಿಂದಿನಂತೆ ಇಂದಿಗೂ ಸಹ ಇಲ್ಲಿನ ಹಿಂದೂ ಸಮು ದಾಯವು, ದತ್ತಾತ್ರೇಯ ಗುಹೆಯಲ್ಲಿ ಪುನಃ ಪ್ರತ್ಯಕ್ಷನಾಗಿ ಜಗತ್ತಿನ ದುಃಖ ಕಷ್ಟ ವ್ಯಸನಗಳನ್ನು ಹೋಗಲಾಡಿಸುತ್ತಾನೆ ಎಂದು ನಂಬುತ್ತಾರೆ. ದಾದಾ ಹಯಾತ್‌ನ ಆಗಮನದ ನಂತರ, ಅವನನ್ನೇ ದತ್ತಾತ್ರೇಯನ ಅವತಾರವೆಂದು ಪರಿಗಣಿಸಿದರೆಂದು ಹೇಳಲಾಗುತ್ತದೆ. ಈಗಲೂ ಹಲವರು, ದಾದಾ ಹಯಾತ್ ಗುಹೆಯಲ್ಲಿ ಜೀವಂತನಾಗಿದ್ದಾನೆ, ಅಲ್ಲಾಹ್‌ನ ಸಂದೇಶವನ್ನು ಹೊತ್ತು ಸಂಚರಿಸುತ್ತಿದ್ದಾನೆ ಎಂದು ನಂಬುತ್ತಾರೆ. ಇನ್ನೊಂದೆಡೆ, ದಾದಾ ಹಯಾತ್ ತನ್ನ ಧ್ಯೇಯ ಸಾಧನೆಯಾದ ನಂತರ ಗುಹೆಯೊಳಗೆ ಇಂದಿಗೂ ಕಾಣುವ ಸುರಂಗ ಮಾರ್ಗದ ಮುಖಾಂತರ ಮಧ್ಯ ಏಷ್ಯಾಗೆ ಹೋದನೆಂದು ಹಲವರು ನಂಬುತ್ತಾರೆ. ಹಿಂದೂಗಳ ಅಭಿ ಪ್ರಾಯದಲ್ಲಿ ಸುರಂಗ ಮಾರ್ಗವು ಕಾಶಿಯಲ್ಲಿ ಅಂತ್ಯಗೊಳ್ಳುತ್ತದೆ.

ಈ ರೀತಿ ಎರಡೂ ಸಮುದಾಯದ ಜನತೆ ಭಿನ್ನವಾದ ಅಭಿಪ್ರಾಯಗಳನ್ನು ಹೊಂದಿದ್ದರೂ ಸ್ಥಳೀಯರು ಎಂದಿಗೂ ಈ ವಿಷಯದಲ್ಲಿ ವಿವಾದ ಉಂಟುಮಾಡಿರಲಿಲ್ಲ ಎಂಬುದು ಗಮನಾರ್ಹ ಅಂಶ. ಈ ನಂಬಿಕೆಗಳ ಹಿಂದಿರುವ ಇತಿಹಾಸವಾಗಲೀ ಪುರಾಣವಾಗಲೀ ಸೌಹಾರ್ದತೆಗೆ ಪೂರಕವಾಗಿದ್ದವೇ ಹೊರತು ವ್ಯತಿರಿಕ್ತವಾಗಿರಲಿಲ್ಲ.

ದಾದಾ ಹಯಾತ್ ಸಾಯುವ ಮುನ್ನ ತನ್ನ ಆದರ್ಶ ಧ್ಯೇಯಗಳನ್ನು ಸಾಧಿಸಲು ಸೈಯದ್‌ಶಾಹ ಜಮಾಲುದ್ದೀನ್ ಮಗ್ರಿಬಿ ಖಲಂದರ್ ಎಂಬಾತನನ್ನು ನೇಮಿಸಿದ್ದನೆಂದು

ಇಲ್ಲಿನ ದಾಖಲೆಗಳು ತಿಳಿಸುತ್ತವೆ. ಮಗ್ರಿಬಿಯನ್ನು ಬಾಬಾ ಬುಡನ್ ಎಂದೂ ಕರೆಯಲಾಗುತ್ತಿತ್ತು. ಭಾರತಕ್ಕೆ ಯಮನ್ ದೇಶದಿಂದ ಕಾಫಿಯನ್ನು ಬಾಬಾ ಬುಡನ್ ಪ್ರಪ್ರಥಮವಾಗಿ ತಂದನೆಂದು ದಾಖಲಾಗಿದೆ. ಆದ್ದರಿಂದಲೇ ಈ ಶಿಖರವನ್ನು ಜನರು ಬಾಬಾ ಬುಡನ್‌ಗಿರಿ ಎಂದೇ ಕರೆಯಲಾರಂಭಿಸಿದರು. ಇಂದಿಗೂ ಸಹ ಕಾಫಿ ಬೆಳೆಗಾರರು ತಮ್ಮ ಉತ್ಪನ್ನವನ್ನು ಮಾರುಕಟ್ಟೆಗೆ ಒಯ್ಯುವ ಮುನ್ನ ಆತನ ದರ್ಗಾಕ್ಕೆ ನಮಿಸಿಯೇ ಮುಂದುವರಿಯುತ್ತಾರೆ. ಬಿಜಾಪುರದ ಆದಿಲ್‌ಶಾಹ್ ದೊರೆಯೂ ಸಹ ಬಾಬಾ ಬುಡನ್‌ನನ್ನು ಆಧ್ಯಾತ್ಮಿಕ ಗುರು ಎಂದು ಸ್ವೀಕರಿಸಿ ದಾದಾ ಹಯಾತ್‌ನ ದರ್ಗಾವನ್ನು ಅಭಿವೃದ್ಧಿಪಡಿಸಲು ನೆರವು ನೀಡಿದ್ದನೆಂದು ದಾಖಲಾಗಿದೆ. ೧೧೨೫ರಲ್ಲಿ ಕೊನೆಯುಸಿರೆಳೆಯುವ ಮುನ್ನ ಬಾಬಾ ಬುಡನ್, ಸೈಯದ್ ಮೀರ್ ಹುಸೇನ್ ಶಾ ಖಾದ್ರಿ ಎಂಬಾತನನ್ನು ಅವನ ಉತ್ತರಾಧಿಕಾರಿಯಾಗಿ ನೇಮಿಸಿ ಆತನಿಗೆ ದರ್ಗಾದ ಮೇಲ್ವಿಚಾರಣೆಯನ್ನು ವಹಿಸಿದ್ದನೆಂದು ದಾಖಲಿಸಲಾಗಿದೆ. ಈ ಶಾ ಖಾದ್ರಿಯನ್ನು ಸಜ್ಜಾದ್-ಎ-ನಶೀನ್ ಎಂದೂ ಕರೆಯಲಾಗುತ್ತದೆ. ಇಂದಿಗೂ ಸಹ ಇದೇ ತಲೆಮಾರಿನವರು ದರ್ಗಾದ ಮೇಲ್ವಿಚಾರಕರಾಗಿರುತ್ತಾರೆ. ಈಗಿನ ಸಜ್ಜಾದ್-ಎ-ನಶೀನ್ ಸೈಯ್ಯದ್ ಪೀರ್ ಮಹಮದ್ ಶಾ ಖಾದ್ರಿ ಕಲಂದರು ಈ ತಲೆಮಾರಿನವರಲ್ಲಿ ೧೫ನೆಯವರಾಗಿರುತ್ತಾರೆ.

ಇತ್ತೀಚಿನ ಇತಿಹಾಸವನ್ನು ಅವಲೋಕನ ಮಾಡಿದರೆ ಹೈದರ್ ಆಲಿ ಈ ದರ್ಗಾಗೆ ಹಲವಾರು ಗ್ರಾಮಗಳನ್ನು ಉಂಬಳಿಯಾಗಿ ನೀಡಿದ್ದನೆಂದೂ, ಕಿತ್ತೂರು ರಾಣಿ ಚೆನ್ನಮ್ಮ ಸಹ ಇಲ್ಲಿಗೆ ಸಾಕಷ್ಟು ಧನ ಸಹಾಯ ಮಾಡಿರುವುದಾಗಿಯೂ ದಾಖಲೆಯಾಗಿದೆ. ಮೈಸೂರಿನ ಮಹಾರಾಜರಾಗಿದ್ದ ಕೃಷ್ಣರಾಜ ಒಡೆಯರ್ ಇಲ್ಲಿಗೆ ಆಗಾಗ್ಗೆ ಭೇಟಿ ನೀಡುತ್ತಿದ್ದರೆಂದು ಹೇಳಲಾಗುತ್ತದೆ. ಎಲ್ಲಾ ಮಹಾರಾಜರುಗಳೂ ಇಲ್ಲಿನ ಸಜ್ಜಾದ್-ಎ-ನಶೀನ್‌ಗಳನ್ನು ಮಠಾಧಿಪತಿಗಳಂತೆಯೇ ಗೌರವಿಸುತ್ತಿದ್ದರು. ಮೈಸೂರು ಮಹಾರಾಜರು, ಇತರ ಸ್ವಾಮಿಗಳಿಗೆ ನೀಡುವಂತೆ ಸಜ್ಜಾದ್-ಎ-ನಶೀನ್‌ಗೂ ಸಹ ನ್ಯಾಯಾಲಯಗಳಲ್ಲಿ ಹಾಜರಾಗದಂತೆ ರಿಯಾಯಿತಿ ನೀಡಿದ್ದರು. ಹೀಗಾಗಿ ಇಷ್ಟು ವರ್ಷಗಳಲ್ಲಿ ದರ್ಗಾದ ಮೇಲ್ವಿಚಾರಣೆಯ ಬಗ್ಗೆ ಸಜ್ಜಾದ್-ಎ-ನಶೀನರ ಸಿಂಧುತ್ವವನ್ನು, ಹಕ್ಕನ್ನು ಯಾರೂ ಪ್ರಶ್ನಿಸಿರಲಿಲ್ಲ. ಅಷ್ಟೇ ಅಲ್ಲದೆ ಈ ಎಲ್ಲಾ ವಿಭಿನ್ನತೆಗಳ ನಡುವೆಯೂ ಬಾಬಾ ಬುಡನ್‌ಗಿರಿ ಹಿಂದೂಗಳು, ಮುಸಲ್ಮಾನರು ಇಬ್ಬರಿಗೂ ಪವಿತ್ರ ಯಾತ್ರಾ ಸ್ಥಳವಾಗಿದೆ. ವರ್ಷಂಪ್ರತಿ ನಡೆಯುವ ಉರುಸ್‌ನಲ್ಲಿ ಎಲ್ಲಾ ಧರ್ಮಗಳ ಜನರೂ ಭಾಗವಹಿಸುತ್ತಾರೆ. ಎರಡೂ ಸಮುದಾಯಗಳ ಜನತೆ ದರ್ಗಾವನ್ನಾಗಲೀ, ದತ್ತಪೀಠವನ್ನಾಗಲೀ ಸಮನಾಗಿ ಗೌರವಿಸುತ್ತಾರೆ. ಹಾಗಾಗಿ ಭಾರತೀಯ ಬಹುಮುಖೀ ಸಂಸ್ಕೃತಿಗೆ ಬಾಬಾ ಬುಡನ್‌ಗಿರಿ ಒಂದು ನಿದರ್ಶನವಾಗಿದೆ.

ಆದರೆ ೬೦ರ ದಶಕದಲ್ಲಿ, ಕರ್ನಾಟಕ ಸರ್ಕಾರದ ಎರಡು ಇಲಾಖೆಗಳು ದರ್ಗಾದ ಮೇಲ್ವಿಚಾರಣೆಯ ಬಗ್ಗೆ ವಿವಾದ ಹುಟ್ಟುಹಾಕಿದವು. ಆಗ ಈ ಬಾಬಾ ಬುಡನ್‌ಗಿರಿ ದತ್ತಪೀಠವು ಮುಜರಾಯಿ ಇಲಾಖೆಗೆ ಒಳಪಟ್ಟಿತ್ತು. ಇದರ ಸ್ವಾಧೀನ ತನಗೆ ಬರಬೇಕೆಂದು ವಕ್ಫ್ ಇಲಾಖೆ ತಕರಾರು ಹೂಡಿತ್ತು. ಅಂದಿನ ಸಜ್ಜಾದ್-ಎ-ನಶೀನ್ ಈ ವಿವಾದಕ್ಕೆ ಸಂಬಂಧಪಟ್ಟಂತೆ ಮುಜರಾಯಿ ಇಲಾಖೆಯನ್ನೇ ಬೆಂಬಲಿಸಿದ್ದರು. ದರ್ಗಾ ಹಿಂದು ಮುಸ್ಲಿಂ ಎರಡೂ ಸಮುದಾಯಕ್ಕೆ ಸೇರಿದ್ದರಿಂದ ಅದು ಮುಜರಾಯಿ ಇಲಾಖೆಯ ಸ್ವಾಧೀನಕ್ಕೆ ಒಳಪಟ್ಟಿತ್ತೆಂದು ಅವರು ವಾದಿಸಿದ್ದರು. ಆದರೆ ೧೯೭೫ರಲ್ಲಿ ರಾಜ್ಯ ಸರ್ಕಾರವು ಶಾ ಖಾದ್ರಿಯವರ ಈ ಸೆಕ್ಯುಲರ್ ನಿಲುವನ್ನು ಸಮರ್ಥಿಸದೆ ದರ್ಗಾದ ಸ್ವಾಧೀನವನ್ನು ವಕ್ಫ್ ಇಲಾಖೆಗೆ ವಹಿಸಿಕೊಟ್ಟಿತು. ಆದರೆ ಚಿಕ್ಕಮಗಳೂರಿನ ಸೆಷನ್ಸ್ ನ್ಯಾಯಾಧೀಶರು ಸರ್ಕಾರದ ಆದೇಶವನ್ನು ಅಸಿಂಧು ಎಂದು ತೀರ್ಪು ನೀಡಿದ ನಂತರ ವಕ್ಫ್ ಇಲಾಖೆ ೧೯೮೫ರಲ್ಲಿ ಉಚ್ಚ ನ್ಯಾಯಾಲಯದಲ್ಲಿ ದಾವೆ ಹೂಡಿತ್ತು. ಈ ದಾವೆ ತಿರಸ್ಕೃತವಾಯಿತು. ನಂತರ ಸರ್ವೋಚ್ಚ ನ್ಯಾಯಾಲಯವು ಸಹ ಸೆಷನ್ಸ್ ನ್ಯಾಯಾಲಯದ ತೀರ್ಪನ್ನು ಎತ್ತಿ ಹಿಡಿಯಿತು. ೧೯೯೧ರಲ್ಲಿ ಕರ್ನಾಟಕದ ಉಚ್ಚ ನ್ಯಾಯಾಲಯವು ತನ್ನ ಆದೇಶದಲ್ಲಿ ದರ್ಗಾ ಮುಜರಾಯಿ ಇಲಾಖೆಗೆ ಸೇರಿದ್ದೆಂದು, ಸಜ್ಜಾದ್-ಎ-ನಶೀನ್ ದರ್ಗಾದ ಹಕ್ಕುದಾರನೆಂದು ತೀರ್ಪು ನೀಡಿತ್ತು. ಈ ತೀರ್ಪಿನ ಪ್ರಕಾರ ದರ್ಗಾದಲ್ಲಿ ನಡೆಯುವ ಪೂಜಾ ವಿಧಿಗಳನ್ನು ಉಲ್ಲಂಘಿಸುವಂತಿಲ್ಲ, ಗುಹೆಯ ಒಳಗೆ ಖುರಾನ್‌ನ ಪ್ರಾರಂಭದ ಸಾಲುಗಳನ್ನು ಫತಿಹಾಗಳನ್ನು ಪಠಿಸುವುದು, ಗುಹೆಯ ಹೊರಗೆ ದತ್ತಾತ್ರೇಯನಿಗೆ ತೆಂಗಿನಕಾಯಿ ಒಡೆಯುವ ಪೂಜಾ ವಿಧಿಗಳನ್ನು ಯಾವುದೇ ಕಾರಣಕ್ಕೂ ಉಲ್ಲಘಿಸುವಂತಿಲ್ಲ ಮತ್ತು ೧೯೭೫ರಲ್ಲಿ ನಡೆಯುತ್ತಿದ್ದ ಪೂಜಾ ವಿಧಿವಿಧಾನಗಳನ್ನೇ ಇಂದಿಗೂ ಅನುಸರಿಸ ತಕ್ಕದ್ದಾಗಿದೆ. ಅರ್ಥಾತ್ ಈ ಪದ್ಧತಿಗಳನ್ನು ಹೊರತಾಗಿ ಬೇರಾವ ಪದ್ಧತಿಗಳನ್ನೂ ಇಲ್ಲಿ ಪಾಲಿಸುವಂತಿಲ್ಲ. ೮೦ರ ದಶಕದ ವರೆಗೂ ಸರ್ಕಾರದ ಎರಡು ಇಲಾಖೆಗಳ ನಡುವಿನ ಈ ಒಂದು ವಿವಾದ ಹೊರತುಪಡಿಸಿ ಬಾಬಾ ಬುಡನ್‌ಗಿರಿಯಲ್ಲಿ ಯಾವುದೇ ವಿವಾದ ತಲೆದೋರಿರಲಿಲ್ಲ.

ಹಿಂದೂ ಮುಸ್ಲಿಂ ಸಮುದಾಯದ ಜನರು ಯಾವುದೇ ವಿವಾದವಿಲ್ಲದೆ ಬಾಬಾ ಬುಡನ್‌ಗಿರಿಯಲ್ಲಿ ಪೂಜೆ ಸಲ್ಲಿಸುತ್ತಿದ್ದರೂ, ೧೯೮೦ರವರೆಗೂ ಅಲ್ಲಿ ದತ್ತ ಜಯಂತಿ ನಡೆಯುತ್ತಿರಲಿಲ್ಲ. ೧೯೮೨ರಲ್ಲಿ ವಿ.ಹಿಂ.ಪ.ನ ಕಾರ್ಯಕರ್ತರು ಪ್ರಥಮ ಬಾರಿಗೆ ದತ್ತ ಜಯಂತಿ ಆಚರಿಸಿದ ನಂತರ ಅನೇಕ ಹಿಂದೂ ಸ್ವಾಮೀಜಿಗಳು, ಮಠಾಧೀಶರು ಅಲ್ಲಿಗೆ ಭೇಟಿ ನೀಡಲಾರಂಭಿಸಿದರು. ೧೯೮೯ರಲ್ಲಿ ಹಾಲಿ ಗೃಹಮಂತ್ರಿ- ಉಪಪ್ರಧಾನ ಮಂತ್ರಿಗಳಾದ ಎಲ್. ಕೆ. ಅಡ್ವಾನಿಯವರು ನಡೆಸಿದ ರಥಯಾತ್ರೆ, ಅದರ ಹಿನ್ನೆಲೆಯಲ್ಲಿಯೇ ಉಂಟಾದ ಗಲಭೆಗಳು, ಪ್ರಕ್ಷುಬ್ಧ ವಾತಾವರಣ, ಇವೆಲ್ಲವೂ ಹಿಂದುತ್ವವಾದಿಗಳಿಗೆ ಪೂರಕವಾಗಿದ್ದವು. ಇದೇ ಪ್ರಕ್ಷುಬ್ಧ ವಾತಾವರಣದಲ್ಲಿಯೇ ಸಂಘಪರಿವಾರವು ದತ್ತಪೀಠ ಸಂರಕ್ಷಣಾ ಸಮಿತಿಯನ್ನು ಆರಂಭಿಸಿತು. ದತ್ತಪೀಠದ ಸಂರಕ್ಷಣೆಗಿಂತಲೂ ಹೆಚ್ಚಿಗೆ ಅದನ್ನು ಆಕ್ರಮಿಸಿಕೊಳ್ಳುವ ಉದ್ದೇಶದಿಂದಲೇ ಸ್ಥಾಪಿಸಲಾದ ಈ ಸಮಿತಿಯ ಮುಖ್ಯ ಧ್ಯೇಯ ಬಾಬಾ ಬುಡನ್‌ಗಿರಿಯಲ್ಲಿ ನೆಲೆಸಿದ ಸೌಹಾರ್ದತೆಯನ್ನು ಹಾಳು ಮಾಡುವುದೇ ಆಗಿತ್ತು. ಅಂದಿನಿಂದ ಪ್ರತಿವರ್ಷ ಡಿಸೆಂಬರ್ ೩ರಂದು ದತ್ತ ಜಯಂತಿಯ ಆಚರಣೆ ಆರಂಭಗೊಂಡಿತು. ೧೯೮೯ರ ಡಿಸೆಂಬರ್ ೩ರಿಂದ ಪ್ರಪ್ರಥಮವಾಗಿ ದತ್ತ ಜಯಂತಿಯನ್ನು ಆಚರಿಸಲಾಯಿತು. ೧೯೯೨ರಲ್ಲಿ ಬಾಬ್ರಿ ಮಸೀದಿ ಧ್ವಂಸಗೊಂಡ ನಂತರದ ಸನ್ನಿವೇಶದಲ್ಲಿ ಸಂಘಪರಿವಾರವು ದತ್ತ ಜಯಂತಿಯನ್ನು ಮೂರು ದಿನಗಳ ಕಾಲ ಆಚರಿಸಲಾರಂಭಿಸಿತು. ಉಚ್ಚ ನ್ಯಾಯಾಲಯದ ಆದೇಶಗಳನ್ನು ಉಲ್ಲಂಘಿಸಿ ಗುಹೆಯೊಳಗೆ ದತ್ತಾತ್ರೇಯನ ವಿಗ್ರಹವನ್ನು ಇರಿಸಲಾಯಿತು. ೧೯೯೩ರಲ್ಲಿ ದತ್ತಾತ್ರೇಯನ ಫೋಟೋ ಇರಿಸಿ ಹೋಮ ಯಜ್ಞಗಳನ್ನು ಮಾಡಲಾಯಿತು. ಸಂಘಪರಿವಾರವು ಇಷ್ಟೆಲ್ಲಾ ನ್ಯಾಯಾಲಯದ ಆದೇಶವನ್ನು ಉಲ್ಲಂಘಿಸಿದರೂ, ಸರ್ಕಾರವು ಕೈಕಟ್ಟಿ ಕುಳಿತಿದ್ದುದು ನಮ್ಮ ಕೆಲವು 'ಸೆಕ್ಯುಲರ್' ಪಕ್ಷಗಳ ಆಡಳಿತ ವೈಖರಿಗೆ ಹಿಡಿದ ಕೈಗನ್ನಡಿ.

ಈ ಸನ್ನಿವೇಶವನ್ನು ಉಪಯೋಗಿಸಿಕೊಂಡು ಸಂಘಪರಿವಾರವು ತನ್ನ ಕೋಮುವಾದ ಸ್ವರೂಪವನ್ನು ಅನಾವರಣಗೊಳಿಸಲಾರಂಭಿಸಿತು. ಶತಮಾನಗಳಿಂದಲೂ ಸೌಹಾರ್ದತೆಯಿಂದ ಬಾಳಿದ್ದ ಚಿಕ್ಕಮಗಳೂರಿನ ಜನತೆಯ ಮನದಲ್ಲಿ ಕೋಮುದ್ವೇಷದ ವಿಷಬೀಜ ಬಿತ್ತಲಾಯಿತು. ಚಿಕ್ಕಮಗಳೂರಿನಲ್ಲಿ ಇಂದಿಗೂ ಪ್ರತ್ಯೇಕ ಮುಸ್ಲಿಂ ಮೊಹಲ್ಲಾ ಇಲ್ಲದಿರುವುದು ಅಲ್ಲಿರುವ ಕೋಮು ಸೌಹಾರ್ದತೆಗೆ ಸಾಕ್ಷಿ. ಅಲ್ಲಿನ ಸ್ಥಳೀಯರಿಗೆ ಇಂದಿಗೂ ಈ ವಿವಾದದಲ್ಲಿ ಯಾವುದೇ ಆಸಕ್ತಿಯಿಲ್ಲದಿರುವುದು ಕಂಡುಬರುತ್ತದೆ. ಆದರೂ ಹಲವಾರು ಕಾರಣಗಳಿಂದ ಸಂಘಪರಿವಾರದ ಹುನ್ನಾರಗಳಿಗೆ ಉತ್ತಮ ಬೆಂಬಲ ದೊರೆಯುತ್ತಿದೆ.

ವಿ.ಹಿಂ.ಪ. ಮತ್ತು ಭಜರಂಗದಳವು ಬಿತ್ತಿದ ವಿಷಬೀಜಗಳು ಮೊಳಕೆಯಾಗಲು ೫ ವರ್ಷಗಳೇ ಬೇಕಾಯಿತು. ೧೯೯೮ರಲ್ಲಿ ಈ ನಿಟ್ಟಿನಲ್ಲಿ ಸಂಘಪರಿವಾರವು ತನ್ನ ಧ್ಯೇಯ ಸಾಧನೆಯಲ್ಲಿ ಒಂದು ಮೈಲಿಗಲ್ಲನ್ನು ಮುಟ್ಟಿತೆಂದು ಹೇಳಬಹುದು. ೧೯೯೮ರಲ್ಲಿ ಸಂಘ ಪರಿವಾರವು ಇಡೀ ಕರ್ನಾಟಕದಾದ್ಯಂತ ೫ ರಥಯಾತ್ರೆಗಳನ್ನು ಕೈಗೊಂಡಿತು. ಈ ಐದು ರಥಯಾತ್ರೆಗಳು ಡಿಸೆಂಬರ್ ೧ರಂದು, ಅಂದರೆ ೩ನೆಯ ತಾರೀಖಿನ ದತ್ತ ಜಯಂತಿಗೂ ಮುನ್ನ ಚಿಕ್ಕಮಗಳೂರು ಸೇರುವ ಯೋಜನೆ ಮಾಡಲಾಗಿತ್ತು. ಸಂಘಪರಿವಾರದ ಈ ಪಿತೂರಿಗೆ ಸುತ್ತಲಿನ ಊರುಗಳಿಂದ ಉತ್ತಮ ಬೆಂಬಲವೂ ದೊರೆಯಿತು. ಜೊತೆಗೆ ಜಿಲ್ಲೆಯ ಸರ್ಕಾರಿ ಕಾರ್ಯಯಂತ್ರಗಳೂ, ಪೊಲೀಸ್ ಇಲಾಖೆ, ಸಹ ಸಂಘಪರಿವಾರದ ಕಾರ್ಯಕ್ರಮಗಳಿಗೆ ಪೂರಕವಾಗಿ ಕಾರ್ಯ ನಿರ್ವಹಿಸಿದವು. ೧೯೯೮ರ ಡಿಸೆಂಬರ್ ೧ರಂದು ೫ ರಥಯಾತ್ರೆಗಳು ಒಂದುಗೂಡುವ ಸಂದರ್ಭದಲ್ಲಿ ನಿಷೇಧಾಜ್ಞೆ(ಸೆಕ್ಷನ್ ೧೪೪) ಜಾರಿಯಲ್ಲಿತ್ತು. ಆದರೂ ಬಾಬಾ ಬುಡನ್‌ಗಿರಿ ದರ್ಗಾದ ಬಳಿ ನೆರೆದಿದ್ದ ೧೦ ಸಾವಿರ ಜನರನ್ನು ನಿಯಂತ್ರಿಸಲು ಪೊಲೀಸರು ಯಾವುದೇ ಕ್ರಮ ಕೈಗೊಳ್ಳಲಿಲ್ಲ. ಅಷ್ಟೇ ಅಲ್ಲದೆ ಅಲ್ಲಿ ಮೆರವಣಿಗೆ ನಡೆಸಲೂ ಅವಕಾಶ ಮಾಡಿ ಕೊಡಲಾಯಿತು. ಡಿಸೆಂಬರ್ ೨ರಂದು ಭಜರಂಗದಳದ ಕಾರ್ಯಕರ್ತರು ದರ್ಗಾದ ಮೇಲಿದ್ದ ಇಸ್ಲಾಂನ ಬಾವುಟವನ್ನು ಹರಿದು ಹಾಕಿ ಕೇಸರಿ ಬಾವುಟ ಹಾರಿಸುವಲ್ಲಿ ಯಶಸ್ವಿಯಾದರು. ಇಷ್ಟಾದರೂ ಅಲ್ಲಿದ್ದ ಪೊಲೀಸ್ ಇಲಾಖೆ ಯಾವುದೇ ಕ್ರಮ ಕೈಗೊಳ್ಳದೆ ಇದ್ದುದರಿಂದ ವಿ.ಹಿಂ.ಪ.ದವರು ದತ್ತಾತ್ರೇಯನ ವಿಗ್ರಹ ಪ್ರತಿಷ್ಠಾಪಿಸಿ ಪೂಜೆಯನ್ನು ನೆರವೇರಿಸಿದರು. ೩ ದಿನಗಳ ಕಾಲ ಯಾವುದೇ ಅಡೆತಡೆಯಿಲ್ಲದೆ ಪೂಜೆ ನೆರವೇರಿತು. ಕಾನೂನು ಪಾಲನೆ ಮಾಡುವ ನೆಪದಲ್ಲಿ ಪೊಲೀಸರು ಯಾವುದೇ ಕ್ರಮ ಕೈಗೊಳ್ಳಲಿಲ್ಲ. ಇದರ ವಿರುದ್ಧ ನಡೆದ ಪ್ರತಿಭಟನೆಗಳೆಲ್ಲವೂ ಪಶ್ಚಿಮ ಘಟ್ಟದಲ್ಲಿ ಕೇವಲ ಅರಣ್ಯ ರೋದನವಾಯಿತಷ್ಟೆ.

ಈ ಬೆಳವಣಿಗೆಗಳು ಸಂಘಪರಿವಾರದ ದತ್ತಪೀಠ ವಿಮೋಚನಾ ಚಳುವಳಿಗೆ ಪ್ರೋತ್ಸಾಹದಾಯಕವಾಗಿತ್ತು. ತಮ್ಮ ಕೋಮುವಾದಿ ಪ್ರಚಾರದಿಂದ ಸಾಕಷ್ಟು ಜನ ಬೆಂಬಲ ಗಳಿಸಿದ ಭಜರಂಗದಳ ೧೯೯೯ರಲ್ಲಿಯೂ ದತ್ತ ಜಯಂತಿಯನ್ನು ಅದ್ದೂರಿಯಾಗಿ ನೆರವೇರಿಸಿತು. ೧೯೯೯ರಲ್ಲಿಯೇ ಭಜರಂಗದಳವು ದತ್ತಪೀಠ ವಿಮೋಚನಾ ಪಡೆಯನ್ನು ಸ್ಥಾಪಿಸಿತು. ಈಗಾಗಲೇ ಈ ಪಡೆಯು ದತ್ತಪೀಠವನ್ನು ಹಿಂದೂಗಳ ವಶಕ್ಕೆ ನೀಡಬೇಕೆಂದೂ ಇಲ್ಲವಾದಲ್ಲಿ ರಕ್ತಪಾತವಾಗುವುದೆಂದೂ ಎಚ್ಚರಿಕೆ ನೀಡಿದೆ. ಈ

ಪಡೆಯನ್ನು ಸ್ಥಾಪಿಸಿದ ಮರುವರ್ಷವೇ, ಅಂದರೆ ೨೦೦೦ದ ಜನವರಿಯಲ್ಲಿ ರಂಜಾನ್ ಹಬ್ಬದ ಮುನ್ನ ಬಸವನಹಳ್ಳಿಯಲ್ಲಿ ನಡೆದ ಕೋಮುಗಲಭೆಗಳು ಸಂಘಪರಿವಾರದ ಹುನ್ನಾರಗಳಿಗೆ ನಾಂದಿ ಹಾಡಿತೆಂದು ಹೇಳಬಹುದು.

ಬಾಬರಿ ಮಸೀದಿಯ ವಿವಾದದಂತೆಯೇ ಇಲ್ಲಿಯೂ ಸಹ ಸಂಘಪರಿವಾರವು ಅನೇಕ ಸುಳ್ಳು ಕಥೆಗಳನ್ನು ಸೃಷ್ಟಿ ಮಾಡಿದೆ. ಇಲ್ಲದ ಇತಿಹಾಸಗಳನ್ನು ಸೃಷ್ಟಿಸಿದೆ. ತನ್ನ ವಾದವನ್ನು ಸಮರ್ಥಿಸಿಕೊಳ್ಳಲು ಕಂತೆಗಟ್ಟಲೆ ಸುಳ್ಳು ಇತಿಹಾಸವನ್ನು ಸೃಷ್ಟಿಸಿದೆ. ಹಿಂದುತ್ವವಾದಿಗಳು ಬಾಬಾ ಬುಡನ್‌ಗಿರಿಗೂ ಮುಸ್ಲಿಮರಿಗೂ ಯಾವುದೇ ಸಂಬಂಧವಿಲ್ಲ ಎಂದು ಪ್ರತಿಪಾದಿಸುತ್ತಾರೆ. ಇದು ಹಿಂದೂ ದೇವಾಲಯವಾಗಿದ್ದು, ೨೦ನೆಯ ಶತಮಾನದಲ್ಲಿ ಮುಸ್ಲಿಮರು ಇದನ್ನು ಆಕ್ರಮಿಸಿ ಕೊಂಡಿದ್ದಾರೆಂದು ಹೇಳುತ್ತಾರೆ. ಆದರೆ ಲಭ್ಯವಿರುವ ಐತಿಹಾಸಿಕ ಸರ್ಕಾರಿ ಅಧಿಕೃತ ದಾಖಲೆಗಳು ಈ ಆರೋಪವನ್ನು ಸ್ಪಷ್ಟವಾಗಿ ನಿರಾಕರಿಸುತ್ತವೆ. ದಾದಾ ಹಯಾತ್ ರವರು ಬಿಜಾಪುರ ಸುಲ್ತಾನ ಆದಿಲ್ ಶಾಹ್‌ನ ಬಳಿ ಇದ್ದುದರಿಂದ ಆತನ ಸಮಾಧಿ ಬಿಜಾಪುರದಲ್ಲಿಯೇ ಇದೆ. ಬಾಬಾ ಬುಡನ್‌ಗಿರಿಯಲ್ಲಿರುವುದು ದಾದಾ ಹಯಾತ್‌ನ ಸಮಾಧಿಯಲ್ಲ ಎಂದು ಸಂಘ ಪರಿವಾರ ಪ್ರತಿಪಾದಿಸುತ್ತದೆ. ಈ ಅಭಿಪ್ರಾಯಕ್ಕೆ ಯಾವುದೇ ಸಾಕ್ಷಿ ಆಧಾರಗಳಿಲ್ಲವೆಂದು ಹೇಳಬೇಕಿಲ್ಲ.

ದಾದಾ ಹಯಾತ್ ತಪಸ್ಸು ಮಾಡಿದ ಜಾಗವನ್ನು ಮುಸ್ಲಿಮರು ಚಿಲ್ಲಾ ಎಂದು ಕರೆಯುತ್ತಾರೆ. ದಾದಾ ಹಯಾತ್ ಪಾಳೇಗಾರರ ಹಿಡಿತದಿಂದ ವಿಮೋಚನೆ ದೊರಕಿಸಿದ ಮಾ ಮಾ ಜಗನಿ ಎಂಬ ರಾಣಿಯು ಅಲ್ಲಿ ನೆಲೆಸಿದ್ದಳೆಂದು ಮುಸ್ಲಿಮರು ನಂಬಿರುತ್ತಾರೆ. ಆದರೆ ಹಿಂದೂಗಳು ಅದೇ ಸ್ಥಳವನ್ನು ಸತಿ ಅನುಸೂಯ ತಪಸ್ಸು ಮಾಡಿದ ಸ್ಥಳ ಎಂದು ವಾದಿಸುತ್ತಾರೆ. ೧೭೭೦ರಲ್ಲಿ ಹೈದರ್ ಆಲಿ ಈ ಜಾಗವನ್ನು ಆಕ್ರಮಿಸಿ ಅಲ್ಲಿ ದರ್ಗಾ ನಡೆಸಲು ಒಬ್ಬ ಮುಸ್ಲಿಂನನ್ನು ನೇಮಿಸಿದ್ದಾಗಿಯೂ, ಆತನ ಸಮಾಧಿ ಸಮೀಪದ ಜನ್ನತ್ ನಗರದಲ್ಲಿ ಈಗಲೂ ಇರುವುದಾಗಿಯೂ ಭಜರಂಗದಳದವರು ವಾದಿಸುತ್ತಾರೆ. ಅಷ್ಟೇ ಅಲ್ಲದೆ ದರ್ಗಾದ ಬಳಿ ಇರುವ ಬಾವುಟ ಹೊತ್ತ ಕಂಬವು ತ್ರಿಶೂಲವೆಂದು, ಕಾಫಿ ವೇದಗಳ ಕಾಲದಲ್ಲೇ ಇದ್ದುದರಿಂದ ಬಾಬಾ ಬುಡನ್ ಕಾಫಿ ತರಲಿಲ್ಲವೆಂದೂ ವಾದಿಸುತ್ತಾರೆ. ಅಣುಬಾಂಬ್ ಸಹ ವೇದಗಳಲ್ಲಿ ಇತ್ತು ಎಂದು ವಾದಿಸುವವರಿಗೆ ವೇದಗಳಲ್ಲಿ ಕಾಫಿ ದೊರೆಯುವುದಿಲ್ಲವೇ !

ಅಯೋಧ್ಯಾ ವಿವಾದದಲ್ಲಿ ಸಂಘಪರಿವಾರವು ಕೈಗೊಂಡ ಅಪಪ್ರಚಾರದ ಹಿನ್ನೆಲೆಯಲ್ಲಿ ಈ ಎಲ್ಲಾ ವಾದ ವಿವಾದಗಳು ನಿರಾಧಾರವೆಂದು ಸ್ಪಷ್ಟವಾಗಿ ಹೇಳಬಹುದು. ಬಾಬಾ ಬುಡನ್‌ಗಿರಿಯಲ್ಲಿ ಸಜ್ಜಾದ್-ಎ-ನಶೀನ್ ಆಗಿರುವ ಶಾ ಖಾದ್ರಿ ಯಾವುದೇ ಲೆಕ್ಕ ಪತ್ರ ಇಟ್ಟಿರುವುದಿಲ್ಲ, ಅಲ್ಲಿ ಗೋಹತ್ಯೆ ಮಾಡಲಾಗುತ್ತಿದೆ, ಆತನ ಕುಟುಂಬದವರ ಸಮಾಧಿಗಳನ್ನೂ ಅಲ್ಲಿಯೇ ನಿರ್ಮಿಸಲಾಗುತ್ತಿದೆ, ಶಾ ಖಾದ್ರಿ ಸಾವಿರಾರು ಎಕರೆ ಭೂಮಿಯನ್ನು ಕಬಳಿಸಿದ್ದಾನೆ, ಈ ಎಲ್ಲಾ ಸಂಘಪರಿವಾರದ ಆಪಾದನೆಗಳೂ ನಿರಾಧಾರವಾದುವೆ. ನಮ್ಮ ದೇಶದಲ್ಲಿ ಯಾವುದೇ ಮಠವಾಗಲೀ, ಆಶ್ರಮವಾಗಲೀ, ದೇವಾಲಯವಾಗಲೀ ಲೆಕ್ಕಪತ್ರ ಇಟ್ಟಿರುವುದಿಲ್ಲ. ಇಟ್ಟರೂ ಸರ್ಕಾರಕ್ಕೆ ಸಲ್ಲಿಸುವುದಿಲ್ಲ. ವಾಸ್ತವಾಂಶವೆಂದರೆ ಬಾಬಾ ಬುಡನ್ ದತ್ತಪೀಠಕ್ಕೆ ಸರ್ಕಾರದಿಂದ ಯಾವುದೇ ಅನುದಾನ ದೊರೆಯುತ್ತಿಲ್ಲ. ವರ್ಷಂಪ್ರತಿ ನಡೆಯುವ ಉರುಸ್‌ನಲ್ಲಿ ಸಂಗ್ರಹವಾಗುವ ಹಣದಿಂದಲೇ ಇಲ್ಲಿನ ಕಾರುಬಾರು ನಡೆಯುತ್ತದೆ. ಆದರೂ ವಾಸ್ತವತೆಯ ವಿರುದ್ಧ ಸಾಕ್ಷ್ಯಾಧಾರಗಳನ್ನು ಸೃಷ್ಟಿಸುವಲ್ಲಿ ಪರಿಣಿತಿ ಪಡೆದಿರುವ ಸಂಘಪರಿವಾರವು ಇಲ್ಲಿಯೂ ಅದೇ ತಂತ್ರವನ್ನು ಅನುಸರಿಸಿ ಜನತೆಯನ್ನು ತಪ್ಪುದಾರಿಗೆಳೆಯುತ್ತಿದೆ.

**ಅಯೋಧ್ಯೆಯ ನೆರಳಲ್ಲಿ**

ಈ ಎಲ್ಲಾ ಬೆಳವಣಿಗೆಗಳನ್ನು, ಸಂಘಪರಿವಾರದ ಹುನ್ನಾರಗಳನ್ನು ಅವಲೋಕಿಸಿದರೆ ಸಂಘಪರಿವಾರದ ನಾಯಕ ಪ್ರವೀಣ್ ತೊಗಾಡಿಯಾ ಹೇಳಿರುವಂತೆ ಬಾಬಾ ಬುಡನ್‌ಗಿರಿ ಕರ್ನಾಟಕದ ಅಯೋಧ್ಯೆಯಾದರೂ ಅಚ್ಚರಿಯೇನಿಲ್ಲ. ಈಗಾಗಲೇ ಸಂಘಪರಿವಾರವು ಈ ನಿಟ್ಟಿನಲ್ಲಿ ಎಲ್ಲಾ ವ್ಯವಸ್ಥೆಯನ್ನು ಮಾಡಿದೆ. ಗುಜರಾತ್‌ನ ಪ್ರಯೋಗದ ಹಿನ್ನೆಲೆಯಲ್ಲಿ ಸಂಘ ಪರಿವಾರವು ಇಲ್ಲಿಯೂ ತನ್ನ ಪ್ರಯೋಗವನ್ನು ಮುಂದುವರಿಸುವುದು ನಿಶ್ಚಿತ. ಆದರೆ ಗುಜರಾತ್‌ನ ಪ್ರಯೋಗ ಕರ್ನಾಟಕದಲ್ಲಿ ಯಶಸ್ವಿಯಾಗದಿರಬಹುದು. ಸಂಘಪರಿವಾರದವರಿಗೆ ಇಲ್ಲಿ ಗೋಧ್ರಾ ದೊರೆಯುವುದಿಲ್ಲ. ಆದರೂ ಗೋರಿಗಳನ್ನು ಅಗೆಯುವುದರಲ್ಲಿ ನಿಸ್ಸೀಮರಾದ ಸಂಘಪರಿವಾರ ಇಲ್ಲಿಯೂ ಇತಿಹಾಸವನ್ನು ಕೆದಕಬಹುದು. ಈಗಾಗಲೇ ಶ್ರೀರಂಗಪಟ್ಟಣದ ಮಾಜಿ ಶಾಸಕರು (ಬಿಜೆಪಿ) ಅಲ್ಲಿನ ಜುಮ್ಮಾ ಮಸೀದಿ ಒಂದು ಹಿಂದೂ ದೇವಾಲಯವಾಗಿತ್ತೆಂದು, ಟಿಪ್ಪುಸುಲ್ತಾನ್ ಅದನ್ನು ಕೆಡವಿ ಮಸೀದಿ ಕಟ್ಟಿಸಿದನೆಂದು ವಿವಾದ ಸೃಷ್ಟಿಸಿದ್ದಾರೆ. ಇದೇ ರೀತಿ ಇನ್ನೂ ಕೆಲವು ಅಸ್ಥಿಪಂಜರಗಳನ್ನು ಹೊರತೆಗೆಯುವುದಕ್ಕೆ ಅವಕಾಶಗಳು ವಿಪುಲವಾಗಿವೆ.

ಸಂಘಪರಿವಾರದ ಈ ಪಿತೂರಿಯನ್ನು ಎದುರಿಸಲು ಈಗಾಗಲೇ ಚಿಕ್ಕಮಗಳೂರಿನಲ್ಲಿ ಅನೇಕ ಪುರೋಗಾಮಿ ಶಕ್ತಿಗಳು ಸಜ್ಜಾಗಿವೆ. ಕಳೆದ ಡಿಸೆಂಬರ್ ೮ರಂದು ಹಾಗೂ ೨೮ರಂದು ನಡೆದ ರ್‍ಯಾಲಿಗಳು ಈ ನಿಟ್ಟಿನಲ್ಲಿ ಉತ್ತಮ ಬೆಳವಣಿಗೆಯಾಗಿವೆ. ಅಲ್ಲಿನ ಎಡಪಕ್ಷಗಳು, ಕೆಲವು ಮುಸ್ಲಿಂ ಸಂಘಟನೆಗಳು, ಮಾನವ ಹಕ್ಕುಗಳ ಸಂಘಟನೆಗಳು, ಪ್ರಗತಿಪರ ಸಂಘಟನೆಗಳು ಸಂಘಪರಿವಾರದ ಫ್ಯಾಸಿಸ್ಟ್ ಆಕ್ರಮಣವನ್ನು ಎದುರಿಸಲು ಸಜ್ಜಾಗುತ್ತಿವೆ. ಆದರೂ ಪುರೋಗಾಮಿ ಪ್ರಗತಿಪರ ಶಕ್ತಿಗಳಲ್ಲಿ ಐಕ್ಯತೆಯ ಕೊರತೆ ಎದ್ದು ಕಾಣುತ್ತಿದೆ. ತಾವೇ ನಿಜವಾದ ಹೋರಾಟಗಾರರು, ಅನ್ಯ ಸಂಘಟನೆಗಳಿಗೆ ಹೋರಾಡುವ ಹಕ್ಕು ಇರುವುದಿಲ್ಲ ಎಂಬಂತೆ ಕೆಲವು ಸಂಘಟನೆಗಳು ವರ್ತಿಸುತ್ತಿರುವುದು ವಿಷಾದನೀಯ. ಈ ಸಂಕುಚಿತ ಮನೋಭಾವದಿಂದ ಹೊರಬಂದು ಎಲ್ಲಾ ಪ್ರಗತಿಪರ ಶಕ್ತಿಗಳೂ ಒಂದಾಗಿ ಹೋರಾಟದಲ್ಲಿ ಸಂಘಪರಿವಾರದ ಹುನ್ನಾರಗಳನ್ನು ಎದುರಿಸಬಹುದು. ಪ್ರಗತಿಪರರು ಈಗ ತಮ್ಮ ಸ್ವಾರ್ಥ, ಅಹಂಭಾವ ತೊರೆದು ಒಂದಾಗಿ ಹೋರಾಡದಿದ್ದಲ್ಲಿ ಕರ್ನಾಟಕದಲ್ಲಿ ಅಯೋಧ್ಯೆ ನಿರ್ಮಾಣವಾಗುವ ದಿನಗಳು ದೂರವಿಲ್ಲ.

ನಾ. ದಿವಾಕರ
ಕೆನರಾ ಬ್ಯಾಂಕ್, ಮಹಾವೀರ ರಸ್ತೆ, ಬೆಳ್ಳೂರು–೫೭೧ ೪೧೮, ಮಂಡ್ಯ ಜಿಲ್ಲೆ

## ಸ್ವಾತಂತ್ರ್ಯ ಹಾಗೂ ನಾನು !

ಮೂವತ್ತೈದು ವರ್ಷಗಳ ಹಿಂದೆ-
ಆಗಸ್ಟ್ ಹದಿನೈದರಂದೇ
ಜನಿಸಿದ
ನನಗೊಂದು ಗರ್ವವಿತ್ತು!
''ಕೂಸು ಒಳ್ಳೇ ದಿನ ಹುಟ್ತು ನೋಡು''!
ನಮ್ಮಜ್ಜಿಯ ಹಾರೈಕೆಗೆ
ಒಳಗೊಳಗೆ ಪುಳಕ !
ಆದರೀಗ -
ಸ್ವಪ್ನ ಇಬ್ಬನಿಯಲಿ
ಬಿರಿದರಳಿದ ಭಾವಗಳೆಲ್ಲ
ಬಾಡಿಬಳಲಿ
ಕಮರಿ ಹೋದಾಗ
ನಾ- ಬೆಚ್ಚಿಬಿದ್ದು ನೋಡಿದೆ !
ಬಳಿಕದು



ಬೆಂದೊಡಲ ಕಾವು !
ಕಣ್ತೆರೆದಾಗ...
ನನ್ನಂತೆ ದೇಶಕೂ
ಹಬ್ಬ ! ಬಣ್ಣ ಬಣ್ಣದ ಹಬ್ಬ !!
''ನಿಜವಾಗಿಯೂ
ನಮ್ಮ ದೇಶ ಆಯಿತೇ ಸ್ವತಂತ್ರ ?''
''ನಾನಾಗಿರುವೆನೆ
ಈ ಬಂಧನದಿಂದ
ಸ್ವತಂತ್ರ ?!''
ಉತ್ತರ ದೊರಕದ ನೋವಿನಲಿ
ಕಣ್ಣೀರು ಹರಿಯಿತು ! ಬಾವುಟ ಹಾರಿತು ॥

ಶೋಭಾ ಪ್ರಮೋದ್
ಮಹಾಲಕ್ಷ್ಮಿ ಏಜನ್ಸೀಸ್
ಮನ್‌ಗಾಂ ಪೋಸ್ಟ್-೪೦೨ ೧೦೪
ಮಹಾರಾಷ್ಟ್ರ

*ಬಣ್ಣದ ತಗಡಿನ ತುತ್ತೂರಿ*
*ಕಾಸಿಗೆ ಕೊಂಡನು ಕಸ್ತೂರಿ.*

ಜಾತ್ರೆಯಲ್ಲಿ ಗದ್ದಲವೂ ಗದ್ದಲ. ಪಕ್ಕ ಪಕ್ಕದಲ್ಲಿ ನಡೆಯುತ್ತಿರುವವರೂ ಕೂಡ ಪರಸ್ಪರ ಸ್ವಲ್ಪ ಗಟ್ಟಿಯಾಗಿ ಮಾತನಾಡಿಕೊಳ್ಳದಿದ್ದರೆ ಯಾರ ಯಾರದೋ ಮಾತುಗಳು, ಯಾವ ಯಾವುದೋ ಶಬ್ದಗಳು ಕಿವಿಗೆ ಬಿದ್ದು ಆಭಾಸವಾಗುವ ಪರಿಸ್ಥಿತಿ. ದೇವಸ್ಥಾನದೊಳಗಿನ ಮಂತ್ರ ಘೋಷದ ಜತೆ ಜತೆಗೆ, ದೇವರ ಮುಂದಿನ ಘಂಟೆ ಬಾರಿಸುವವರ ನೂಕು ನುಗ್ಗಾಟದಲ್ಲಿ ಒಂದೇ ಶಬ್ದ ಮಾಡುತ್ತಿರುವ ಘಂಟೆ, ಹೊರಗೆ ವ್ಯಾಪಾರಿಗಳ ಚೀರಾಟ, ಕೊಳ್ಳುವವರ ಚೌಕಾಸಿ, ಮಕ್ಕಳ ಗೋಳಾಟ, ದೂರ ದೂರದ ಹಳ್ಳಿಗಳ ನೆಂಟರುಗಳ ಹರಟೆ, ಭಿಕ್ಷುಕರ ತಾರಕಸ್ವರದ ಸಂಗೀತ, ದೊಂಬರಾಟದವರ ಕುಣಿತ, ದೂರದಲ್ಲಿರುವ ಪರಿಚಯಸ್ಥರನ್ನು ಕೂಗಿ ಕರೆಯುವವರ ಹಾರಾಟ, ... ಹೀಗೆ ಇನ್ನೂ ಎಷ್ಟು ತರಹ ಗದ್ದಲ ಸಾಧ್ಯವೋ ಅಷ್ಟೂ ತರಹ. ಒಟ್ಟಿನಲ್ಲಿ ಸುತ್ತ ಹತ್ತು ಹಳ್ಳಿಯ ಗದ್ದಲವೆಲ್ಲಾ ಒಂದೇ ಜಾಗದಲ್ಲಿ ಕೇಂದ್ರೀಕೃತಗೊಂಡಿತ್ತು.

ತನ್ನವ್ವನ ಜೊತೆ ದೂರದ ಹಳ್ಳಿಯಿಂದ ಜಾತ್ರೆಗೆ ನಡೆದು ಬಂದಿದ್ದ ರಂಗನ ಕಣ್ಣುಗಳು ಹುಡುಕುತ್ತಿದ್ದುದು ಹೆಗಲಿಗೆ ಒಂದು ಪುಟ್ಟ ಅಂಗಡಿಯನ್ನೇ ಹೊತ್ತು ನಿಂತಿರುವ ವ್ಯಕ್ತಿಯನ್ನು.

* * *

# ಬಣ್ಣದ ತಗಡಿನ ತುತ್ತೂರಿ


**ಎಂ. ಜೆ. ರಾಜೀವಗೌಡ**


ಕಳೆದ ವರ್ಷದ ಜಾತ್ರೆಗೆ ಬಂದಿದ್ದ ರಂಗನ ಸ್ನೇಹಿತ ಜಾತ್ರೆಯಿಂದ ಒಂದು ಬಣ್ಣದ ಪೀಪಿ ತಂದಿದ್ದ. ಪೀಪಿ ಅಂದರೆ ತುತ್ತೂರಿಯಲ್ಲ. ಬಸ್ ಕಂಡಕ್ಟರ್ ಬಳಿ ಇರುವಂಥದೇ! ಆದರೆ ಇದು ಪ್ಲಾಸ್ಟಿಕ್ಕಿನದು. ಆ ಪೀಪಿಯಿಂದ ಹೊರಟ ಧ್ವನಿಗೆ ರಂಗನ ಮನಸ್ಸು ಎಷ್ಟು ಮರುಳಾಯಿತೆಂದರೆ ಅಂಥದೇ ಒಂದನ್ನು ತನಗೂ ಕೊಡಿಸುವಂತೆ ಅವ್ವನಿಗೆ ದುಂಬಾಲು ಬಿದ್ದ. ಅವರಮ್ಮ ಕೂಲಿ ಮಾಡಿ ಹೊಟ್ಟೆ ಹೊರೆಯುವಂಥವಳಾದರೂ ಹತ್ತು ಪೈಸೆಯ ಪೀಪಿ ಕೊಡಿಸಲಾರದಷ್ಟು ಕಠಿಣ ಮನಸ್ಸಿನವಳೇನೂ ಆಗಿರಲಿಲ್ಲ. ಆದರೆ ಜಾತ್ರೆ ಮುಗಿದಿತ್ತು. ಬೇಕೆಂದರೂ ಇನ್ನೊಂದು ಜಾತ್ರೆಯವರೆಗೂ ಪೀಪಿ ಸಿಗುತ್ತಿರಲಿಲ್ಲ.

ಮುಂದಿನ ಜಾತ್ರೆಗೆ ಪೀಪಿ ಖಂಡಿತಾ ಕೊಡಿಸುತ್ತೇನೆಂದು ಆಶ್ವಾಸನೆ ಕೊಟ್ಟರೂ ಸುಮಾರು ಒಂದು ತಿಂಗಳು ಪೀಪಿಯ ನಾದದ ಸೆಳೆತದಿಂದ ಏಳೆಂಟು ವರ್ಷದ ರಂಗನಿಗೆ ಹೊರ ಬರಲಾಗಿರಲಿಲ್ಲ.

ಈ ಜಾತ್ರೆಗೆ ಸುಮಾರು ದಿನಗಳ ಮುಂಚಿನಿಂದಲೇ ಸಾಕ್ಷಾತ್ ಪೀಪಿಯೇ ರಂಗನ ಕನಸಿಗೇ ಬಂದು ಎಚ್ಚರಿಸಲಾರಂಭಿಸಿತ್ತು. ಆದ್ದರಿಂದಲೇ ರಂಗ ಅವ್ವ ಹೇಳುವ ಕೆಲಸಗಳನ್ನೆಲ್ಲಾ ಶ್ರದ್ಧೆ ವಹಿಸಿ ಮಾಡುತ್ತಾ ಬಂದ – ಶಾಲೆಗೆ ಹೋಗುವುದನ್ನೊಂದುಳಿದು – ಇದನ್ನು ಮಾತ್ರ ಅವರವ್ವ ಬಲವಂತದಿಂದ ಪ್ರತಿದಿನ ಮಾಡಿಸಬೇಕಿತ್ತು.

ಎರಡನೆ ತರಗತಿಯಲ್ಲಿದ್ದ ರಂಗನಿಗೆ ಪುಸ್ತಕವನ್ನು ತಲೆ ಕೆಳಕಾಗಿ ಹಿಡಿದು ಶಾಲೆಯಲ್ಲಿ ಮಾಸ್ತರು ಓದಿದ್ದ ಪಾಠವನ್ನು ಮನೆಯಲ್ಲಿ ಸುಮ್ಮನೆ ಪಟಪಟನೆ ಹೇಳಿಕೊಂಡು ಹೋಗುವ ಕಲೆ ಚೆನ್ನಾಗಿ ಸಿದ್ಧಿಸಿತ್ತು.

ಇಂತಹ ಸಮಯದಲ್ಲಿ ಮಾಡುತ್ತಿದ್ದ ಕೆಲಸವನ್ನು ಬಿಟ್ಟು ಮಗನನ್ನು ದಿಟ್ಟಿಸುತ್ತಿದ್ದ ತಾಯಿಗೆ ''ಎಷ್ಟು ಸಾವ್ರ ಕರ್ಚಾದ್ರೂ ಸರಿ – ನನ್ಮಗನ್ನ ದೊಡ್ಡೋದು ಓದಿಸ್ಬೇಕು'' ಅನಿಸುತ್ತಿತ್ತು. ಇಂತಹ ತಾಯಿ ರಂಗನಂತಹ ಮಗನಿಗೆ ಯಃಕಶ್ಚಿತ್ ಒಂದು ಪೀಪಿ ಕೊಡಿಸಲಾರದಷ್ಟು ಸಣ್ಣವಳಾಗಲು ಸಾಧ್ಯವೆ?

ಜಾತ್ರೆಗೆ ಹೊರಡುವ ಸಮಯದಲ್ಲಿ ಅವ್ವ ರಂಗನ ಕೈಗೆ ನಾಲ್ಕಾಣೆ ಕೊಟ್ಟು ''ಇಟ್ಕೊ ಅಕಸ್ಮಾತ್ ಜಾತ್ರೇಲಿ ನಂತಾವ ಇರೋ ದುಡ್ಡೆಲ್ಲಾ ಮುಗಿದ್ರೆ ನಿಂಗೆ ಪೀಪಿ ತಕ್ಕಾಳಕ್ಕೆ ಇರ್ಲಿ'' ಅಂದಾಗ ರಂಗನಿಗೆ ಸ್ವರ್ಗಕ್ಕೆ ಮೂರೇ ಗೇಣು.

ಜಾತ್ರೆಗೆ ಬರದೇ ಇದ್ದ ತನ್ನ ಸ್ನೇಹಿತರಿಗೆಲ್ಲಾ ತಾನು ಜಾತ್ರೆಯಿಂದ ತರಲಿರುವ ಪೀಪಿಯ ಬಗ್ಗೆ ಬಡಾಯಿ ಕೊಚ್ಚಿ, ಅವರೆಲ್ಲರ ಹೊಟ್ಟೆ ಉರಿಸಿ, ಯಾವುದೋ ಅಮೂಲ್ಯ ವಸ್ತುವೊಂದನ್ನು ಜೋಪಾನವಾಗಿ ತರಲು ಸರ್ವ ಸನ್ನದ್ಧನಾಗಿ ಹೊರಟ ವೀರನೊಬ್ಬನ ಗತ್ತಿನಲ್ಲಿ ಅವ್ವನ ಹಿಂದೆ ಹೆಜ್ಜೆ ಹಾಕಿದ್ದ.

* * *



## ಸುದ್ದಿ-ಸ್ವಾರ(ಹ)ಸ್ಯ!

ನಾಗಪ್ಪ ಹತ್ಯೆಗೆ ಕಾರಣ ಸರ್ಕಾರ!
- ವಿರೋಧ ಪಕ್ಷ

ಸರ್ಕಾರದ ವಿರೋಧಿಗಳಿಗೆ ಧಿಕ್ಕಾರ
- ಆಡಳಿತ ಪಕ್ಷ



ಜನಸಾಮಾನ್ಯ:
ಅತ್ತಂಗೆ, ಸತ್ತಂಗೆ ಮಾಡೋದ್
ನಿಲ್ಸಿ, ದಿನಾ ಸಾಯೋ ನಮ್ಮ ಬಗ್ಗೆ
ಒಂದಿಷ್ಟು ಗಮನ ಹರಿಸಿ ಸ್ವಾಮಿ!

- ಎಸ್. ಶಶಿಕಾಂತ್, ಬೆಂಗಳೂರು

ಅವ್ವನ ಹಿಂದೆ ಸುತ್ತಿ ಸುತ್ತಿ ಸಾಕಾಗಿಹೋಗಿದ್ದ ರಂಗನ ಕಣ್ಣಲ್ಲಿ ಪೀಪಿ ಮಾರುವವನು ಇನ್ನೂ ಕಾಣದೆ ಇದ್ದ ಆತಂಕ ಹೆಚ್ಚುತ್ತಿತ್ತು. ಸಂಜೆಯಾಗುತ್ತಿತ್ತು, ಇಷ್ಟರಲ್ಲಾಗಲೇ ಮೂರ್ನಾಲ್ಕು ಕಡೆ ಪಾನಕ ಕುಡಿದಾಗಿತ್ತು. ಸಾಕಷ್ಟು ಹುಡುಗರ ಕೈಯಲ್ಲಿ ಬಣ್ಣ ಬಣ್ಣದ ಬಲೂನುಗಳು, ಗಿರಿಗಿಟ್ಲೆಗಳು, ಹಾಗೂ ಪೀಪಿಗಳೂ ಕೂಡ ಇದ್ದವು. ಅವರು ಅವುಗಳಿಂದಾಗಲೇ ಶಬ್ದಗಳನ್ನೂ ಹೊರಡಿಸುತ್ತಿದ್ದರು. ಹೊತ್ತು ಕಳೆದಂತೆ ರಂಗನಿಗೆ ಜಾತ್ರೆಯ ಎಲ್ಲಾ ಗದ್ದಲಗಳಿಗಿಂತ ಹೆಚ್ಚಾಗಿ ಬರೀ ಪೀಪಿಗಳ ಪೀಈ...ಪೀಈ ಸದ್ದೇ ಎಲ್ಲಾ ದಿಕ್ಕುಗಳಿಂದ ಬಂದು ಕಿವಿಗೆ ಬಿದ್ದು ಹೊಟ್ಟೆಯುರಿಯುತ್ತಿತ್ತು.

ಕೊನೆಗೆ ತಡೆಯಲಾರದೆ ಅಂಗಡಿಯಿಂದ ಅಂಗಡಿಗೆ ಬಿರಬಿರನೆ ತನ್ನನ್ನೂ ಎಳೆದೊಯ್ದು ಬರೀ ಬಾಯಿ ಮಾತಿನ ವ್ಯಾಪಾರ ಮಾತ್ರ ಮಾಡುತ್ತಿದ್ದ ಅವ್ವನನ್ನು ಜಗ್ಗಿ ನಿಲ್ಲಿಸಿದ. ''ಏನಾ ?'' ಎಂದ ಅವ್ವನ ಕಡೆ ನೀರು ತುಂಬಿಕೊಳ್ಳುತ್ತಿದ್ದ ಕಣ್ಣುಗಳಿಂದ ನೋಡುತ್ತಾ ಬೆಳಗಿನಿಂದ ಭದ್ರವಾಗಿದ್ದ ನಾಲ್ಕಾಣೆಯನ್ನು ಅಂಗೈ ತೆರೆದು ತೋರಿಸಿದ.

ಅವ್ವನಿಗೆ ಕ್ಷಣಮಾತ್ರದಲ್ಲಿ ಅರ್ಥವಾಯಿತು. ''ಅಯ್ಯಾ... ಈಸೊತ್ತು ಹೇಳಬಾರದಿತ್ತಾ ಮಗಾ ?. ಬಾ...'' ಎನ್ನುತ್ತಾ ಅವನನ್ನು ಜಾತ್ರೆಯ ಹೊರ ಅಂಚಿಗೆ ಎಳೆತಂದಳು.

ಒಂದು ಉದ್ದನೆಯ ಕೋಲಿಗೆ ಮೂರ್ನಾಲ್ಕು ಅಡ್ಡ ಕಡ್ಡಿಗಳನ್ನು ಕಟ್ಟಿ ಅವುಗಳಿಗೆಲ್ಲಾ, ರಿಬ್ಬನ್, ಹೇರ್ ಪಿನ್ನು, ಸರಗಳು, ಸಣ್ಣ ಪರ್ಸುಗಳು, ಬಣ್ಣ ಬಣ್ಣದ ಟೋಪಿಗಳು, ಬಲೂನುಗಳು, ಪೀಪಿಗಳು – ಹೀಗೆ ಇನ್ನೂ ಏನೇನೋ ಸಿಕ್ಕಿಸಿಕೊಂಡು – ಒಟ್ಟಿನಲ್ಲಿ ಸಣ್ಣದೊಂದು ಟೂರಿಂಗ್ ಷಾಪಿಂಗ್ ಸೆಂಟರ್ ಹೆಗಲಿಗೆ ಒರಗಿಸಿಕೊಂಡು ಬಿಡುವಿಲ್ಲದೆ ವ್ಯಾಪಾರ ಮಾಡುತ್ತಿದ್ದ ಐದಾರು ಜನ ಅಲ್ಲಿದ್ದರು.

ಒಂದು ಪೀಪಿಗಾಗಿ ಒಬ್ಬೊಬ್ಬನ ಹತ್ತಿರವೂ ಐದ್ಹತ್ತು ನಿಮಿಷಗಳ ವಾಗ್ಯುದ್ಧ ನಡುಸುತ್ತಾ ಹೋದ ಆಕೆಗೆ ತನ್ನ ಮಗನ ಕಾತುರ ಅರ್ಥವಾಗಿರಲಿಲ್ಲ. ಇಲ್ಲದಿದ್ದರೆ ಅಲ್ಲಿಗೆ ಬಂದ ತಕ್ಷಣ ಅವನಿಗೆ ಪೀಪಿ ಕೊಂಡು ಕೊಟ್ಟುಬಿಡುತ್ತಿದ್ದಳು. ಇಲ್ಲಿ ಆಕೆ ಒಬ್ಬೊಬ್ಬನ ಹತ್ತಿರವೂ ಚೌಕಾಸಿ ಮಾಡಿ ಕಿತ್ತಾಡಿ, ಮುಂದಿನವನ ಬಳಿ ಹೋಗುತ್ತಿದ್ದರೆ ರಂಗನಿಗೆ ತನ್ನವ್ವ ತನಗೆ ಪೀಪಿ ಕೊಡಿಸುವಂತಿಲ್ಲ ಎಂಬ ಅನುಮಾನ ಶುರುವಾಯಿತು. ಕೊನೆಯವನ ಬಳಿ ಬರುವಷ್ಟರಲ್ಲಿ ಅವನ ಅಳು ಕಟ್ಟೆಯೊಡೆದು ಕಣ್ಣು, ಮೂಗುಗಳಿಂದ ಸಶಬ್ದವಾಗಿ ಹೊರ ಧುಮುಕಿತು.

ತಬ್ಬಿಬ್ಬಾದ ಅವ್ವ ''ಯಾಕಾ...? ಏನಾತಲೇ...?'' ಎಂದಾಗ ಅಳುತ್ತಳುತ್ತಲೇ ತನಗೆ ಎಂತದೋ ಒಂದು ಪೀಪಿ ಕೊಡಿಸುವಂತೆ ಹೇಳಿದ. ''ಅದೇ ಅಲ್ವ ನಾನೂ ಮಾಡ್ತಿರೋದು.... ಮುಚ್ಗಾ ಬಾಯಿ....'' ಸಿಡುಕಿದ ಆಕೆ ಅದೇ ಸಿಡುಕಲ್ಲೇ ಅವನ ಕೈಯಲ್ಲಿದ್ದ ನಾಲ್ಕಾಣೆಯನ್ನು ಕಿತ್ತುಕೊಂಡು ಅಂಗಡಿಯವನ ಕೈಗೆ ಕೊಟ್ಟು ಒಂದು ಪೀಪಿ ಕೊಡು ವಂತೆ ಕೇಳಿದಳು. ಅವನು ಕೊಟ್ಟ ಪೀಪಿಯನ್ನು ರಂಗನ ಕೈಗೆ ತುರುಕಿ ಅವನ ಎಡಗೈ ಯನ್ನು ಹಿಡಿದು ದರ ದರ ಎಳೆಯುತ್ತಾ ತನ್ನ ಊರಿನಿಂದ ಬಂದವರ ಗುಂಪನ್ನು ಕೂಡಿ ಕೊಳ್ಳಲು ಹೊರಟಳು. ಪೀಪಿಯನ್ನು ಮುಷ್ಟಿಯಲ್ಲಿ ಮುಚ್ಚಿ ಹಿಡಿದ ರಂಗ ಅದೇ ಕೈಯಿಂ ದಲೇ ಕಣ್ಣು, ಮೂಗುಗಳನ್ನು ಉಜ್ಜಿಕೊಳ್ಳುತ್ತಾ ಅವ್ವನ ಹಿಂದೆ ಓಡಿದಂತೆ ಹೋದ.

* * *

''ಇಲ್ಲೇ ಇರು'' ಎಂದು ರಂಗನನ್ನು ತನ್ನೂರಿನವರ ಗುಂಪಿನ ಬಳಿ ಬಿಟ್ಟ ಅವನ ಅವ್ವ, ಇನ್ನೊಮ್ಮೆ ದೇವಸ್ಥಾನದ ಕಡೆಗೆ ಬಿರಬಿರನೆ ಹೊರಟಳು. ಹಾಗೆ ಹೊರಟ ಅವಳ ಬೆನ್ನನ್ನೇ ನೋಡುತ್ತಾ ರಂಗನಿಗೆ ತನ್ನವ್ವ ಎಷ್ಟು ಒಳ್ಳೆಯವಳು ಅನ್ನಿಸಿತು.

ಕೈಯಲ್ಲಿದ್ದ ಪೀಪಿಯನ್ನು ಮೊದಲಬಾರಿ ನೋಡಿದ ರಂಗ. ಪ್ಲಾಸ್ಟಿಕ್ಕಿನ ಕೆಂಪು ಬಣ್ಣದ ಪೀಪಿ. ಯಾವಾಗಲೋ ಅವ್ವನ ಜೊತೆಗೆ ಊರಿಗೆಂದು ಹೊರಟಿದ್ದಾಗ ಬಸ್ಸಿನ ಕಂಡಕ್ಟರ್ ಊದುತ್ತಿದ್ದ ಪೀಪಿಗಿಂತಲೂ, ಕಳೆದ ವರ್ಷ ಇವನ ನೆಮ್ಮದಿ ಕೆಡಿಸಿದ್ದ ಇವನ ಸ್ನೇಹಿತನ ಪೀಪಿಗಿಂತಲೂ ಇದು ಹೆಚ್ಚು ಮೋಹಕವಾಗಿ ಕಂಡಿತು. ಅದನ್ನು ನೋಡುತ್ತಾ, ನೋಡುತ್ತಾ, ಅವನಿಗೆ ಅದನ್ನು ಊದುವ ಬಯಕೆ ತೀವ್ರವಾಗತೊಡಗಿತು.

ಇನ್ನೂ ಸಿಂಬಳ ಸುರಿಯುತ್ತಿದ್ದ ಮೂಗನ್ನು ಎಡ ತೋಳಿಗೆ ಒಮ್ಮೆ ಗಟ್ಟಿಯಾಗಿ ಉಜ್ಜಿ, ಕುಕ್ಕುರುಗಾಲಲ್ಲಿ ಕೂತು ಪೀಪಿಯನ್ನು ನಿಧಾನವಾಗಿ ತುಟಿಗಳ ಮಧ್ಯೆ ಇಟ್ಟು, ಕಣ್ಣಿನ ದೃಷ್ಟಿಯನ್ನು ಪೀಪಿಯ ಮೇಲೆ ನೆಟ್ಟು, ಕೆನ್ನೆಗಳನ್ನು ಊದಿಸಿ ಗಾಳಿಯನ್ನು ನಿಧಾನವಾಗಿ ಪೀಪಿಯ ಬಾಯೊಳಕ್ಕೆ ಊದತೊಡಗಿದ.

ಪೀ... ..ಪೀ.. ... ಎಂದು ಹೊರಟ ಶಬ್ದ ಅವನನ್ನು ಎಷ್ಟು ತನ್ಮಯಗೊಳಿಸಿತ್ತೆಂದರೆ ಅವನು ಅದನ್ನು ಊದ ತೊಡಗಿದಂತೆಲ್ಲಾ ನಿಧಾನವಾಗಿ ಆ ಜಾತ್ರೆಯ ಮಿಕ್ಕೆಲ್ಲಾ ಶಬ್ದಗಳೂ ಅವನ ಕಿವಿಗೆ ಕೇಳದಾಗತೊಡಗಿದವು. ಸ್ವಲ್ಪ ಹೊತ್ತಿಗೆ ಎಲ್ಲಾ ಸ್ತಬ್ದವಾಗಿ ಅವನ ಪೀಪಿಯ ಶಬ್ದ ಮಾತ್ರ ಅವನ ಕಿವಿಗೆ ಕೇಳಿಸುತ್ತಿತ್ತು.

ಪೀಪಿ ಊದಿದಂತೆಲ್ಲಾ ರಂಗನ ಕಣ್ಮುಂದೆ ಇದ್ದ ಜಾತ್ರೆಯ ಸಕಲ ಜನ, ದನ, ವಸ್ತು, ದೇವಸ್ಥಾನಗಳೆಲ್ಲಾ ಕಿರಿದಾಗತೊಡಗಿದವು. ರಂಗ ಕೂತಿದ್ದಂತೆಯೇ ಬೆಟ್ಟದಂತೆ ಬೆಳೆಯತೊಡಗಿದ್ದ. ಈಗ ಅವನ ಕಣ್ಣಿಗೆ ಸುತ್ತ ಮುತ್ತ ಇಡೀ ಜಾತ್ರೆಯ ಜನ ದಿಕ್ಕೆಟ್ಟ ಇರುವೆಗಳ ಗುಂಪಿನಂತೆ ಕಾಣತೊಡಗಿದ್ದರು. ತನ್ನ ಪೀಪಿಯ ಸದ್ದಿಗೆ ಅವರೆಲ್ಲಾ ಹೆದರಿ ಓಡುತ್ತಿದ್ದಾರೆ ಎನಿಸಿ ರಂಗನಿಗೆ ಪೀಪಿ ಊದುತ್ತಿರುವಂತೆಯೇ ನಗು ಬಂತು.

''ಸಾಕ್ ನಿಲ್ಸಾಲೇ ನಿನ್ ಮ್ಯಾಳ.... ಥುತ್ ಕಿವಿ ತೂತಾತು'' ಎನ್ನುತ್ತಾ ಅವರವ್ವ ಬೆನ್ನಿನ ಮೇಲೆ ಒಂದು ಗುದ್ದಿದಾಗ, ಸರ್ರನೆ ಚಿಕ್ಕವನಾಗಿಬಿಟ್ಟ ರಂಗ. ಅವನಿಗೆ ಅವರವ್ವ ಗುದ್ದಿದ್ದಕ್ಕಿಂತ ತನ್ನೆದುರು ಇರುವೆಗಳಂತೆ ಸಣ್ಣಗಾಗಿ ಹೋಗಿದ್ದ ಜನ ತನ್ನ ಪೀಪಿಯ ಸದ್ದು ನಿಂತೊಡನೆ ಮೊದಲಿನಂತಾಗಿದ್ದನ್ನು ಪಿಳಿ ಪಿಳಿ ಕಣ್ಣು ಬಿಟ್ಟು ನೋಡುತ್ತಿದ್ದ.

''ಅವನ್ಯಾವನೋ ಜೋಗಪ್ಪ ಪೀಪಿ ಊದಿದ್ರೆ ಊರುಡುಗ್ರೆಲ್ಲಾ ಅವ್ನಿಂದೆ ಹೋತಿದ್ರಂತೆ'' ಅಂತ ಸ್ಕೂಲಲ್ಲಿ ಮೇಷ್ಟ್ರು ಯಾವಾಗ್ಲೋ ಹೇಳಿದ ಕತೆ ನೆನಪಿಸಿಕೊಂಡು, ''ಇಂದೂ ಅಂಗೆ ನಾನು ಪೀಪಿ ಊದಿದ್ರೆ ಎಲ್ಲಾ ಇರುವೆತರ ಆಗ್ಬಿಡ್ತಾರೆ'' ಎಂದು ತನ್ನ ಪೀಪಿಯ ಶಕ್ತಿಗೆ ಹಿರಿ ಹಿರಿ ಹಿಗ್ಗಿದ.

ಸೂರ್ಯ ಮುಳುಗಿದ್ದ, ಇನ್ನೂ ಕತ್ತಲಾಗಿರಲಿಲ್ಲ. ಜಾತ್ರೆ ನಿಧಾನಕ್ಕೆ ಕರಗತೊಡಗಿತ್ತು. ಎಲ್ಲರೂ ಬುರುಗು-ಬತ್ತಾಸು ಕೊಂಡು ಊರುಗಳ ಕಡೆಗೆ ಹೊರಡತೊಡಗಿದ್ದರು. ರಂಗನ ತಾಯಿ ''ಏನಾ ಬುರುಗು-ಬತ್ತಾಸು ಬೇಕೇನಾ..?'' ಎಂದಾಗ ರಂಗ ಹಿಂದು ಮುಂದು ಯೋಚಿಸದೆ ''ಬ್ಯಾಡಾ'' ಎಂದ. ''ಎಲಾ ಇವ್ನ ವರ್ಸಕ್ಕೊಂದು ಜಾತ್ರೆ ಈವತ್ತು ಬುರುಗು-ಬತ್ತಾಸು ಬ್ಯಾಡಾ ಅನ್ನೋ ಹುಡುಗ್ರು ದೇಸದಾಗೆ ಇರಲ್ಲ-ಇವ್ನಿಗೇನಾಗಿದೆ'' ಎಂದು ಸೋಜಿಗಪಟ್ಟಳು.

ಇರುವ ಒಂದು ಬಾಯಿಯಲ್ಲಿ ಪೀಪಿ ಇಟ್ಟುಕೊಂಡು ಊದುತ್ತಿದ್ದರೆ ಇನ್ನು ಬುರುಗು-ಬತ್ತಾಸು ತಿನ್ನುವುದು ಯಾವ ಬಾಯಿಯಿಂದ? ಅದಕ್ಕೆ ರಂಗ ಬೇಡ ಎಂದಿದ್ದ. ನಂತರ ತಾಯಿಯೊಡನೆ ಊರಕಡೆ ಹೆಜ್ಜೆ ಹಾಕಿದ. ಮನೆಬಾಗಿಲಿಗೆ ಬರುವಷ್ಟರಲ್ಲಿ ಕತ್ತಲಾಗಿತ್ತು.

* * *

ಬೆಳಗಾಗೆದ್ದು ಆಕೆ ತನ್ನ ಪಕ್ಕದಲ್ಲಿ ಮಲಗಿದ್ದ ರಂಗನನ್ನು ಕಾಣದೆ ಅರೆ ಎಲ್ಹೋದ ಇವ್ನು ಎಂದುಕೊಳ್ಳುತ್ತಿರುವಾಗಲೇ ಗುಡಿಸಿಲಿನ ಹಿಂಭಾಗದಿಂದ ಕ್ಷೀಣವಾಗಿ ಕೇಳಿಬರುತ್ತಿದ್ದ ಪೀ.. .. ಪೀ.. .. ಸದ್ದು, ರಂಗನ ಇರುವನ್ನು ಸೂಚಿಸಿತು. ''ಥುತ್ ಬೆಳಗ್ ಬೆಳಗ್ಗೇನೆ ಸುರು ಇವಂದು'' ಎಂದುಕೊಳ್ಳುತ್ತಾ ಎದ್ದು ಹಿತ್ತಲಿಗೆ ಬಂದಾಗ ಅಲ್ಲಿ ಬೇಲಿಯ ಹಿಂದೆ ಎಡ ಕೈಯಲ್ಲಿ ಚಡ್ಡಿ ಮುದುರಿ ಹಿಡಿದು ಕುಕ್ಕುರುಗಾಲಲ್ಲಿ ಕೂತು ಬಲಗೈಯಿಂದ ಪೀಪಿ ಹಿಡಿದು ಕಣ್ಣುಮುಚ್ಚಿ ಅದನ್ನು ಊದುತ್ತಾ ಕೂತಿದ್ದ ರಂಗ ಕಂಡ. ಅವನ ಎದುರಲ್ಲಿ ಕೂತಿದ್ದ ಕಂತ್ರಿ ನಾಯೊಂದು ಪುಂಗಿಯ ಚಲನೆಗೆ ಹೆಡೆಯಾಡಿಸುವ ಹಾವಿನಂತೆ ಬಾಲವಲ್ಲಾಡಿಸುತ್ತಾ ರಂಗನ ಮುಖವನ್ನೊಮ್ಮೆ-ಹಿಂಭಾಗಕ್ಕೊಮ್ಮೆ ನೋಡುತ್ತಾ ಕುಳಿತಿತ್ತು. ತನ್ನ ಗಾಯನವನ್ನು ತನ್ಮಯತೆಯಿಂದ ಕೇಳುತ್ತಿದ್ದ ಏಕಮಾತ್ರ ಶ್ರೋತೃ ಚಂಗನೆ ನೆಗೆದು ಮಾಯವಾಗಿದ್ದನ್ನು ರಂಗ ಅರೆತೆರೆದ ಕಣ್ಣುಗಳಿಂದ ಆಶ್ಚರ್ಯದಿಂದ ಗಮನಿಸಿ ಕಣ್ಣುಪೂರ್ತಿ ತೆರೆದ. ಎದುರಿಗೆ ಕೈಯಲ್ಲಿ ಕೋಲುಹಿಡಿದು

ತನ್ನತ್ತ ಬಿರುಗಾಳಿಯಂತೆ ಬರುತ್ತಿದ್ದ ಅವ್ವನನ್ನು ಕಂಡೊಡನೆ ರಂಗನಿಗೆ ನಾಯಿ ಓಡಿದ್ದೇಕೆಂದು ಅರ್ಥವಾಯಿತು. ಆದರೆ ಅವ್ವನ ಗುರಿ ತಾನು ಎಂಬುದನ್ನು ಬಲ್ಲ ರಂಗ ತಕ್ಷಣ ಅದೇ ಸ್ಥಿತಿಯಲ್ಲಿ ಚಂಗನೆ ನೆಗೆದು ಇನ್ನೊಂದು ದಿಕ್ಕಿಗೆ ಓಡತೊಡಗಿದ.

''ಥೂ ನಿನ್ ಮುಂಡಾ ಮೋಚ, ... .. ಬೆಳಗಾಗೆದ್ದು ತಿಗಾ-ಮಗಾ ತೊಳ್ದು ಏನಾರಾ ಇಷ್ಟು ಉಂಡು ಇಸ್ಕೋಲಿಗೆ ಹೋಗಾನಾ ಅನ್ನೋದು ಬುಟ್ಟು ಪೀಪಿ ಊದ್ತಾ ಕುಂತವ್ನೆ .. .. ಏಯ್ ... ಬಾ ಮನೇಗೆ ಇವತ್ತು ನಿಂಗೆ ಗಾಚಾರ ಬಿಡಿಸ್ತೀನಿ ... ಬಾ ... ನಿನ್ ಮಕಾ ಮುಚ್ಚಾ'' ಎನ್ನುತ್ತಾ ಆಕೆ ತನ್ನ ಕೈಲಿದ್ದ ಕೋಲನ್ನು ರಂಗ ಓಡಿದ ದಿಕ್ಕಿಗೇ ಬೀಸಿದಳು.

* * *

ಓಡುತ್ತಾ, ಓಡುತ್ತಾ, ಊರ ಹೊರಕ್ಕೆ ಬಂದ ರಂಗ ಕಾಲುವೆಯ ನೀರಲ್ಲಿ ಅಂಗಾಂಗ ಶುದ್ಧಿ ಮಾಡಿಕೊಂಡು ಚಡ್ಡಿ ಏರಿಸಿಕೊಳ್ಳುತ್ತಾ ಊರಿಂದ ಬರುವ ದಾರಿಯ ಕಡೆ ವೀಕ್ಷಿಸಿದ. ಪೀಪಿ ಊದಿ ಊದಿ ತುಟಿಯೆಲ್ಲಾ ಉರಿಯುತ್ತಿತ್ತು, ಹೊಟ್ಟೆ ಖಾಲಿಯಾಗಿತ್ತು, ತಂಗಳು ತಿನ್ನಲು ಮನೆಗೆ ಹೋಗ್ಬೇಕಾಗಿತ್ತು. ಅವ್ವಂದೇನೂ ಭಯವಿಲ್ಲ. ಆದರೆ ಆಮೇಲೆ ಶಾಲೆಗೆ ಹೋಗ್ಬೇಕಾಗುತ್ತೆ ಅನ್ನೋದನ್ನ ನೆನೆಸಿಕೊಂಡೇ ರಂಗ ಮನೆಯ ಕಡೆ ಹೋಗದೆ ಇರಲು ತೀರ್ಮಾನಿಸಿದ.

ಅಷ್ಟರಲ್ಲಿ ಊರಕಡೆಯಿಂದ ಊರವರ ಎಮ್ಮೆಗಳನ್ನು ಮೇಯಿಸಲು ಹೊಡೆದುಕೊಂಡು ಬರುತ್ತಿದ್ದ ಲಚ್ಚಿ ಕಾಣಿಸಿದಳು. ಅವಳು ಹತ್ತಿರಾದಾಗ ''ಲಚ್ಚಕ್ಕಾ ನಾನು ಬತ್ತೀನೇ ಎಮ್ಮೆ ಮೇಯ್ಸಾಕೆ'' ಎಂದ. ಅವ್ಳು ''ಯಾಕೋ ಇಸ್ಕೂಲಿಗೆ ಹೋಗಲ್ವೇನೋ'' ಅಂದಿದ್ದಕ್ಕೆ ರಂಗ ''ಇಲ್ಲಕ್ಕಾ ಮೇಷ್ಟ್ರು ರಜಾ ಆಕವ್ರೆ. ಇಸ್ಕೂಲ್ ಇಲ್ಲಾ'' ಅಂತ ಸುಲಭವಾಗಿ ಸುಳ್ಳೇಳಿದ. ಏನಾರ ಉಂಡ್ಯೇನೋ ಎನ್ನುವ ಅವಳ ಪ್ರಶ್ನೆಗೆ ಅವಳ ಕೈಯಲ್ಲಿದ್ದ ಬುತ್ತಿಯನ್ನು ನೋಡುತ್ತಾ ಅದರೊಳಗಿನ ತಂಗಳು ಮುದ್ದೆಗಳನ್ನು, ಮೊಸರನ್ನು ಕಲ್ಪಿಸಿಕೊಂಡು ರಂಗ ''ಇನ್ನೂ ಇಲ್ಲಕ್ಕಾ'' ಎಂದ.

ಎಮ್ಮೆಗಳನ್ನು ನೀರಿಲ್ಲದ ಕೆರೆಯೊಳಕ್ಕೆ ಹೊಡೆದು ರಂಗ ಓಡಿಹೋಗಿ ಎರಡು ಹರಳೆಲೆ ಕಿತ್ತು ತಂದ. ಇಬ್ಬರೂ ಕೆರೆಯ ಕಟ್ಟೆಯ ಮೇಲೆ ಕೂತರು. ಹೊಟ್ಟೆ ತುಂಬಾ ಮುದ್ದೆ-ಮೊಸರು ತಿಂದರು. ಲಚ್ಚಿ ''ನೋಡ್ಕೊಳ್ಳೋ, ಎಮ್ಮೆ ಹೊಲದಾಕೆ ಏನಾರೂ ಹೋಗಿಬಿಟ್ಟೇತು'' ಎನ್ನುತ್ತಾ ಹೇಯ್-ಹೇಯ್ ಎನ್ನುತ್ತಾ ಕೋಲು ಬೀಸುತ್ತಾ ಎಮ್ಮೆಗಳನ್ನು ಕೆರೆಯ ಮಧ್ಯಕ್ಕೆ ಅಟ್ಟತೊಡಗಿದಳು.

ರಂಗ ಚಡ್ಡಿಯ ಜೇಬನ್ನು ತಡವುತ್ತಾ ಅಲ್ಲಿ ಅಡಗಿದ್ದ ಅವನ ಅಮೂಲ್ಯ ಆಸ್ತಿಯನ್ನು ಹೊರತೆಗೆದ. ಅದನ್ನು ಬೆರಳುಗಳಿಂದ ಒಮ್ಮೆ ತಿಕ್ಕಿ ಒರೆಸಿ ಬಾಯಿಗಿಟ್ಟುಕೊಂಡ. ನಿಧಾನವಾಗಿ ಪೀಪಿಯ ಸದ್ದು ಕೆರೆಯ ಅಂಗಳವನ್ನೆಲ್ಲಾ ತುಂಬತೊಡಗಿತು. ಈಗ ರಂಗನಿಗೆ ಗೋವಿನ ಹಾಡು ನೆನಪಾಗತೊಡಗಿತು. ತನ್ನೆಡೆಗೆ ಬರಲು ಹವಣಿಸುತ್ತಿದ್ದಂತಿದ್ದ ಎಮ್ಮೆಗಳನ್ನು ಮತ್ತೆ ಕೆರೆಯ ಮಧ್ಯಕ್ಕೆ ಅಟ್ಟುತ್ತಿದ್ದ ಲಚ್ಚಿ ಆ ಕತೆಯೊಳಗಿನ ಬೆಟ್ಟದಲ್ಲಿದ್ದ ಗವಿಯಲ್ಲಿನ ಹುಲಿಯಂತೆ ಕಾಣತೊಡಗಿದಳು.

ಒಂದೇ ಸಮನೆ ಗಂಟೆಗಟ್ಟಲೆ ಪೀಪಿ ಊದುತ್ತಲೇ ಓಡಾಡುತ್ತಾ ಎಮ್ಮೆಗಳನ್ನು ಆ ಕಡೆಯಿಂದ ಈ ಕಡೆ ಓಡಿಸುತ್ತಾ, ಒಮ್ಮೊಮ್ಮೆ ಎಮ್ಮೆಗಳು ಹೊಲಗಳಿಗೆ ನುಗ್ಗಿದರೂ ನೋಡದೆ ಕುಳಿತಿರುತ್ತಿದ್ದ ರಂಗನನ್ನು ಲಚ್ಚಿ ಗದರಿಸಿ ಎಮ್ಮೆಗಳನ್ನು ಮತ್ತೆ ಕೆರೆಗೆ ಹೊಡೆಸುತ್ತಾ ಇದ್ದಳು.

* * *

ಕತ್ತಲಾದಮೇಲೆ ಮೆಲ್ಲಗೆ ಮನೆಯೊಳಗಡಿಯಿಟ್ಟ ರಂಗನ ಕಡೆ ದುರುಗುಟ್ಟಿ ನೋಡಿದ ಅವನವ್ವ ''ಹೋಗು ಹಾಳಾಗಿ ಹೋಗು, ಯಾಕಾ ಬಂದಿದ್ದು-ಆ ದರಿದ್ರ ಪೀಪಿ ಊದ್ಕೊಂಡು-ಎಮ್ಮೆ ಮೇಸ್ಕೊಂಡಿರೋಗು.'' ಸುಮ್ಮನೇ ತಲೆ ಕೆರೆಯುತ್ತಾ, ನೆಲಾ ನೋಡುತ್ತಾ ನಿಂತ ಅವನನ್ನು ಸ್ವಲ್ಪಹೊತ್ತು ದುರುಗುಟ್ಟಿ ನೋಡಿ ''ತಗಾ ತಟ್ಟೆ ನನ್ಮಗನೆ'' ಎಂದಳು. ರಂಗ ಸುಮ್ಮನೆ ಉಂಡು ಮಲಗಿದ.

* * *

ಬೆಳಗಾಗೆದ್ದು ಮತ್ತೆ ಮಾಮೂಲಿನಂತೆ ರಂಗ ಕೆರೆಯ ಅಂಗಳಕ್ಕೆ ಓಡಿದ. ಲಚ್ಚಿ ತರುವ ಮುದ್ದೆ-ಮೊಸರಿಗಿಂತ ಹೆಚ್ಚಾಗಿ ಪೀಪಿಯನ್ನು ನಿರಾತಂಕವಾಗಿ ಊದುವ ಸಂತೋಷಕ್ಕಾಗಿ. ಮತ್ತೆ ಸಂಜೆ ಮನೆಗೆ. ನಾಲ್ಕೈದು ದಿನ ಇದೇ ರಂಗನ ದಿನಚರಿಯಾಗಿ ಹೋಯ್ತು. ಅವನ ಮನಃಪಟಲದಿಂದ ಶಾಲೆ ಸಂಪೂರ್ಣ ಮರೆಯಾಗಿತ್ತು. ಊರ ಹುಡುಗರೆಲ್ಲಾ ಇವನ ಪೀಪಿಯ ಅಂದ, ಅದರಿಂದ ಹೊರಡುವ ಮಧುರ ನಾದದಿಂದ ಹೊಟ್ಟೆ ಉರಿದುಕೊಂಡು ತನ್ನ ಜೊತೆ ಮಾತಾಡುವುದನ್ನೇ ನಿಲ್ಲಿಸಿಬಿಟ್ಟಿದ್ದಾರೆ ಎಂದುಕೊಂಡ. ವಾಸ್ತವವಾಗಿ ಅವನು ಪೀಪಿ ಊದುತ್ತಾ ಇರುವಾಗ ಅವನ ಹತ್ತಿರ ಬರುತ್ತಿದ್ದ ಹುಡುಗರು ಅವನಿಗೆ ಕಂಡಿರಲೇ ಇಲ್ಲಾ.

ಇದೆಲ್ಲಕ್ಕಿಂತ ಹೆಚ್ಚಾಗಿ ತನ್ನೂರಿನ ಸಿನಿಮಾ ಟೆಂಟಿನಲ್ಲಿ ಸಿನಿಮಾ ನಡೆಯುವಾಗ ಆಗಾಗ ಕೇಳಿಬರುತ್ತಿದ್ದ ಹಾಡುಗಳಿಗಿಂತ ತನ್ನ ಪೀಪಿಯ ನಾದವೇ ಮಿಗಿಲು ಎನ್ನಿಸುತ್ತಿತ್ತು. ತನ್ನೂರಿನ ಆಂಜನೇಯ ಯುವಕ ಸಂಘದವರು ಆಗಾಗ ಮೈಕ್ ಸೆಟ್ ಹಾಕಿಸಿ ಅವುಗಳಲ್ಲಿ ಕಿರುಚಿಸುತ್ತಿದ್ದ ಸಿನಿಮಾಗಳ ಅಬ್ಬರದ ಹಾಡುಗಳಿಗಿಂತ ತನ್ನ ಪೀಪಿಯ ನಾದ ಯಾವುದೇ ರೀತಿಯಲ್ಲೂ ಕಡಿಮೆ ಇಲ್ಲಾ ಎನಿಸಿಬಿಟ್ಟಿತ್ತು. ಅಷ್ಟೇಕೆ ''ದ್ರೌಪದಿ ವಸ್ತ್ರಾಪಹರಣ'' ನಾಟಕದಲ್ಲಿ ಅಪಾರ ಚಪ್ಪಾಳೆ ಒನ್ಸ್ ಮೋರ್‌ಗಳನ್ನು ಗಿಟ್ಟಿಸಿದ್ದ ಭೀಮನ ಮಟ್ಟುಗಳು ತನ್ನ ಪೀಪಿಯ ಸ್ವರದ ಮುಂದೆ ಏನೇನೂ ಇಲ್ಲ ಅನಿಸಿಬಿಟ್ಟಿತು.

ಒಟ್ಟಿನಲ್ಲಿ ರಂಗನ ಪ್ರಪಂಚದಲ್ಲಿ ಸದ್ಯಕ್ಕೆ ಅವನ ಪೀಪಿಯ ನಾದವನ್ನು ಮೀರುವ ಯಾವ ಸಂಗೀತವೂ ಇರಲಿಲ್ಲ. ಸ್ವಾತಂತ್ರ್ಯ ದಿನಾಚಾರಣೆಗೆಂದು ಮೇಷ್ಟ್ರು ಕಿರುಚುತ್ತಾ ಹೇಳಿಕೊಡುತ್ತಿದ್ದ ದೇಶಭಕ್ತಿ ಗೀತೆಗಳು ರಂಗನ ಪೀಪಿಯ ಮುಂದೆ ಅಲ್ಪವಾಗಿ ಹೋಗಿದ್ದವು.

ಹೀಗೆಯೇ ಒಂದು ದಿನ ಮಧ್ಯಾಹ್ನ ಎಮ್ಮೆಗಳೆಲ್ಲಾ ಕೆರೆಯ ಮಧ್ಯದಲ್ಲಿದ್ದ ನೀರಿನ ಹೊಂಡವೊಂದರಲ್ಲಿ ಬಿದ್ದು ಹೊರಳಾಡುತ್ತಿದ್ದವು. ಲಚ್ಚಿ ಮರದ ನೆರಳಿನಲ್ಲಿ ನಿದ್ರೆಯ ಮಂಪರಿನಲ್ಲಿ ಇದ್ದಳು. ಇದನ್ನೆಲ್ಲಾ ಪುಸ್ತಕದೊಳಗಿನ ಚಿತ್ರವನ್ನು ನೋಡುವಂತೆ ನಿರ್ಲಿಪ್ತ ಕಣ್ಣುಗಳಿಂದ ನೋಡುತ್ತಾ ತನ್ನ ನಾದಲೋಕದಲ್ಲಿ ಮುಳುಗಿಹೋಗಿದ್ದ ರಂಗ. ಪಡ್ಡೆ ಎಮ್ಮೆಯೊಂದು ಕೆರೆಪಕ್ಕದ ಹೊಲದೊಳಕ್ಕೆ ಬೇಲಿ ಮುರಿದು ಹೋಗಿದ್ದನ್ನು ಗಮನಿಸಲಿಲ್ಲ. ಒಣಗುತ್ತಿದ್ದ ಗರಿಕೆ ಹುಲ್ಲನ್ನೆ ತಿಂದು ತಿಂದು ರೋಸಿಹೋಗಿದ್ದ ಎಮ್ಮೆಗೆ, ನೀರುಂಡು ಸೊಂಪಾಗಿ ಬೆಳೆದಿದ್ದ ರಾಗಿಯ ಹೊಲದಲ್ಲಿ ಎಲ್ಲಿ ತಿನ್ನುವುದು, ಎಲ್ಲಿ ಬಿಡುವುದು ಎನ್ನುವ ಸಮಸ್ಯೆ ತಲೆದೋರಿತೆಂದು ಕಾಣುತ್ತದೆ. ಸೊಂಪಾಗಿ ಬೆಳೆದಿದ್ದ ಹೊಲದಲ್ಲಿ ಎಲ್ಲೆಂದರಲ್ಲಿ ನುಗ್ಗುತ್ತಾ, ಬಾಯಿ ಹಾಕುತ್ತಾ ತಿನ್ನತೊಡಗಿತು.

ಅದೇ ಸಮಯಕ್ಕೆ ಹೊಲದ ಯಜಮಾನ - ದ್ರೌಪದಿ ವಸ್ತ್ರಾಪಹರಣದಲ್ಲಿ ಅಪಾರ ಒನ್ಸ್‌ಮೋರ್‌ಗಳನ್ನು ಗಿಟ್ಟಿಸುತ್ತಿದ್ದ ಭೀಮನ ಪಾತ್ರಧಾರಿ ಗಂಗಾಧರಪ್ಪನೇ ಅಲ್ಲಿಗೆ ಬರಬೇಕೆ ? ಗಾಬರಿ, ಕೋಪಗಳಿಂದ ''ಹೇಯ್-ಹೇಯ್'' ಎನ್ನುತ್ತಾ ಎಮ್ಮೆಯ ಕಡೆ ಕಲ್ಲುಬೀಸುತ್ತಾ ಅದನ್ನು ಅಟ್ಟಿಸುವ ಯತ್ನದಲ್ಲಿ ಎಮ್ಮೆಯೂ-ಈತನೂ ಹೊಲದಲ್ಲಿ ಅಡ್ಡಾದಿಡ್ಡಿ ಓಡಾಡಿಸಿದ್ದರಿಂದ ಹೊಲ ಇನ್ನಷ್ಟು ಹಾಳಾಯಿತು. ಎಮ್ಮೆ ಕೊನೆಗೂ ಬೇಲಿಯನ್ನು ಇನ್ನೊಂದೆಡೆ ಮುರಿದುಕೊಂಡು ಹೊರಗೆ ಓಡಿತು. ಗಂಗಾಧರಪ್ಪನ ಕೋಪ ಮುಗಿಲು ಮುಟ್ಟಿತ್ತು. ಅದೇ ಕೋಪದಲ್ಲಿ ಬೇಲಿಯಿಂದ ಈಚೆ ಬಂದು ನೋಡಿದವನಿಗೆ ದೂರದಲ್ಲಿ ಇವನನ್ನು ಅಣಕಿಸುವಂತೆ ಪೀಪಿ ಊದುತ್ತಾ ಕುಳಿತಿದ್ದ ರಂಗ ಕಾಣಿಸಿದ.

ನೇರವಾಗಿ ರಂಗನ ಕಡೆಯೇ ಅವಾಚ್ಯ ಶಬ್ದಗಳ ಸುರಿಮಳೆ ಸುರಿಸುತ್ತಾ ಬಂದ ಗಂಗಾಧರಪ್ಪ. ಪೀಪಿಯ ಸದ್ದಿಗಷ್ಟೇ ತೆರೆದುಕೊಂಡಿದ್ದ ರಂಗನ ಕಿವಿಗಳಿಗೆ ಈತನ ಬೈಗುಳಗಳು ತಲುಪಲೇ ಇಲ್ಲ. ಒಂದೇ ಸಮನೆ ಹೊರಹೊಮ್ಮುತ್ತಿದ್ದ ತನ್ನ ಪೀಪಿಯ ಸದ್ದು ನಿಂತದ್ದು, ನಂತರ ಅದು ತನ್ನ ಬಾಯಿಂದ ಜಾರಿ ಕೆಳಗೆ ಬಿದ್ದಿರುವುದು, ನಂತರ ತನ್ನ ಬೆನ್ನಮೇಲೆ ಬಿದ್ದ ಗುದ್ದು ರಂಗನ ಅರಿವಿಗೆ ಬಂದಾಗ ತಲೆಯೆತ್ತಿ ನೋಡಿದ. ತನ್ನೆದುರು ಭಯಂಕರವಾಗಿ ನಿಂತಿದ್ದ ಗಂಗಾಧರಪ್ಪನ ಬೈಗುಳಗಳು ರಂಗನ ಕಿವಿಗೆ ಹೋಗುವುದಕ್ಕೆ ಮುಂಚೆಯೇ ರಂಗನ ಬೆನ್ನಿಗೆ ಮತ್ತೊಂದು ಗುದ್ದು ಬಿದ್ದಿತ್ತು.

ನಂತರವೇ ರಂಗನಿಗೆ ವಿಷಯವೆಲ್ಲಾ ಅರ್ಥವಾಗಿದ್ದು. ಕೆಳಗೆ ಬಿದ್ದಿದ್ದ ಪೀಪಿಯನ್ನು ಎತ್ತಿಕೊಂಡು ಇಲ್ಲಿಂದ ಓಡಿಬಿಡಬೇಕೆಂದು ಯೋಚಿಸಿ ಅದರಕಡೆ ಕೈಚಾಚುವಷ್ಟರಲ್ಲಿ ನಾಟಕದ ಕೊನೆ ಸೀನಿನಲ್ಲಿ ದುರ್ಯೋಧನನ ತಲೆಯನ್ನು ಒದೆಯುವ ಭೀಮನಂತೆ ಗಂಗಾಧರಪ್ಪ ತನ್ನ ಕಾಲನ್ನು ಎತ್ತಿ ಆ ಕ್ಷುದ್ರ ಪೀಪಿಯ ಮೇಲೆ ಅಪ್ಪಳಿಸಿಬಿಟ್ಟ... ... ಅದರ ದೆಸೆಯಿಂದಲೇ ತನ್ನ ಹೊಲವೆಲ್ಲಾ ಹಾಳಾಯಿತೆಂದು ಭಾವಿಸಿದ್ದನೇನೋ... ... ಆ ಅಪ್ಪಳಿಕೆಗೆ ಪೀಪಿ ಫಟ್ ಎಂಬ ತನ್ನ ಕೊನೆಯ ಶಬ್ದ ಹೊರಡಿಸಿ ಚೂರು ಚೂರಾಗಿ ಹೋಯ್ತು. ಇನ್ನೊಂದೆರಡು ಗುದ್ದು ಕೊಟ್ಟು ಬೈದುಕೊಳ್ಳುತ್ತಾ ಗಂಗಾಧರಪ್ಪನೇನೋ ಹೊರಟುಹೋದ. ಏಟುಗಳಿಂದಾದ ನೋವಿನ ಬಗ್ಗೆ ಒಂದಿಷ್ಟೂ ಚಿಂತಿಸದೆ, ಬೈಗುಳಗಳಿಗೆ ಒಂದಿಷ್ಟೂ ತಲೆಕೆಡಿಸಿಕೊಳ್ಳದೆ, ಚೂರು ಚೂರಾಗಿ ಹೋಗಿದ್ದ ತನ್ನ ಪೀಪಿಯನ್ನೇ ದಿಟ್ಟಿಸುತ್ತಾ ರಂಗನ ಕಣ್ಣುಗಳು ನೀರು ತುಂಬಿಕೊಳ್ಳಲಾರಂಭಿಸಿದವು. ಉಬ್ಬಿದ ಗಂಟಲ ಬಳಿ ಹೊಟ್ಟೆಯೊಳಗಿಂದ ತೆರೆ ತೆರೆಯಾಗಿ ಉಕ್ಕುತ್ತಿದ್ದ ಅಳು ಹೊರಗೆ ದುಮುಕಲು ಸಿದ್ಧವಾಗಿತ್ತು.

*ಬಣ್ಣದ ತುತ್ತೂರಿ ಹಾಳಾಯ್ತು*
*ಜಂಭದ ಕೋಳಿಗೆ ಗೋಳಾಯ್ತು.*

ಎಂ. ಜಿ. ರಾಜೀವಗೌಡ
ಮೇಲೂರು, ಶಿಡ್ಲಘಟ್ಟ ತಾಲ್ಲೂಕು
ಕೋಲಾರ ಜಿಲ್ಲೆ, ಪಿನ್ - ೫೬೨ ೧೦೨




ವೆಂಕಟಾಚಲ

ಧರಣಿ ಮಧ್ಯದೊಳ್ ಭಾರತ ದೇಶವೆಂಬ ರಮಣೀಯ ತಾಣವಿಹುದು. ಅದರಲ್ಲೆಷ್ಟೋ ಸುಂದರ ನಗರಗಳು ಕಾಣಸಿಗುವುವು. ಅಂತಹ ನಗರಗಳಲ್ಲೊಂದು ಮಾಯಾನಗರ ಮುಂಬಯಿ. ಅಲ್ಲಿನ ಎತ್ತರೆತ್ತರ ಕಟ್ಟಡಗಳು, ಝಗಝಗಿಸುವ ದೀಪಗಳು, ಇಲ್ಲಿ ನಡೆಯಬೇಡ ಓಡು ಎನ್ನುವ ವಿಶಾಲ ರಸ್ತೆಗಳು, ರಾತ್ರಿ ಬೀಸುವ ಸಮುದ್ರದ ತೆರೆ ತೆರೆಗಾಳಿ, ಇವುಗಳ ಜೊತೆ ಜೊತೆ ಅಂಗಡಿ ಮುಂಗಟ್ಟುಗಳ ಮುಚ್ಚಿದ ಬಾಗಿಲುಗಳ ಮುಂದೆ, ಪಾರ್ಕು ಕಟ್ಟಡಗಳ ಕಾಂಪೌಂಡು ಎಲ್ಲೆಂದರಲ್ಲಿ ಟಾರುಪಾಲು ಪ್ಲಾಸ್ಟಿಕ್ ಶೀಟುಗಳ ಅಡಿಯಲ್ಲಿ ಅದರ ಸಂದುಗಳಲ್ಲಿ ಮುದುಡಿ ಮಲಗಿರುವ ನಗ್ನ, ಅರೆನಗ್ನ ಮನುಕುಲವೆಂದು ಅನುಮಾನಿಸುವಷ್ಟರ ಮಟ್ಟಿಗಿನ ಚೆಲ್ಲಾಪಿಲ್ಲಿ ದೇಹಗಳು. ಇನ್ನೂ ಎಷ್ಟೆಷ್ಟೋ ಕಾಣಸಿಗುವ ದೃಶ್ಯ ಕಣ್ ಕುಕ್ಕುತ್ತದೆ. ಇದೆಲ್ಲಾ ಹಿಂದಿನಿಂದ ಇಂದಿನವರೆಗೆ ಹೀಗೆ ಇದ್ದದ್ದೇ ಎಂದು ಸುಮ್ಮನಾಗಬೇಕಷ್ಟೆ. ಇಂತಹ ಇರುವೆ ಗೂಡುಗಳಿಂದ ಸಾಲು ಸಾಲು ನಡೆದಾಡುವ ಒಂದೆರಡು ಇರುವೆಗಳು ಹೇಳಿದ ಕಥೆ ಹೀಗೆ :

ವಿ.ಟಿ. ಸ್ಟೇಶನ್ ಇಳಿದು ಹೊರಬಂದು ಎಡಕ್ಕೆ ನಡೆದು ಬಲಕ್ಕೆ ಹೊರಳಿದಾಗ, ಒಂದು ಪಾರಿವಾಳಗಳ ವೃತ್ತ, ಹಾಗೆ ಮುಂದುವರಿದರೆ, ಅರೇ ಹಾಲಿನ ಕೇಂದ್ರ. ಅಲ್ಲಿ ಮಸಾಲ ಲಸ್ಸಿ ಕುಡಿದು ಇನ್ನೂ ಸ್ವಲ್ಪ ಮುಂದೆ ಹೋದರೆ ಅಲ್ಲೊಂದು ವಸತಿ ಗೃಹ, ಅರ್ಥಾತ್ ಲಾಡ್ಜ್. ಹಿರಿದಲ್ಲ, ಕಿರಿದೆನಿಸಿದರೂ ತುಂಬಾ ಏನಲ್ಲ, ಹತ್ತಾರು ಕೊಠಡಿಗಳ ಮೂರು ನಾಲ್ಕು ಅಂತಸ್ತಿನ ಒಂದು ಕಟ್ಟಡ. ಅದರ ನಾಲ್ಕನೇ ಮಹಡಿಯಲ್ಲೊಂದು ಕೋಣೆ. ಮುಂಜಾವಿನ ಸ್ನಾನದ ಮನೆಯಿಂದ ಕಂಡದ್ದೇ ಈ ಮೂರ್‍ನಾಲ್ಕು ಇರುವೆಗಳ ಸರಬರ ಸಂಸಾರ.

ಕಂಡ ಮೂರು ಇರುವೆಗಳು. ಸ್ನಾನ ಮುಗಿದರೂ ಕಣ್ ನೋಡೇ ನೋಡಿತ್ತು. ಅನತಿ ದೂರದ ಗಮ್ಮತ್ತು. ಪಟ ಪಟ ತೆರೆದವು ಮೇಜಿನ ಡ್ರಾ. ಮತ್ತೂ ಸನಿಹಕೆ ಎಳೆದವು. ಹೊರ ತೆಗೆದವು ಹಲವು ಉಪಕರಣ. ಒಂದು ಇರುವೆ ಓಡಿತು ಬೀದಿ ನಲ್ಲಿಯ ಕಡೆ. ತಣ್ಣೀರೆರಚಿಕೊಂಡಿತು. ಮತ್ತೆರಡು ಇರುವೆಗಳು ಆಲೂಗೆಡ್ಡೆ ಸಿಪ್ಪೆ ತೆಗೆದು ಅಲ್ಲಿಟ್ಟವು. ನಾಲ್ಕಾರು ಪ್ಲಾಸ್ಟಿಕ್ ಚೀಲಗಳು. ಉರಿಯಿತು ಬೆಂಕಿ, ಕೇಳಿಸಿತು ಟಿಪ್ ಟಿಪ್ ಶಬ್ದ, ತಯಾರಾಯಿತು ಹತ್ತಾರು ಚಪಾತಿ. ಕೆಲವನ್ನು ಆಲೂ ಸಬ್‍ಜೀ ಸಮೇತ ತಿಂದು ನಲ್ಲಿನೀರು ಕುಡಿದವು. ಮತ್ತೆ ಕೆಲವು ಚಪಾತಿಗಳನ್ನು ಮೂರು ಡಬ್ಬಿಗೆ ತುಂಬಿಸಿ ಕೊಂಡು ನೆಟ್ಟಗೆ ನಿಂತವು. ಸರಿಯಿತು ಟೇಬಲ್ಲು, ಡ್ರಾಯರುಗಳು ಮುಚ್ಚಿದವು. ಹೊರ ತೆಗೆದ ಪೊಟ್ಟಣಗಳು, ಸ್ಟವ್ವು ಒಳಸೇರಿದವು. ಆತುರದಲ್ಲಿ ಬೀಗ ನೇತಾಡಿತು. ಬಟ್ಟೆ ಬದಲಿಸಿ ಹೊರಟವು ಇರುವೆಗಳು, ಆತುರದಲ್ಲಿ ಮರೆಯಾದವು ಮುಂಬಯಿ ಜನಸಂದಣಿಯಲ್ಲಿ.

ಎರಡು ಮೂರು ದಿನ ಸತತ ನೋಡಿದ ಈ ದೃಶ್ಯ ಕಣ್ಣಿನಿಂದಿಳಿದು ಎದೆಯ ಗೂಡು ತಲುಪಿ ಮನದಲಿ ಕಲರವ ನಡೆಸಿತ್ತು. ಏನೂ ಕೆಲಸವಿರಲಿಲ್ಲ ಅನ್ನುವುದಕ್ಕಿಂತ ಸ್ವಲ್ಪ ಸ್ವಲ್ಪ ಕೆಲಸ ಮುಗಿಸಿದ ಒಂದು ದಿನ ಆ ಕಡೆ ಈ ಕಡೆ ನಡೆದು ಗಲ್ಲಿ ತೂರಿ ಒಂದು ನಸುಕು ತರಾತುರಿಯಿಲ್ಲದೆ ಇರುವೆಗಳು ಚಪಾತಿ ಮಾಡುವ ಕಾಯಕದಲ್ಲಿದ್ದಾಗ ಅವರನ್ನು ಒಟ್ಟಿಗೆ ಕಂಡು ಮಾತನಾಡಿಸಲು ಮುಗುಳ್ನಕ್ಕು ಜೊತೆಗೆ ಕೂತೆ. ಸ್ಟವ್‍ನ ಪ್ರಕಾಶ ಮೂರು ಮೂತಿಗಳ ಮೇಲೆ ಬೆಳಕು ಚೆಲ್ಲಿತ್ತು. ಆ ಮುಖಗಳಲ್ಲಿ ಸಂತೋಷವಿರಲಿಲ್ಲ ಅಂತ ಹೇಳುವುದಕ್ಕಿಂತ ಏನಿತ್ತು ಅಂತ ಹುಡುಕಾಟ ನಡೆಸುವುದೇ ಚೆಂದ ಅಂತ ಕೂತೆ.

ಮೊದಲಿರುವೆ ಕುತೂಹಲದಿಂದ ನೋಡಿದಾಗ ಏನೋ ಆಸೆ ಚಿಗುರಿ ನನ್ನ ಪರಿಚಯ ಹೇಳಿಕೊಂಡೆ. ನಾನು ಕರ್ನಾಟಕಿ, ನನ್ನ ಕೋಣೆ ಅಲ್ಲುಂಟು, ನಾಳೆ ಅಲ್ಲಿಂದ ಓಡುತ್ತೇನೆ. ಅಲ್ಲಿದೆ ನನ್ನ ಮನೆ ಇಲ್ಲಿರುವುದು ಸುಮ್ಮನೆ, ಅಂತ ಸುಳ್ಳು ಹೇಳುತ್ತಿದ್ದೇನೆ ಅನಿಸಿದರೂ ಸಾಂದರ್ಭಿಕವಾಗಿ ಹೇಳಿದೆ. ಕರ್ನಾಟಕದಲ್ಲಿ ಎಲ್ಲಿದೆ ನಿನ್ನ ಮನೆ, ಮತ್ತೆಲ್ಲೋ ಕಾಣದ ಜಾಗೆಯಲ್ಲಿರಬಹುದು ಎನ್ನುತ್ತಿತ್ತು ನನ್ನ ಮನ. ಗೊಂದಲ ವಾತಾವರಣದಲ್ಲಿ ಮಾತು ಅನ್ನುವ ಶಬ್ದ ಕಂಪನ ಉಂಟಾಯ್ತು.

ಹೋ ಕರ್ನಾಟಕಿ ಅಚ್ಚಾ! ಮುಂದೆ ಹಿಂದಿಯಲ್ಲಿ ನಡೆದ ಮಾತುಕತೆಯನ್ನು ಕನ್ನಡೀಕರಿಸಲಾಗಿದೆ. ನಾನು ಜಗನ್ನಾಥಪುರಿಯ ಜಗನ್ನಾಥ. ತಾವು ಒರಿಸ್ಸಾ ಹೆಸರು ಕೇಳಿರಬಹುದು. ಅಲ್ಲಿ ಲೋಕಪ್ರಸಿದ್ಧ ಜಗನ್ನಾಥನ ಜಾತ್ರೆ ನಡೆಯುತ್ತದೆ. ದೂರ ದೂರದಿಂದ ಜನಸಮುದಾಯ ಅಲ್ಲಿಯ ಜಾತ್ರೆಯ ವೈಭವ ನೋಡಲು ನೆರೆಯುತ್ತದೆ. ಸುಮಾರು ಒಂದು [illegible]ಗಳ ಪೂರ್ವ ಸಿದ್ಧತೆಯ ನಂತರ ಮೂರು ರಥಗಳು ವೈಭವದಿಂದ ಸಾಗುತ್ತವೆ ಪಟ್ಟಣದಲ್ಲಿ. ಒಂದು ಶ್ರೀ ಜಗನ್ನಾಥನದು. ಎರಡನೆಯದು ಭಲಭದ್ರನದು. ಮತ್ತೊಂದು ಸುಭದ್ರೆಯದು. ಪುರಿ ಜಗನ್ನಾಥನ ರಥವೈಭವ ಸ್ವರ್ಗಸಮಾನ. ಜಾತ್ರಾನಂತರ ಊರನ್ನು ಸ್ವಚ್ಛಗೊಳಿಸಲು ಒಂದೆರಡು ವಾರಗಳು ಬೇಕಾಗುತ್ತವೆ. ಆಗಲೇ ಅಂಟುರೋಗದ ಕ್ರಿಮಿಕೀಟಗಳ ನಿರ್ಮೂಲನೆ. ಹೇ ಕರ್ನಾಟಕಿ ನಿನಗಿದು ತಿಳಿದಿರಲಿ. ನಮ್ಮ ಜಗನ್ನಾಥ ದೇವರು ಒಬ್ಬ ಭೋಗ ವಿಲಾಸಿ. ನಿಮಗೆ ಗೊತ್ತಿರಬಹುದು. ಈ ಜಗನ್ನಾಥ ಪುರಿಗೆ ಚಂಡಮಾರುತ ಅಪ್ಪಳಿಸಿತು. ಆಗ ಎಷ್ಟೊಂದು ಅಲ್ಲೋಲ ಕಲ್ಲೋಲವಾಗಿ ಎಷ್ಟೊಂದು ಮನುಜರು ಜೀವ ಜಂತುಗಳು ನಾಶ ಹೊಂದಿದವು. ಪುರಿಯ ಜಗನ್ನಾಥ ಜಗತ್ತಿನ ಒಡೆಯ ಏನು ಮಾಡಿದರು ? ಎಲ್ಲಿ ನಿದ್ರಿಸುತ್ತಿದ್ದ, ಎಲ್ಲಾದರೂ ಓಡಿಹೋಗಿದ್ದರಾ ? ಗೊತ್ತಿಲ್ಲ. ಇಷ್ಟೆಲ್ಲ ಅನಾಹುತಗಳು ಜಗನ್ನಾಥ ಸನ್ನಿಧಿಯಲ್ಲಿ ಹೇಗೆ ನಡೆದವೋ ಒಂದೂ ತಿಳಿಯೇ. ನೋಡು ಕರ್ನಾಟಕಿ, ಪುರಿಯಲ್ಲಿ ಜನಿಸಿದ ಈ ಜಗನ್ನಾಥ ಜೀವನೋಪಾಯಕ್ಕಾಗಿ ಮುಂಬಯಿಗೆ ಓಡಿಬಂದ ಎಂದು ಭಯದ ಕಂಪನದಲ್ಲಿ ಬಡಬಡಿಸಿದ, ಕನಸಿನಂತೆ ಎಲ್ಲಾ ನೆನಪಿಸಿಕೊಂಡು. ಮೊದಲ ಇರುವೆ ಇಷ್ಟು ಹೇಳಿ ಕಣ್ಣೀರಾಯ್ತು, ಗದ್ಗದಿತವಾಯ್ತು. ಇನ್ನೂ ಎಷ್ಟೋ ಹೇಳುವುದಿದೆ ಅಂತ ಅದರ ಸ್ಟವ್ ಬೆಳಕಿನ ಮುಖ ಹೇಳುತ್ತಿತ್ತು.

ಅಷ್ಟರಲ್ಲಿ ಮತ್ತೊಂದು ಇರುವೆ ನಿಧಾನವಾಗಿ ತಲೆ ಎತ್ತಿ ಚಪಾತಿ ಲಟ್ಟಣಿಗೆ ಕೈಯಲ್ಲಿ ಹಿಡಿದು ಮಾತಿಗೆ ಶುರು ಮಾಡಿತು. ನನ್ನ ಕೈಯಲ್ಲಿರೋ ಲಟ್ಟಣಿಗೆ ಬಂದೂಕಲ್ಲ, ಇಲ್ಲಿ ಉರಿಯುತ್ತಿರುವ ಸ್ಟವ್ ಲಾಟೀನೂ ಅಲ್ಲ, ಬರೀ ಲಟ್ಟಣಿಗೆ ಲಾಟೀನಿನಿಂದ ಚಪಾತಿ ತಯಾರಾಗುವುದಿಲ್ಲ. ನಾನು ಬಿಹಾರದವನು. ಬಿಹಾರದಲ್ಲಿ ಬಂದೂಕು, ಲಾಟೀನ್‍ನದೇ ಕಾರುಬಾರು. ಇದರ ದಬ್ಬಾಳಿಕೆಯಲ್ಲಿ ಎಲ್ಲಾ ನುಚ್ಚು ನೂರು. ಅಲ್ಲಿನ ಜೀವನ ನರಕ ಸದೃಶ. ಅಲ್ಲಿನ ಜೀವನ ಶುಷ್ಕ ಮತ್ತು ನಗೆಹೀನ. ಅಲ್ಲಿನ ಜೀವನ ನಿತ್ಯ ಹೆದರಿಕೆ ನಿತ್ಯ ಶೋಷಿತ ಬಡತನ ಎಂದೇ ತಿಳಿಯಬೇಕು. ಅಲ್ಲಿ ಖಾಲಿ ಹೊಟ್ಟೆಯಲ್ಲಿದ್ದರೂ ಮೂಕರಂತಿರಬೇಕು. ನನ್ನ ಪರಿವಾರದವರನ್ನೆಲ್ಲಾ ಬಿಟ್ಟು ಒಂದು ರಾತ್ರಿ ಮುಂಬಯಿ ನಗರಕ್ಕೆ ಓಡಿಬಂದೆ. ಇಲ್ಲಿಗೆ ಬಂದ ಹೊಸತರಲ್ಲಿ ಒಂದೆರಡು ದಿನ ಉಪವಾಸ, ವನವಾಸಗಳು ಅನಿವಾರ್ಯವಾದವು. ಬರುತ್ತಾ ಬರುತ್ತಾ ಉಪವಾಸ ದೂರವಾಯ್ತು. ಇಲ್ಲಿನ ಚಪಾತಿ ಸಬ್ಜಿ ನನ್ನದಾದವು. ಮುಂಬಯಿ ಯಾವ ಕೂಲಿಕಾರ ನನ್ನೂ ಹಸಿವಿನಿಂದ ಸಾಯಿಸುವುದಿಲ್ಲ ಎಂದು ಮನದಟ್ಟಾಯಿತು. ಇಂತಹ ಮುಂಬಯಿ ನಗರಿಗೆ ಮಜ್ದೂರರೆಲ್ಲರ ಪರವಾಗಿ ನನ್ನ ನಮಸ್ಕಾರ.

ಮೂರನೇ ಇರುವೆ ಸಬ್ಜಿ ತಯಾರಿಯಲ್ಲಿತ್ತು. ಸುಮ್ಮನೇ ಅದನ್ನು ಚಮಚೆಯಲ್ಲಿ ತಿರುಗಿಸುತ್ತಾ ಮೌನ ಧರಿಸಿತ್ತು. ಮಾತನಾಡುವುದೇ ಬೇಡ ಅನ್ನುವ ಮುಖಭಾವ ಮೂಡಿಸಿಕೊಂಡಿತ್ತು. ಏನಿದರ ಮೂಕವೇದನೆ ಎಂಬ ಗೊಂದಲಕ್ಕೆ ಬಿದ್ದಾಗ, ಆಷಾಢದ ಮೋಡಗಳು ಕದಲಿ ದಿನಕರನ ದರ್ಶನವಾಗುವಂತೆ ಒಂದು ಸಣ್ಣ ಬೆಳಕು ಮೂಡಿದಂತಾಗಿ ಬೆಳಕು ಚೆಲ್ಲಿತ್ತು. ಸ್ವರ ಮೂಡಿತು. ತದೇಕ ಚಿತ್ತದಿಂದ ಆರು ಕಣ್ಣುಗಳು ಬಾಣಗಳಂತೆ ಆ ಆಕೃತಿಯನ್ನು ದಿಟ್ಟಿಸಿ ತಿವಿಯಲು ಮಾತು ಹೊರಟಿತು. ಮೊಗ್ಗು ಅರಳಿದಂತೆ. ಸಮುದ್ರ ಮೊರೆತವನ್ನು ಜ್ಞಾಪಿಸಿತೇನೋ ಎಂಬಂತೆ ಪಂಪ್ ಸ್ಟೌವ್‍ನಿಂದ ಹೊರಟ ನಿಧಾನ ಮೊರೆತ ಹಾಡಿಗೆ ಪಕ್ಕವಾದ್ಯದಂತೆ ಬೆರೆತುಹೋಗಿತ್ತು. ಮೂರನೇ ಇರುವೆ ಮಾತು ಮೂಡಿಸಿತು. ನಿಮಗೆ ಉತ್ತರ ಪ್ರದೇಶ ಗೊತ್ತಿರಲಿಕ್ಕೆ ಸಾಕು. ಉತ್ತರ ಪ್ರದೇಶ ಗೊತ್ತಿಲ್ಲದವರಿಗೂ ರಾಮಜನ್ಮಭೂಮಿ ಗಲಾಟೆ ಖಂಡಿತಾ ಗೊತ್ತಿರುತ್ತದೆಯಲ್ಲವೇ ? ಈ ದೇಶದ ಪತ್ರಿಕೆಗಳು ವಾರಗಟ್ಟಲೆ, ತಿಂಗಳುಗಟ್ಟಲೆ, ರಾಮಜನ್ಮಭೂಮಿಯ ಬಗ್ಗೆ ಸುದ್ದಿ ಬಿಂಬಿಸಿದವು. ಬೇರೆ ಎಲ್ಲ ವಿದ್ಯಮಾನಗಳನ್ನು ಕಡೆಗಣಿಸಿ ಎಂದು ಹೇಳಬಹುದು. ನಾನು ಅಲ್ಲಿಯವನು. ಸಾಧು ಸಂತರು, ನಿದ್ರಿಸುತ್ತಿದ್ದ ವೃದ್ಧರು, ಭಿಕ್ಷುಕರು, ಅಮಾಯಕರಾದಿಯಾಗಿ ಎಲ್ಲರೂ ಬಂದೂಕಿಗೆ ಬಲಿಯಾದರು. ಆ ದಿನ ಆ ಎಲ್ಲ ಹೆಣಗಳನ್ನು ಸರಯೂ ನದಿಯಲ್ಲಿ ಒಗಾಯಿಸಲಾಯಿತು ವ್ಯವಸ್ಥಿತವಾಗಿ. ನಿರ್ಲಜ್ಜ ಜನ ಮೇಲಿನಿಂದ ಹೆಲಿಕಾಪ್ಟರಿನಿಂದ ಆಣತಿಯಿತ್ತರು. ಗೋಲಿಮಾರೋ. ಅಖಂಡ ಮಾರಣಹೋಮ ನಡೆದೇಹೋಯಿತು ಎಂದು ತಿಳಿದದ್ದು ನಮಗೆ ತಡವಾಗಿ. ನಾವೆಲ್ಲಾ ಮನೆಗಳಲ್ಲಿ ಬಂಧಿಗಳಾಗಿದ್ದೆವು; ಕಿವುಡರಂತೆ, ಮೂಕರಂತೆ, ಮತಿಹೀನ ಪಶುಗಳಂತೆ. ಎಲ್ಲಾ ಕನಸೇನೋ ಅನ್ನುವ ಮಟ್ಟದಲ್ಲಿ ನಡೆದೇ ಹೋಯಿತು. ಅಲ್ಲಿನ ಗದ್ದಲ ಸಾಮ್ರಾಜ್ಯದಲ್ಲಿ ನಾನೊಂದು ಬದುಕುಳಿದ ಜೀವಜಂತು. ಹೊಟ್ಟೆಪಾಡಿಗಾಗಿ ಈ ಮುಂಬಯಿಗೆ ಬಂದೆ. ನನ್ನ

ಮಾಮನೊಬ್ಬ ಈ ಮಿತ್ರರ ಜೊತೆ ಇಲ್ಲೇ ಹೇಗೋ ಇದ್ದ. ನನ್ನನ್ನು ಇವರೊಟ್ಟಿಗೆ ಸೇರಿಸಿದ. ಮಾಮನಿಗೆ (ಮಾವ) ಮದುವೆಯಾಯ್ತು. ಬಡವರು ಮದುವೆಯ ನಂತರ ಇಲ್ಲಿ ಬಿಡಾರ ಹೂಡುವುದು ತುಂಬಾ ಕಷ್ಟ. ಮುಂಬಯಿಯಲ್ಲಿ ಎಲ್ಲವೂ ಸಿಗುತ್ತದೆ, ಉಳಿಯಲು ಮನೆಯೆಂಬ ಒಂದು ಗೂಡು ಬಿಟ್ಟು. ಜೋಪಡಿಪಟ್ಟಿಯಲ್ಲಿ ಇರಲು ಯೋಚಿಸಿದರೆ ಅಲ್ಲಿನ ದಾದಾಗಿರಿ, ಕೊಳಗೇರಿ ವಾತಾವರಣಕ್ಕೆ ಹೊಂದಿಕೊಳ್ಳುವುದು ತುಂಬಾ ಕಷ್ಟ. ಮದುವೆಯಾದ ಅಲ್ಪ ಆದಾಯದವರಿಗೆ ಮದುವೆಯ ನಂತರ ಯಾವುದಾದರೂ ಹಳ್ಳಿ ಕಡೆ ಓಡುವುದೊಂದೇ ದಾರಿ. ಇದು ಪ್ರತಿ ಗರೀಬನ ಅನುಭವ. ಯಾವ ಗರೀಬ ಮದುವೆಗೆ ಹೆದರಿ ಮುಂಬಯಿಯಲ್ಲಿ ನೆಲಸಲಿಚ್ಛಿಸುತ್ತಾನೋ ಅಂತಹವನು ಕಾಮಾಟಿಪುರದ ಪರಿಚಯ ಮಾಡಿಕೊಳ್ಳಬೇಕಾಗುತ್ತದೆ.

ನನ್ನ ನೆರೆಯಾತನೊಬ್ಬ ಬೇರೆ ದೇಶದಲ್ಲಿ ನೌಕರಿ ಮಾಡುತ್ತ ಅಲ್ಲೇ ಕೊನೆಯುಸಿರು ಕಂಡ. ಆ ದೇಶ ದೇಶದ ಜನ ಈ ಪರದೇಸಿಯ ಹೆಣವನ್ನು ಸಾವಿರಾರು ರೂಪಾಯಿ (ಹಣ) ಖರ್ಚುಮಾಡಿ ಅವನ ಸ್ವದೇಶಕ್ಕೆ ಹಿಂದಿರುಗಿಸಿದರು, ತಮ್ಮ ದೇಶದಲ್ಲಿ ಬೇರೆ ದೇಶದವರಿಗೆ ಸತ್ತ ಮೇಲೆ ಸ್ಥಳಾವಕಾಶವಿಲ್ಲ ಅನ್ನುವ ರೀತಿಯಲ್ಲಿ. ಇದೆಂತಹ ಮನುಕುಲದ ವರ್ತನೆ ? ಇಂತಹ ಪರಿಸ್ಥಿತಿ ಮುಂದೊಂದು ದಿನ ಮುಂಬಯಿಯಲ್ಲೂ ಆದರೆ ಆಶ್ಚರ್ಯವಿಲ್ಲ ಅನ್ನಿಸುತ್ತೆ.

ಸ್ಟವ್ ನಿಧಾನವಾಗಿ ಮೊರೆತ ಕಳೆದುಕೊಂಡು ಸ್ತಬ್ಧವಾಗುತ್ತದೆ. ಕೊನೆ ಉಸಿರೆಳೆದ ಕಳೇಬರದಂಥ ವಾತಾವರಣ. ಮಾತು ನಿಂತಿತ್ತು (ಕೊನೆ ಸ್ಟೇಶನ್ ತಲುಪಿದ ರೈಲಿನಂತೆ). ಚಪಾತಿ ತಿನ್ನಲು ಆಹ್ವಾನವಿದ್ದರೂ ನಯದಿಂದ ಎದ್ದು ಹೆಜ್ಜೆ ಹಾಕಿದೆ, ಹೋಟೆಲು ರೂಮಿನ ಕಡೆಗೆ. ದಾರಿಯಲ್ಲಿ ಸಾಯಂಕಾಲ ೫, ೧೦, ೧೫ ರೂ. ತೆತ್ತು ಪರಿಪರಿಯ ಬೋಟುಗಳಲ್ಲಿ ವಿಹರಿಸಿದ್ದು, ಮುಂಬಯಿ ಸಮುದ್ರ ತೆರೆತೆರೆ ಅಲೆಗಳನ್ನೆಬ್ಬಿಸಿದ್ದು, ಅಲೆಗಳು ನಿಧಾನವಾಗಿ ದಡಕ್ಕೆ ಅಪ್ಪಳಿಸಿದ್ದು, ಮಾಯವಾದದ್ದು, ಮತ್ತೆ ಹೊಸ ಅಲೆಗಳು ಒಂದರ ಹಿಂದೆ ಒಂದು ಬರುತ್ತಲೇ ಇದ್ದದ್ದು, ದಡದಲ್ಲಿ ಮಾಯವಾಗುತ್ತಿದ್ದದ್ದು, ಎಲ್ಲಾ ಜ್ಞಾಪಕಕ್ಕೆ ಬರತೊಡಗಿತು. ಸಂಜೆಯಾದರೆ ಭೂಮ್ಯಾಕಾಶ ಸೇರುವ ದಿಶೆಯಲ್ಲಿ ರಂಗು ರಂಗಿನ ಚಿತ್ತಾರಗಳು ಎಂದೆಂದೂ ಮೂಡುತ್ತಲಿರುತ್ತವೆ. ಹಾಗೇ ಸಮುದ್ರ ತಳದಲ್ಲಿ ಮುತ್ತು ರತ್ನಗಳ ರಾಶಿಯೂ ಇದೆ. ಅವರನ್ನು ಇರುವೆಗಳು ಎಂದು ಕರೆದದ್ದು ಅವರ ನಿತ್ಯ ಬಡತನದ ಶ್ರಮಜೀವನ. ಇರುವೆಗಳಂತೆ ಸಾಲಾಗಿ ಹೊರಟು ಜನಜಂಗುಳಿಯಲ್ಲಿ ಮಾಯ. ನಿತ್ಯ ಕಾಯಕ. ಅನಿವಾರ್ಯ ಹೊಂದಾಣಿಕೆ. ಎಲ್ಲ ಋತು ಸಹಿಷ್ಣುತೆ. ಕಂಗಾಲು ಜೀವನ. ಮತ್ತೆಷ್ಟೋ ಹೋಲಿಕೆಯಿಂದ ಆ ರೀತಿ ಭಾವಿಸಿದ್ದು. ಈ ಇರುವೆಗಳು ಒಮ್ಮೆ ಜನಜಂಗುಳಿಯಲ್ಲಿ ಮಾಯವಾದರೆ ಮತ್ತೆ ಬರುವ ತನಕ ಭರವಸೆಯಿಲ್ಲ. ಜಾರಿಯ ಕಾಲ್ತುಳಿತಕ್ಕೆ ಹೊಸಕಿ ಹಾಕಿದ ಇರುವೆಗಳಂತೆ ಅಲ್ಲೇ ಎಲ್ಲೋ ಅನಾಥ ಮೃತ್ಯು, ಬೇನಾಮಿ ಶವಗಳಾಗಿ, ಮುನಿಸಿಪಾಲಿಟಿಯ ಕಸವಾಗಿ ಬುಗುಡ ಹೋಗಯಾ ಆಗುತ್ತಾರೆ. ಯಾರಿಗೆ ಯಾರ ಸುಳಿವೂ ಸಿಗುವುದಿಲ್ಲ. ಅದಕ್ಕೆ ಮುಂಬಯಿಯನ್ನು ಮಾಯಾನಗರಿ ಅಂದರೇನೋ ? ಯಾರನ್ನು ಎಲ್ಲಿ ಹುಡುಕುವುದು. ಶ್ರಮಿಕವರ್ಗ ದಿನಕೂಲಿಯಲ್ಲಿ. ಎಲ್ಲೋ ಜಮೆ ಎಲ್ಲೋ ಮಾಯ. ಯಾರಿಗೆ ಯಾರ ಚಿಂತೆ. ಬೆಳಿಗ್ಗೆ ಹೊರಟಾಗ ಫುಟ್‌ಪಾತಿನಲ್ಲೊಂದು ನಗ್ನ ಕರಕಲು ದೇಹ ಉಸಿರಾಡುತ್ತಿತ್ತು. ಎಲ್ಲರಿಗೆ ಆತುರ. ಅವರವರದೇ ಕೆಲಸ. ಸಂಜೆ ನೋಡಿದಾಗ ಬೇನಾಮಿ ಹೆಣ ನಗ್ನ. ಕಣ್ಣಲ್ಲಿ ನೀರಾಡಿದವು. ಯಾರಿಗೆ ಯಾರೋ ನಮಗಿನ್ಯಾರೋ. ನಿಟ್ಟುಸಿರು. ಒಂದೆರಡು ಗಂಟೆ ಬಿಟ್ಟು ಮತ್ತೆ ಆ ಕಡೆ ಬಂದಾಗ ಶವ ಯಾತ್ರೆ ಹೊರಟಿತ್ತು, ಮುನಿಸಿಪಾಲಿಟಿ ಕಸದ ಗಾಡಿಯಲ್ಲಿ. ಯಾವ ಆಡಂಬರ, ಯಾವ ಕುಣಿತ ಯಾವ ರೋದನ, ಎಲ್ಲಾ ಕೆಲವರಿಗೆ ಮೀಸಲು. ಕೆಲ ಸ್ಥಳಗಳಲ್ಲಿ ಮಾತ್ರ ಅಳುವವರಾರು ಇಲ್ಲ ಇಲ್ಲಿ. ಜೀವನವೆಂದರೆ ಇದೇನೇ. ಬದುಕು ಇಷ್ಟೇ. ಏನೇನೋ ಯೋಚನೆಗಳು ತಲೆ ತುಂಬಿ ಮನಸ್ಸು ಭಾರವಾಗಿ ಕುಸಿದಂತಾಗಿತ್ತು. ಬದುಕು ಒಂದು ದಿನಕ್ಕೆ ಎಷ್ಟು ಬೇನಾಮಿ, ಹೆಣಗಳೋ ಬೃಹತ್ ಮಾಯಾನಗರಿಗಳಲ್ಲಿ, ಧರಣಿ ಮಧ್ಯದ ಭಾರತ ದೇಶದೊಳ್ ಎಷ್ಟೊಂದು ಮನುಜರೆಂಬ ಇರುವೆಗಳು.

ಅಂಟಣ್ಣ ಮುಂಬಯಿಂದ ಬಂದು ಒಂದು ಬೆಳದಿಂಗಳಲ್ಲಿ ನಮ್ಮ ಮಿತ್ರರಿಗೆ ಈ ಕತೆಯನ್ನು ಹೇಳಿದಾಗ ಮನಸ್ಸು ಕಸಿವಿಸಿಗೊಂಡಿತು. ಲಾಂಡ್ರಿಯ ಮೇಜೇ ಅಡುಗೆ ಮನೆ ಉಗ್ರಾಣವಾಗಿ, ಮಳೆಯ ಎರಚಲು ಚಳಿಯ ಕೊರೆಚಲು ಧೂಳ ಸಿಂಚಲು ಎಲ್ಲಾ ಸಹಿಸಿ ಕೊಂಡು ಲಾಂಡ್ರಿಯ ಬಾಗಿಲ ಮುಂದಿನ ಜೀವನ ಎಂಥ ಅನಿವಾರ್ಯ, ರೋಗ ರುಜಿನದ ಇಲಾಜು ಹೇಗೆ ? ಕರೆಂಟು ಕೈ ಕೊಟ್ಟಾಗ, ಬೀದಿ ನಲ್ಲಿ ಒಣಗಿದಾಗ ಅವರ ಜೀವನ ಹೇಗೆ ? ಹೊಟ್ಟೆಯೆಂಬುದು ಮನುಜ ಮತ್ತು ಇತರೆ ಜೀವ ಸಂಕುಲವನ್ನು ಯಾವ ಪರಿ ಕಾಡುತ್ತೆ, ಮಹಾನಗರಗಳಲ್ಲಿ ಬದುಕು ಎಷ್ಟು ದುರ್ಭರ, ಬಡತನ ಎಂದೂ ತೊಲಗುವುದಿಲ್ಲವೋ ಈ ಭಾರತ ದೇಶದಿಂದ ಎಂದು ನೊಂದಾಗ ಬೆಳದಿಂಗಳೂ ಬಿಸಿಲಾಗಿತ್ತು.

**ವೆಂಕಟಾಚಲ**
ಸರ್ಜಾಪುರ-೫೬೨ ೧೨೫, ಬೆಂಗಳೂರು ಜಿಲ್ಲೆ

## ಭಾಯಿ - ಭಾಯಿ

ಈ ಘಟನೆ ನಡೆದು ಸುಮಾರು ೪೫ ವರ್ಷಗಳಾದರೂ ನನ್ನ ನೆನಪಿನಲ್ಲಿ ಹಸಿರಾಗಿಯೇ ಉಳಿದಿದೆ. ಎರಡನೇ ಪಂಚವಾರ್ಷಿಕ ಯೋಜನೆಯ ಭಿಲಾಯಿ ಸ್ಟೀಲ್ ಕಾರ್ಖಾನೆಯ ನಿರ್ಮಾಣ ಹಂತದಲ್ಲಿ ಜರುಗಿದ ಈ ಸಣ್ಣ ಸಂಗತಿ ಮರೆಯಲಾಗದೆ, ನನ್ನ ಬದುಕಿನಲ್ಲಿ ಒಂದು ತಿರುವನ್ನೇ ತಂದಿತು. ನನ್ನ ಮದುವೆ ಆಗಿ ಹಲವು ತಿಂಗಳುಗಳಾಗಿತ್ತು. ಸ್ಟೀಲ್ ಪ್ರಾಜೆಕ್ಟ್‌ನಲ್ಲಿ ನಮ್ಮವರು ಸಿವಿಲ್ ಎಂಜಿನಿಯರ್. ಅವರು ಕೆಲಸ ಮಾಡುತ್ತಿದ್ದ ಸ್ಥಳಗಳನ್ನು ಕಂಡಾಗ ಅಚ್ಚರಿ, ಭಯ, ಆತಂಕ ಎಲ್ಲಾ ಆಗಿತ್ತು. ದೈತ್ಯಾಕಾರದ ಕಂಬಗಳು, ದೆವ್ವದಂತಹ ಅಟ್ಟಣೆಗಳು, ಬೃಹದಾಕಾರದ ಚಿಮಿಣಿ, ಎಲ್ಲವನ್ನೂ ಕಂಡು ಹೆದರಿಕೆಯಾಗಿತ್ತು. ಬೆಂಗಳೂರಿನಲ್ಲಿ ಮನೆ ಬಿಟ್ಟು ಹೊರಗೆ ಹೆಚ್ಚಾಗಿ ತಿರುಗದ ಆಗಿನ ಕಾಲದ ಹೆಣ್ಣುಮಕ್ಕಳಿಗೆ ಇದೆಲ್ಲಾ ಹೊಸದು. ಅದರಲ್ಲೂ ಇವರು ಆ ಎತ್ತರದ ಅಟ್ಟಣೆ ಹತ್ತುವುದು, ಸಾರುವೆ ಮೇಲೆ ನಡೆಯುವುದು, ಆ ಕಡೆಯಿಂದ ಈ ಕಡೆಗೆ ಹಾರುವುದು, ಎಲ್ಲಾ ಕಂಡು ಎದೆ ಜಗ್ ಎಂದಿತ್ತು.

ಆದರೆ ಪ್ರಾಜೆಕ್ಟ್‌ನ ಕಾಲೋನಿ ಜೀವನ ಬಹಳ ಚೆನ್ನ. ಎಲ್ಲಾ ಗಂಡಸರೂ ಒಂದೇ ಸಮಯಕ್ಕೆ ಕೆಲಸಕ್ಕೆ ಹೋಗುವುದು, ಮಧ್ಯಾಹ್ನ ಡಬ್ಬವಾಲ ಬಂದು ಕ್ಯಾರಿಯರ್ ಒಯ್ಯುವುದು, ಸಂಜೆ ಎಲ್ಲರೂ ಒಂದೇ ವೇಳೆಗೆ ಮನೆಗೆ ಬರುವುದು– ಎಲ್ಲಾ ಒಂದೇ ತರಹ.

ಅಂದೂ ಹಾಗೆಯೇ. ಮಧ್ಯಾಹ್ನ ನಮ್ಮ ಮನೆ ಹಿಂದಿನ ಅಂಗಳದಲ್ಲಿ ರಾಧಾ ಮುಖರ್ಜಿ, ವಿಮಲಾ ರಾಯ್, ಶಾಂತಾ ತಾಯಿ ಫಡ್ಕೆ, ಎಲ್ಲಾ ಸೇರಿದ್ದೆವು. ಶಾಲಿನಿ ಕುಲಕರ್ಣಿ ಮತ್ತು ರೀನಾ ಚೌಧರಿ ಬಂದರು. ಶಾಲಿನಿ ಬಂದರೆ ನಾಲ್ಕು ಜನ ಬಂದಂತೆ. ನಗು ಸರಸಿ, ಹಾಸ್ಯ, ತಮಾಷೆಯಲ್ಲಿ ಪ್ರವೀಣೆ. ಆಕೆಯ ಮಾತಿಗೆ ನಾವೆಲ್ಲಾ ನಕ್ಕಿದ್ದೇ ನಕ್ಕಿದ್ದು. ಇದ್ದಕ್ಕಿದ್ದ ಹಾಗೆ ಆಂಬ್ಯುಲೆನ್ಸ್ ಘಂಟೆ ಕೇಳಿಸಿತು. ನಾವು ಕುಳಿತಿದ್ದ ಜಾಗದಿಂದ ನಾಲ್ಕು ಫರ್ಲಾಂಗ್ ದೂರದಲ್ಲಿ ಪ್ರಾಜೆಕ್ಟ್ ಆಸ್ಪತ್ರೆ. ಬಟಾಬಯಲಾದ್ದರಿಂದ ಎಲ್ಲಾ ಸ್ಪಷ್ಟವಾಗಿ ಕಾಣುತ್ತಿತ್ತು. ಮೊದಲು ಆಂಬ್ಯುಲೆನ್ಸ್ ಬಂತು, ಹಿಂದೆಯೇ ಜೀಪ್‌ಗಳೂ, ಮೋಟರ್ ಸೈಕಲ್ಗಳೂ ಬಂದವು. ಕೂತ ಕಡೆಯಿಂದ ಎಲ್ಲವನ್ನೂ ನೋಡುತ್ತಿದ್ದ ನಮಗೆ ಗಾಬರಿಯಾಯಿತು. ಎಲ್ಲರೂ ಎದ್ದು ಏನಾಯಿತೆಂದು ನೋಡಲು ಓಡಿದೆವು. ಆ ಕಡೆಯಿಂದ ಬರುತ್ತಿದ್ದ ಚಪರಾಸಿ ಕಾವಲುಗಾರನನ್ನು ವಿಚಾರಿಸಿದಾಗ ಯಾರೋ ಚಿಮಿಣಿಯ ಅಟ್ಟಣೆಯಿಂದ ಕಾಲು ಜಾರಿ ಬಿದ್ದರಂತೆ, ಗೋಣು ಮುರಿದಿದೆ. ಬದುಕುವ ಸಂಭವ ಕಡಿಮೆ ಎಂದ. ನನಗೆ ಹೃದಯ ಮಿಡಿತ ನಿಂತಂತಾಯಿತು. ಇವರ ಕೆಲಸವೂ ಅಲ್ಲೇ. ಓಡುತ್ತಿದ್ದ ನನಗೆ ಕಣ್ಣು ಕತ್ತಲಿಟ್ಟಿತು... ಅಲ್ಲೇ ಗರ ಹೊಡೆದಂತೆ ನಿಂತುಬಿಟ್ಟೆ. ಸಾವರಿಸಿಕೊಂಡು ಎರಡು ಹೆಜ್ಜೆ ಮುಂದೆ ಇಟ್ಟೆ. ಮನಸ್ಸು ಶೂನ್ಯವಾಗಿತ್ತು. ಅಷ್ಟರಲ್ಲಿ ಎದುರಿನಿಂದ ಶ್ರೀಮತಿ ಉಜಾಗರ್ ಸಿಂಗ್ ಮತ್ತು ಹರ್ ಪ್ರೀತ್ ಕೌರ್ ಬರುತ್ತಿದ್ದರು. ನನ್ನನ್ನು ಕಂಡು ಏನಾಯಿತು ಎಂದರು. ನಾಲಿಗೆ ಒಣಗಿ ಮಾತೇ ಬರದು. ಆಸ್ಪತ್ರೆಯ ಕಡೆ ಕೈ ತೋರಿಸಿದೆ. ಆಕೆ ಹಾಂ ಯಾರೋ ಬಡಪಾಯಿ ಕೂಲಿ ಬಿದ್ದನಂತೆ ಎಂದರು. ಓಹ್ ಎಂದೆ. ನಿಧಾನವಾಗಿ ಉಸಿರೆಳೆದುಕೊಂಡು ಸದ್ಯ ಇವರಲ್ಲವಲ್ಲಾ, ದೇವರೇ ಎಂದುಕೊಂಡು ಹಿಂದಿರುಗಲು ಅನುವಾದೆ.

ಶ್ರೀಮತಿ ಉಜಾಗರ್ ಸಿಂಗ್ ಏಕಿಷ್ಟು ಗಾಭರಿಯಾಗಿದ್ದೀರಿ ಎಂದರು. ಹಿಂದಿರುಗುತ್ತಾ, ಗಾಭರಿಯಾಗುವುದಕ್ಕೆ ಕಾರಣ ವಿವರಿಸಿದೆ. ಆಕೆ ಆಗ ನುಡಿದ ಮಾತುಗಳನ್ನು ನಾನು ಮರೆಯಲಾರೆ. ತಂಗೀ, ಹಿಂದಕ್ಕೆ ಏಕೆ ಹೊರಟೆ, ಹೋಗಿ ನೋಡಿ ಬಾ, ಆತನೂ ನಿನ್ನ ಸೋದರನಲ್ಲವೇ ಎಂದರು.

ಕಪಾಳಕ್ಕೆ ಹೊಡೆದಂತಾಯಿತು. ನಿಜ. ನನ್ನಲ್ಲಿ ತುಂಬಿದ್ದ ಸ್ವಾರ್ಥ, ಮೋಹ, ಬದುಕಿನ ಮೌಲ್ಯಗಳನ್ನೇ ಮರೆಸಿತ್ತು. ಕಣ್ತೆರೆಸಿದ ಆ ಮಾತುಗಳು ನನ್ನ ಬಾಳಿನ ದಾರಿ ದೀಪವಾಯಿತು.

ಬೆಂಗಳೂರು

ಕಮಲಾ ರಾಮಸ್ವಾಮಿ

# ಕೇನ್ಸ್, ಉದ್ಯೋಗ ಮತ್ತು ನಾವು

**ಅರವಿಂದ ಚೊಕ್ಕಾಡಿ**

ಅರ್ಥಶಾಸ್ತ್ರಜ್ಞ ಜಾನ್ ಮೆನಾರ್ಡ್ ಕೇನ್ಸ್ ಅವರು ೧೮೮೩ರಲ್ಲಿ ಬ್ರಿಟನ್‌ನಲ್ಲಿ ಜನಿಸಿದರು. ಕೇಂಬ್ರಿಜ್ ಕಿಂಗ್ಸ್ ಕಾಲೇಜಿನಲ್ಲಿ ಅರ್ಥಶಾಸ್ತ್ರದ ಪ್ರಾಧ್ಯಾಪಕರಾಗಿದ್ದ ಅವರು ಇಕನಾಮಿಕ್ ಜರ್ನಲ್‌ನ ಸಂಪಾದಕರಾಗಿಯೂ ಕಾರ್ಯ ನಿರ್ವಹಿಸಿದ್ದರು. ಅವರ ಮೇರು ಕೃತಿ 'ದ ಜನರಲ್ ಥಿಯರಿ ಆಫ್ ಎಂಪ್ಲಾಯ್‌ಮೆಂಟ್, ಇಂಟರೆಸ್ಟ್ ಅಂಡ್ ಮನಿ' ಎಂಬುದು. ಈ ಕೃತಿಯಲ್ಲಿ ಅವರು ಮಂಡಿಸಿದ ಉದ್ಯೋಗದ ಸಿದ್ಧಾಂತದ ಮೇಲೆ ಒಂದನೇ ಮಹಾಯುದ್ಧದ ನಂತರದ ಆರ್ಥಿಕ ಸಂಕಷ್ಟಕರ ಪರಿಸ್ಥಿತಿಯ ಪ್ರಭಾವವಿತ್ತು ಎಂಬುದನ್ನು ಗಮನಿಸಬೇಕಾಗುತ್ತದೆ. ಏಕೆಂದರೆ ಅವರ ಕೃತಿ ಬಿಡುಗಡೆಯಾದುದು ಮಹಾಯುದ್ಧ ಮುಗಿದ ನಂತರ – ೧೯೨೯ರಲ್ಲಿ ಕಾಣಿಸಿಕೊಂಡ ಜಾಗತಿಕ ಆರ್ಥಿಕ ಮುಗ್ಗಟ್ಟಿನ ನಂತರ, ೧೯೩೬ರಲ್ಲಿ.

ಅವರು ಪ್ರತಿಪಾದಿಸಿರುವ ಸಿದ್ಧಾಂತಗಳಲ್ಲಿ ಉದ್ಯೋಗದ ಸಿದ್ಧಾಂತ ಬಹಳ ಪ್ರಧಾನವಾದುದು. ಅವರ ಪ್ರಕಾರ ಪರಿಣಾಮಕಾರಿ ಬೇಡಿಕೆಯು ಉದ್ಯೋಗ, ಆದಾಯ, ಉತ್ಪನ್ನಗಳ ನಿರ್ಧಾರಕ ಅಂಶ. ಇಲ್ಲಿ ಪರಿಣಾಮಕಾರಿ ಬೇಡಿಕೆ ಎನ್ನುವುದು ಸಮಗ್ರ ರಾಷ್ಟ್ರದ ಆರ್ಥಿಕ ಚಟುವಟಿಕೆಗಳನ್ನೆಲ್ಲ ಆಧರಿಸಿರುವಂಥದು ಎಂಬುದನ್ನು ನೆನಪಿನಲ್ಲಿಡಬೇಕು.

ಪರಿಣಾಮಕಾರಿ ಬೇಡಿಕೆಯು ರಾಷ್ಟ್ರದ ಸಮಗ್ರ ಬೇಡಿಕೆ ಮತ್ತು ಪೂರೈಕೆಗಳ ಒಂದು ಸ್ಥಿತಿ. ಅಂದರೆ ಅವು ಪರಸ್ಪರ ಸಮನಾಗಿರುವಾಗ ಎಲ್ಲರಿಗೂ ಉದ್ಯೋಗ ಲಭ್ಯವಾಗುತ್ತದೆ. ಆದರೆ ಸ್ವತಃ ಕೇನ್ಸರೇ ಎಲ್ಲರಿಗೂ ಉದ್ಯೋಗ ಲಭ್ಯವಾಗುವ ಪೂರ್ಣೋದ್ಯೋಗ ಸ್ಥಿತಿಯೊಂದರ ಸಾಧ್ಯತೆ ಯನ್ನು ತಳ್ಳಿಹಾಕಿದ್ದಾರೆ. ಇದನ್ನು ಅವರು ಅಪೂರ್ಣೋದ್ಯೋಗ ಸಮತೋಲನವೆಂದು ಕರೆದಿದ್ದಾರೆ. ಆರ್ಥಿಕ ಪ್ರಗತಿ ಆಗುತ್ತಿರುವ ಹಾಗೆಲ್ಲ ಅರ್ಥ ವ್ಯವಸ್ಥೆಯಲ್ಲಿ ಬದಲಾವಣೆಗಳು ನಡೆಯುತ್ತವೆ. ಆ ಬದಲಾವಣೆಗಳಿಂದ ನಿರುದ್ಯೋಗ ತಲೆ ಎತ್ತುತ್ತದೆ. ಅದನ್ನು ಆಗಿಂದಾಗ್ಗೆ ಸರಿಪಡಿಸಬೇಕಾದರೆ ಪ್ರಭುತ್ವ ಮಧ್ಯ ಪ್ರವೇಶಿಸಬೇಕಾದ ಅಗತ್ಯವಿರುತ್ತದೆ.




ಹೀಗೆನ್ನುವ ಮೂಲಕ ಅವರು ಅರ್ಥಶಾಸ್ತ್ರದ ಪಿತನೆನಿಸಿದ ಆ್ಯಡಂ ಸ್ಮಿತ್‌ರ ಅದೃಶ್ಯ ಹಸ್ತದ ಪರಿಕಲ್ಪನೆಯನ್ನು ಅಲ್ಲಗಳೆಯು ತ್ತಾರೆ. ಅದೃಶ್ಯ ಹಸ್ತ ಪರಿಕಲ್ಪನೆಯ ಪ್ರಕಾರ ವೈಯಕ್ತಿಕ ಹಿತಾಸಕ್ತಿ ಸಾಮಾಜಿಕ ಹಿತಾಸಕ್ತಿಯಾಗಿ ಪರಿವರ್ತನೆ ಹೊಂದಿ ಒಟ್ಟು ಅರ್ಥ ವ್ಯವಸ್ಥೆ ಪ್ರಭುತ್ವದ ಮಧ್ಯಪ್ರವೇಶವಿಲ್ಲದೆಯೇ ಸ್ವಯಂ ಹೊಂದಾಣಿಕೆ ಮಾಡಿಕೊಳ್ಳುತ್ತದೆ. ಆದರೆ ಕೇನ್ಸರ ದೃಷ್ಟಿಯಲ್ಲಿ ಇದು ಸಾಧ್ಯವಾಗದು.

ಕೇನ್ಸರ ಈ ಅಭಿಪ್ರಾಯವನ್ನು ದೃಷ್ಟಿಯಲ್ಲಿರಿಸಿಕೊಂಡು, ಪ್ರಭುತ್ವದ ಮಧ್ಯ ಪ್ರವೇಶವಿಲ್ಲದೆ ನಿರುದ್ಯೋಗ ನಿವಾರಣೆ ಯಾಕೆ ಸಾಧ್ಯವಾಗುವುದಿಲ್ಲವೆಂಬುದನ್ನು ಸಮಕಾಲೀನ ವ್ಯವಸ್ಥೆಯ ಹಿನ್ನೆಲೆಯಲ್ಲಿ ಪರಾಮರ್ಶಿಸಬೇಕಾಗುತ್ತದೆ. ಸ್ಮಿತ್‌ರ ಪರಿಕಲ್ಪನೆಯ ಆಧಾರದಲ್ಲಿ ಹೇಳುವುದಾದರೆ ಬಂಡವಾಳಶಾಹಿ, ತನ್ನ ಉದ್ಯಮವನ್ನು ನಡೆಸಲು ಅದರ ಲಾಭದ ಹಿತಾಸಕ್ತಿ ಕಾರಣವಿರುತ್ತದೆ. ಆದರೆ ಉತ್ಪಾದನೆ ವೇಗವಾಗಿ ನಡೆಯಬೇಕೆಂದಾದಲ್ಲಿ ಅದು ಶ್ರಮಿಕವರ್ಗದ ಶ್ರಮವನ್ನು ಅವಲಂಬಿಸಬೇಕಾಗುತ್ತದೆ. ಹೀಗಾಗಿ ಹೆಚ್ಚು ಉತ್ಪಾದನೆ ನಡೆದಂತೆಲ್ಲ ಹೆಚ್ಚು ಉದ್ಯೋಗವೂ ಸೃಷ್ಟಿಯಾಗುತ್ತದೆ. ಉದ್ಯೋಗ ಹೆಚ್ಚಾದಂತೆ ಶ್ರಮಿಕರು ಪಡೆಯುವ ಆದಾಯ ಹೆಚ್ಚಿ ಉತ್ಪಾದಿತ ಸರಕುಗಳಿಗೆ ಬೇಡಿಕೆ ಹೆಚ್ಚುತ್ತದೆ. ಹೀಗೆ ಬಂಡವಾಳ ಶಾಹಿಗೆ ಅಗತ್ಯವಿರುವ ಶ್ರಮ, ಶ್ರಮಿಕರಿಂದ ಪೂರೈಕೆಯಾಗಬೇಕು. ಶ್ರಮಿಕರಿಗಿರುವ ಆದಾಯದ ಅಗತ್ಯವನ್ನು ಪೂರೈಸಿಕೊಳ್ಳಲು ಅವರು ಬಂಡವಾಳಶಾಹಿಯಿಂದ ಉದ್ಯೋಗ ಪಡೆಯಬೇಕು. ಆದ್ದರಿಂದ ಈ ಎರಡೂ ವರ್ಗಗಳ ಪರಸ್ಪರ ಹಿತಾಸಕ್ತಿಯಿಂದ ಉದ್ಯೋಗದ ಕೊರತೆ ಸಂಭವಿಸದೆ ಅರ್ಥ ವ್ಯವಸ್ಥೆಯ ಬೆಳವಣಿಗೆ ಸಾಧ್ಯ.

ಇದು ಹೀಗೆಯೇ ನಡೆದರೆ ಅಲ್ಲಿ ಪ್ರಭುತ್ವ ಮಧ್ಯ ಪ್ರವೇಶಿಸಬೇಕಾದ ಅಗತ್ಯವಿರುವುದಿಲ್ಲ. ಆದರೆ ಇಲ್ಲಿ ಇನ್ನೆರಡು ಅಂಶಗಳು ಕೆಲಸ ಮಾಡುತ್ತವೆ. ಬಂಡವಾಳಶಾಹಿ, ತಾನು ತನ್ನ ಶ್ರಮಿಕರಿಗೆ ಪಾವತಿ ಮಾಡುವ ಯಾವತ್ತೂ ವೇತನವನ್ನು ಹೆಚ್ಚಿಸದೆ ದುಡಿಯುವ ಅವಧಿಯನ್ನು ಹೆಚ್ಚಿಸಬಹುದು. ಪ್ರಸ್ತುತ ದುಡಿಯುತ್ತಿರುವ ಶ್ರಮಿಕರಿಗೆ ಉದ್ಯೋಗ ಅನಿವಾರ್ಯವಾಗಿರಲಾಗಿ ಬಂಡವಾಳಶಾಹಿಯನ್ನು ಎದುರಿಸಲಾಗದೆ ಹೋಗಬಹುದು. ಈ ಸ್ಥಿತಿಯಲ್ಲಿ ಯಾವುದೇ ಹೊಸ ಉದ್ಯೋಗದ ಸೃಷ್ಟಿಯಾಗದೆಯೂ ಬಂಡವಾಳಶಾಹಿಯ ಹಿತಸಾಧನೆಯಾಗಲು ಸಾಧ್ಯವಿದೆ.

ಎರಡನೆಯದಾಗಿ ಉದ್ದಿಮೆಯನ್ನು ಪ್ರವೇಶಿಸುವ ಯಂತ್ರಗಳು. ಅವುಗಳ ಖರೀದಿ ವೆಚ್ಚವನ್ನು ಭರಿಸಿದಾಗಲೂ ಅವು ಶ್ರಮಿಕರಿಗೆ ಪಾವತಿ ಮಾಡಲಾಗುವ ವೇತನಕ್ಕಿಂತ ಕಡಿಮೆ ವೆಚ್ಚದಲ್ಲಿ ಬಂಡವಾಳಶಾಹಿಗೆ ನೆರವಾಗಬಲ್ಲವು. ಅಲ್ಲದೆ ಮಾನವನ ಶ್ರಮಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಅತಿ ಶೀಘ್ರವಾಗಿ ಉತ್ಪಾದನೆ ನಡೆಸಬಲ್ಲವು. ಇಂಥಲ್ಲಿ ಬಂಡವಾಳ ಶಾಹಿ ತನ್ನ ಹಿತಾಸಕ್ತಿಯ ಉದ್ದೇಶದಿಂದ ಅಧಿಕ ಪ್ರಮಾಣದಲ್ಲಿ ಯಂತ್ರಗಳನ್ನು ಬಳಸಿಕೊಳ್ಳತೊಡಗಿದಂತೆಲ್ಲ ಹೊಸ ಉದ್ಯೋಗ ಸೃಷ್ಟಿಯಾಗುವುದಂತಿರಲಿ, ಇರುವ ಮಾನವ ಉದ್ಯೋಗಗಳೂ ನಷ್ಟವಾಗುತ್ತವೆ.

ಈ ಸನ್ನಿವೇಶಗಳನ್ನು ಸ್ಮಿತ್‌ರ ಸಿದ್ಧಾಂತ ಪರಿಗಣಿಸುವುದಿಲ್ಲ. ಆದರೆ ಕೇನ್ಸ್ ಇದನ್ನು ತುಂಬಿಕೊಡುತ್ತಾರೆ. ಇಂಥಲ್ಲಿ ನಷ್ಟವಾಗುವ ಮಾನವ ಉದ್ಯೋಗಗಳನ್ನು ಸಮತೋಲನ ಸ್ಥಿತಿಗೆ ತರಬಲ್ಲಂಥವು ಪ್ರಭುತ್ವದ ನೀತಿನಿಯಮಗಳು. ಆದ್ದರಿಂದ ಬೆಳವಣಿಗೆಯಾಗುತ್ತಿರುವ ಅರ್ಥವ್ಯವಸ್ಥೆಯೊಂದರಲ್ಲಿ ಪ್ರಭುತ್ವದ ಪಾಲುದಾರಿಕೆ ಅನಿವಾರ್ಯವಾಗುತ್ತದೆ.

ಒಂದೊಮ್ಮೆ ಪ್ರಭುತ್ವ ಮಧ್ಯ ಪ್ರವೇಶಿಸದೆ ಮಾನವ ಉದ್ಯೋಗಗಳು ಕಡಿಮೆಯಾಗುತ್ತಾ ಹೋದರೆ ಏನಾಗಬಹುದು ಎನ್ನುವುದನ್ನು ಜಾಗತೀಕರಣದ ಹಿನ್ನೆಲೆಯಲ್ಲಿ ಗ್ರಹಿಸಬೇಕು. ಉತ್ಪಾದನೆ ತೀವ್ರತರದಲ್ಲಿ ನಡೆದಾಗ ಪೂರೈಕೆ ಅಧಿಕವಾಗುತ್ತದೆ. ಮೊದಮೊದಲಿನ ಹಂತದಲ್ಲಿ ಪೂರೈಕೆಯಾಗುವ ವಸ್ತುಗಳಿಗೆ ಬೇಡಿಕೆ ಇರುತ್ತದೆ. ಶ್ರಮಿಕರು ಹಿಂದೆ ಗಳಿಸಿಟ್ಟ ಒಂದಷ್ಟು ಆದಾಯ, ಪ್ರಭುತ್ವದ ಉದ್ಯೋಗಿಗಳಿಗೆ ಬರುವ ಯಥಾರೀತಿಯ ಆದಾಯ, ರೈತರು ಸಂಕಷ್ಟಕ್ಕಿನ್ನೂ ಒಳಗಾಗದೆ ಉಳಿದಿರುವ ಸ್ಥಿತಿಯಲ್ಲಿ ಅವರು ಗಳಿಸುವ ಆದಾಯ, ನಿವೃತ್ತರು ಕೂಡಿಟ್ಟ ಆದಾಯ, ಉಳಿತಾಯದಲ್ಲಿ ಹೂಡಿದ ಹಣ ತಂದುಕೊಡುವ ಬಡ್ಡಿಯ ಆದಾಯ, ಸಾಲದಿಂದ ಗಳಿಸಲ್ಪಡುವ ಆದಾಯ ಇವೇ ಮೊದಲಾದವುಗಳು ಪೂರೈಕೆಯಾಗುವ ವಸ್ತುಗಳಿಗೆ ಬೇಡಿಕೆ ಸೃಷ್ಟಿಸುತ್ತವೆ. ಆದರೆ ಇವು ದೀರ್ಘಕಾಲ ಬೇಡಿಕೆ ಸೃಷ್ಟಿಸಲಾರವು. (ಪ್ರಸ್ತುತ ಭಾರತೀಯ ಸನ್ನಿವೇಶವನ್ನು ಗಮನಿಸಿದರೆ ಪ್ರಾಯಶಃ ಇಂಥ ಬೇಡಿಕೆ ಎರಡು ಮೂರು ದಶಕಗಳ ಕಾಲ ಮುನ್ನಡೆಯಬಹುದೇನೋ!)

ಯಾವ ಸ್ಥಿತಿಯಲ್ಲಿ ಪೂರೈಕೆಯಾಗುವ ವಸ್ತುಗಳಿಗೆ ಬೇಡಿಕೆ ಇಲ್ಲವಾಗುತ್ತದೋ ಆಗ ಒಂದು ದೇಶದ ಬಂಡವಾಳಶಾಹಿ ಇನ್ನೊಂದು ದೇಶದ ಮಾರುಕಟ್ಟೆಯನ್ನು ತನ್ನ ವಸ್ತುಗಳನ್ನು ಮಾರುವುದಕ್ಕಾಗಿ ಬಳಸಿಕೊಳ್ಳಬೇಕಾಗುತ್ತದೆ. ಅದು ಬಡ ರಾಷ್ಟ್ರವಾಗಿದ್ದಷ್ಟು ಬಂಡವಾಳಶಾಹಿಗೆ ಅನುಕೂಲವಾಗುತ್ತದೆ. ಏಕೆಂದರೆ ಅಲ್ಲಿನ ಉದ್ದಿಮೆಗಳು ಇನ್ನೂ ಸಾಕಷ್ಟು ಬೆಳೆದಿರುವುದಿಲ್ಲ, ಆದ್ದರಿಂದ ಅಲ್ಲಿ ಬೇಡಿಕೆ ಅಧಿಕವಾಗಿರುತ್ತದೆ. ಈಗಲಾದರೂ ಜಗತ್ತಿನ ಶ್ರೀಮಂತ ರಾಷ್ಟ್ರಗಳು ಮಾರುಕಟ್ಟೆಗಾಗಿ ಬಡರಾಷ್ಟ್ರಗಳನ್ನು ಆಕ್ರಮಿಸಿಕೊಳ್ಳುತ್ತಿರುವು ದೇಕೆ ಎನ್ನುವುದನ್ನು ಅರ್ಥಮಾಡಿಕೊಳ್ಳಬೇಕು. ಏಕೆಂದರೆ ಅವು ಉತ್ಪಾದಿಸುವ ವಸ್ತುಗಳಿಗೆ ಆ ದೇಶದಲ್ಲಿ ಹಾಗೂ ಅಂಥದೇ ಇನ್ನೊಂದು ಶ್ರೀಮಂತ ರಾಷ್ಟ್ರದಲ್ಲಿ ಬೇಡಿಕೆಯ ಕೊರತೆ ಇದೆ.

ಇಂಥಲ್ಲಿ ಜಾಗತಿಕ ಬಂಡವಾಳಶಾಹಿಗಳು ಭಾರತವನ್ನು ಗುರಿಯಾಗಿರಿಸಿ ಕೊಂಡಿರುವುದಕ್ಕೆ ಕಾರಣವಾದ ಭಾರತದ ವಿಶಿಷ್ಟ ಸಾಮಾಜಿಕ ಸನ್ನಿವೇಶವನ್ನು ಗಮನಿಸಬೇಕು. ಈ ದೇಶದ ಸಮಾಜ ಆರ್ಥಿಕ ದೃಷ್ಟಿಯಿಂದ ಸಂಘಟಿತವಾದುದಲ್ಲ; ಸಾಂಸ್ಕೃತಿಕ ದೃಷ್ಟಿಯಿಂದ

ಸಂಘಟಿತವಾದುದು. ಆರ್ಥಿಕತೆ ಎನ್ನುವಂಥದ್ದು ಇಲ್ಲಿನ ಸಂಸ್ಕೃತಿಯ ಒಂದು ಭಾಗಾಂಶವೇ ಹೊರತು ಅದು ತನ್ನದೇ ಆದ ಪ್ರತ್ಯೇಕ ಅಸ್ತಿತ್ವವನ್ನು ಕಂಡುಕೊಂಡಿರುವಂಥದಲ್ಲ. ಹೀಗಿರುವಾಗ ಇಲ್ಲಿನ ಸಾಂಸ್ಕೃತಿಕ ಮೌಲ್ಯವೊಂದು ಬಂಡವಾಳಶಾಹಿಗೆ ವಿಪುಲವಾಗಿ ನೆರವಾಗುತ್ತದೆ. ಅದೆಂದರೆ ಯಾವ ವ್ಯವಸ್ಥಿತ ಸಿದ್ಧಾಂತವೂ ಇಲ್ಲದೆ ಸೂಕ್ಷ್ಮ ಒಳಹರಿವಾಗಿ ಇಲ್ಲಿನ ಸಂಸ್ಕೃತಿಯೊಂದಿಗೆ ಬೆಳೆದು ಬಂದ ಸಮಾಜವಾದಿ ನಿಲುವು, ಸಾಮುದಾಯಿಕ ಜೀವನ ಪದ್ಧತಿ, ಪರಸ್ಪರ ಸಹಕಾರ ನೀಡುವ ಮನೋಭಾವ. ಈ ಒಂದು ಮನಸ್ಥಿತಿ ಇರುವಲ್ಲಿ ಉದ್ಯೋಗವಿಲ್ಲದವರಿಗೆ, ಉದ್ಯೋಗ ಕಳೆದುಕೊಂಡವರಿಗೆ ಸಹಕಾರದ ರೂಪದಲ್ಲಾಗಲಿ, ಸಾಲದ ರೂಪದಲ್ಲಾಗಲಿ, ಜನಸಮುದಾಯದಿಂದ ಬರುವಂಥ ನೆರವು ನಗಣ್ಯವೇನಲ್ಲ. 'ಇಂಡಿಯನ್ ಸೆಂಟಿಮೆಂಟ್' ಎಂದು ಯಾವುದನ್ನು ಕರೆಯಲಾಗುತ್ತದೋ ಅದುವೇ ಈ ದೇಶದ ಹಲವಾರು ದುರ್ಬಲರಿಗೆ ಬದುಕುವುದಕ್ಕೆ ಬೇಕಾದಷ್ಟು ಮಟ್ಟಿಗಾದರೂ ಆದಾಯವನ್ನು ಒದಗಿಸಿಕೊಡುತ್ತಿದೆಯೆಂದರೆ ತಪ್ಪಾಗಲಾರದು. ಆಧುನಿಕ ವ್ಯವಸ್ಥೆಯಲ್ಲಿ ಬೆಳೆಯುತ್ತಿರುವ ಆರ್ಥಿಕ ದೃಷ್ಟಿಕೋನವಾದರೂ ಸಮಗ್ರ ಸಮಾಜವನ್ನು ಇನ್ನೂ ಆವರಿಸಿಲ್ಲ. ಅಂಥಲ್ಲಿ ಈ ರೀತಿಯ ಸಾಂಸ್ಕೃತಿಕ ಜೀವನದೃಷ್ಟಿ ದುರ್ಬಲರಿಗೆ ಒದಗಿಸಿಕೊಡುವ ಆರ್ಥಿಕ ಜೀವದುಸಿರು ಇದೆಯಲ್ಲ ಅದು ವಿದೇಶಿ ಬಂಡವಾಳಶಾಹಿಯ ಉತ್ಪನ್ನಗಳಿಗೆ ಬೇಡಿಕೆಯನ್ನೂ ಸೃಷ್ಟಿಸಬಲ್ಲುದು. ಇದರಿಂದ ನಾವು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳಬೇಕಾದ ಅಂಶವೆಂದರೆ ಈಗಿನ ಸಂದರ್ಭದಲ್ಲಿ ಈ ದೇಶದ ಸಾಂಸ್ಕೃತಿಕ ಜೀವನ ಮೌಲ್ಯವನ್ನು ದುರುಪಯೋಗಪಡಿಸಿಕೊಳ್ಳಲಾಗುತ್ತಿದೆ. ಹಾಗೆಯೇ ಯಾರೋ ಕೆಲವರು ವಿದೇಶಿ ಬಂಡವಾಳಶಾಹಿಗಳು ಈ ದೇಶದ ಸಂಸ್ಕೃತಿಯ ಬಗ್ಗೆ ಬಹುವಾಗಿ ಹೊಗಳಿದರೆಂದು ಬೀಗುತ್ತೇವಲ್ಲ ಅಲ್ಲಿ ನಾವು ಅರ್ಥಮಾಡಿಕೊಳ್ಳಬೇಕು – ಅದು ನಮ್ಮನ್ನು ಮೋಸದ ಬಲೆಯಲ್ಲಿ ಕೆಡಹುವ ಹುನ್ನಾರ. ಇಲ್ಲಿ ನಾವು ಮಾಡಬೇಕಾದ ಒಂದೇ ಒಂದು ಅಗತ್ಯ ಕೆಲಸವೆಂದರೆ ಈ ದೇಶದ ಸಂಸ್ಕೃತಿಯ ಬಗ್ಗೆ ಹೊಗಳಿ ಅಟ್ಟಕ್ಕೇರಿಸುವವರು ಪ್ರಾಮಾಣಿಕರಾಗಿದ್ದರೆ ಈ ಸಂಸ್ಕೃತಿಯನ್ನು ಅಳವಡಿಸಿಕೊಳ್ಳಲಿ ನೋಡೋಣ. ಅದು ಆಗುವುದಿಲ್ಲ. ಇಲ್ಲಿ ನಾವು ಸಾಮಾನ್ಯ ಭಾರತೀಯ ನಾಗರಿಕರಾಗಿ ನಮ್ಮನ್ನು ನಾವೇ ಕೇಳಿಕೊಳ್ಳಬೇಕಾದ ಪ್ರಶ್ನೆಯೆಂದರೆ, ನಮ್ಮ ಸಂಸ್ಕೃತಿಯ ಬಗ್ಗೆ ಜಾಗತಿಕ ಬಂಡವಾಳಶಾಹಿಗಳು ದೃಢೀಕರಣ ಪತ್ರ ಕೊಟ್ಟು ಅದನ್ನು ಉಳಿಸಿಕೊಳ್ಳಬೇಕಾಗಿದೆಯೇ ? ನಮಗೇ ಅದನ್ನು ಉಳಿಸಿಕೊಳ್ಳುವ ಚೈತನ್ಯವಿಲ್ಲವೇ ? ಬೇಕಿದ್ದರೆ ಅವರಷ್ಟಕ್ಕೆ ಅವರು ಮೆಚ್ಚಿಕೊಳ್ಳಲಿ, ಅಳವಡಿಸಿಕೊಳ್ಳಲಿ. ಆದರೆ ಅವರ ಮೆಚ್ಚುಗೆಯಿಂದಾಗಿಯೇ ನಾವು ಶ್ರೇಷ್ಠರೆನಿಸಲಾರೆವು. ಭಾರತೀಯರಿಗೆ, ಭಾರತೀಯತ್ವದ ನೆಲೆಯಲ್ಲಿ ಇಂಥ ಒಂದು ಸವಾಲೆಸೆಯುವುದಕ್ಕೆ ಯಾವಾಗ ಸಾಧ್ಯವಾಗುತ್ತದೆಯೋ ಆಗ ನಾವು ಗೆಲ್ಲುತ್ತೇವೆ. ಇಲ್ಲವಾದರೆ ನಮ್ಮದೇ ಸಾಂಸ್ಕೃತಿಕ ಸ್ವರ್ಣಪೀಠವನ್ನು ಬಲಿಪೀಠವಾಗಿ ಪರಿವರ್ತಿಸುವವರಿಗೆ ನಾವೇ ಬಲಿಯಾಗುತ್ತೇವೆ. ಈ ದೇಶದ ಪ್ರಜ್ಞಾವಂತರಲ್ಲಿರುವ ದುರಂತವೂ ಕೂಡ ಇದೇ. ನಮ್ಮ ಸಂಸ್ಕೃತಿಯ ಎಲ್ಲ ಕೆಡುಕುಗಳ ಜೊತೆಗೇ ಇರುವ ಸಾಂಸ್ಕೃತಿಕ ಮೂಲ ಸತ್ವದ ಅರಿವುಳ್ಳ ಸಾಂಸ್ಕೃತಿಕ ಪ್ರಜ್ಞಾವಂತರಿಗೆ ಅದು ದುರುಪಯೋಗವಾಗುತ್ತಿರುವುದು ಅರಿವಾಗದೇ ಇರುವುದು ದುರಂತವಲ್ಲವೇ ? ಯಾಕೆ ಹೀಗಾಗುತ್ತಿದೆಯೆಂದರೆ, ಸಂಸ್ಕೃತಿಯನ್ನು ಸಾಂಸ್ಕೃತಿಕ ದೃಷ್ಟಿಯಿಂದ ನೋಡುವುದರಿಂದ ಹಾಗೂ ಆರ್ಥಿಕತೆಯನ್ನು ಸಾಂಸ್ಕೃತಿಕ ದೃಷ್ಟಿಯಿಂದ ನೋಡುವುದರಿಂದ. ಅದಲ್ಲ, ಸಂಸ್ಕೃತಿಯನ್ನು ಆರ್ಥಿಕ ದೃಷ್ಟಿಯಿಂದ ನೋಡಬೇಕು. ಆಗ ನಾವು ಕಳೆದುಕೊಳ್ಳುತ್ತಿರುವುದೇನು ಎಂಬುದರ ನಿಖರ ಅರಿವು ಮೂಡಬಲ್ಲುದು.

ಆದರೆ ಇಷ್ಟೆಲ್ಲ ಆಗಿಯೂ ಬಂಡವಾಳಶಾಹಿಯ ಹಿತಾಸಕ್ತಿ ನಿರಂತರವಾಗಿ ಉಳಿಯಲಾರದು. ಬಹುದೀರ್ಘಕಾಲದಲ್ಲಿ ಅಂದರೆ ಶತಮಾನಗಳಾಚೆ ಅದೂ ಕೂಡ ನಷ್ಟ ಅನುಭವಿಸಬೇಕಾಗುತ್ತದೆ. ನಿಧಾನಗತಿಯಲ್ಲಿ ಇನ್ನಾರಿಗೂ ಸಹಕಾರ ಕೊಡಲಾರದ ಜನಸಮುದಾಯ ಸೃಷ್ಟಿಯಾಗುವ ಒಂದು ಸ್ಥಿತಿಯಲ್ಲಿ ಬಂಡವಾಳಶಾಹಿ ತನ್ನ ಉತ್ಪನ್ನಗಳಿಗೆ ಬೇಡಿಕೆ ಕಳೆದುಕೊಳ್ಳಬೇಕಾಗುತ್ತದೆ. ಆಗ ಅದಕ್ಕುಳಿಯುವ ಆಯ್ಕೆಗಳು ಎರಡು : ಒಂದು, ತನ್ನ ಉತ್ಪನ್ನವನ್ನು ಕಡಿತಗೊಳಿಸಿ ಬೇಡಿಕೆ ಮತ್ತು ಪೂರೈಕೆಗಳ ನಡುವೆ ಸಮತೋಲನ ಸಾಧಿಸುವುದು. ಇನ್ನೊಂದು, ಮತ್ತೆ ತನಗೆ ತಾನೇ ಅನಿವಾರ್ಯವಾಗಿ ಯಂತ್ರಗಳನ್ನು ಬದಿಗಿರಿಸಿ ಮಾನವ ಉದ್ಯೋಗಗಳನ್ನು ಸೃಷ್ಟಿಸುವುದು. ಆದರೆ ಅಷ್ಟರಲ್ಲಿ ಬಹುಮಟ್ಟಿನ ದುರ್ಬಲವರ್ಗ ತನ್ನ ಅಸ್ತಿತ್ವ ಕಳೆದುಕೊಂಡಿದ್ದರೆ ಆಶ್ಚರ್ಯವಿಲ್ಲ.

ಇದೆಲ್ಲ ನಡೆಯಬಹುದಾದ್ದು ಬಹು ದೀರ್ಘಾವಧಿಯಲ್ಲಿ. ಅಂಥ ಒಂದು ದೀರ್ಘಾವಧಿಯ ಬಗ್ಗೆ ಕೇನ್ಸರು "ದೀರ್ಘ ಅವಧಿಯಲ್ಲಿ ನಾವೆಲ್ಲ ಸತ್ತಿರುತ್ತೇವೆ. ಅದರ

## ನನ್ನಜ್ಜಿ-ಅವ್ವ-ನನ್ನಾಕಿ

ನನ್ನಜ್ಜ ಮಾಡುತ್ತಿದ್ದ ಪುಂಡಿಪಲ್ಲೆದ ರೊಟ್ಟಿ
ಹುಳ್ಳಿ-ಹುಳ್ಳಾನುಚ್ಚ ನಮ್ಮವ್ವಗೆ ಬಾರವು
ನಮ್ಮವ್ವ ಮಾಡುತ್ತಿದ್ದ ಬಿಳಿ ಜ್ವಾಳ ರೊಟ್ಟಿ-ದಪಾಟಿ
ಹೀರಿ-ಬದನಿಕಾಯಿ ಬರತ, ತೊಂಡಿಚಟ್ನಿ
ನನ್ನಾಕಿಗೆ ಬಾರವು
ಏನಿದ್ದರೂ
ಇವಳು ಬ್ರೆಡ್ಡು-ಬಿಸ್ಕೀಟು-ಅನ್ನಸಾರಿನವಳು.

ನನ್ನಜ್ಜಿ ತೊಟ್ಟ ಇಲಕಲ್ ಸೀರಿ
ಗುಳೇದುಗುಡ್ಡ ಕುಬಸ, ಮಗದುರುಬ
ನಮ್ಮವ್ವನಲ್ಲಿಲ್ಲ.
ನಮ್ಮವ್ವ ಉಡುವ ಏಕರಂಗಿನ ಸೀರಿ
ಬನಹಟ್ಟಿ ಕುಬುಸ, ಹಿಡಿದುರುಬ
ನನ್ನಾಕೆಯಲ್ಲಿಲ್ಲ.
ಏನಿದ್ದರೂ
ಇವಳಿಗೆ ಚೂಡಿದಾರ, ಮಿಡಿ
ನಾಗರಜಡೆಯೇ ಅಚ್ಚು-ಮೆಚ್ಚು.

ನನ್ನಜ್ಜಿ ಮೆಟ್ಟುತ್ತಿದ್ದ ರಬ್ಬರಿನ ಚಪ್ಪಲಿ
ಧರಿಸುವ ಡಾಬು-ಪಾಗಿನ, ಓಲೆ-ನತ್ತು



ನಮ್ಮವ್ವನಲ್ಲಿಲ್ಲ.
ನಮ್ಮವ್ವ ಹಾಕುತ್ತಿದ್ದ ಕೊಲ್ಲಾಪುರಿ ಕಾಲ್ಮರಿ
ಕಾಲಪಿಲ್ಲೆ-ಕಾಲುಂಗರ, ಮುತ್ತಿನ ನತ್ತು
ನನ್ನಾಕೆಯಲ್ಲಿಲ್ಲ.
ಏನಿದ್ದರೂ
ಈಕೆಗೆ ಹವಾಯಿ, ಪ್ಲಾಸ್ಟಿಕ್ ಚಪ್ಪಲಿ, ಬೂಟು
ಕಿವಿ-ಮೂಗಿಗಿಲ್ಲ ಒಂದು ತೂತು
ಇದ್ದರೂ ಎಲ್ಲವೂ ಪ್ಲಾಸ್ಟಿಕಿನ ಮಾತು.

ನನ್ನಜ್ಜಿಗಿದ್ದ ಸುಖ ಶಾಂತಿ-ಶಕ್ತಿ
ನಮ್ಮವ್ವಗಿಲ್ಲ
ನಮ್ಮವಗಿದ್ದ ತಾಳ್ಮೆ-ತ್ಯಾಗ-ಕರುಣೆ
ನನ್ನಾಕೆಯಲ್ಲಿಲ್ಲ.
ಆದರೂ
ನಾ ಎಂದರೆ ಎದ್ದು ಬಿದ್ದು ಒದ್ದಾಡುತ್ತಾಳೆ
ಬಾಳದೋಣಿಯ ಹುಟ್ಟು ಹಾಕುತ್ತಿದ್ದಾಳೆ
ಜೀವನದಿ ದಡ ಸೇರಲು.

ಡಾ|| ಅರ್ಜುನ ಗೊಳಸಂಗಿ
ಕನ್ನಡ ಉಪನ್ಯಾಸಕರು, ಗ.ಸ.ಜ.ಗಿ. ಪ.ಪೂ. ಕಾಲೇಜು
ಹುಲಕೋಟಿ, ಗದಗ ಜಿಲ್ಲೆ

ಬಗ್ಗೆ ಏಕೆ ಚಿಂತೆ ?'' ಎಂದು ಕೇಳುತ್ತಾರೆ. ಆದ್ದರಿಂದ ನಾವು ಮಾಡಬೇಕಾದ್ದು ಸದ್ಯದ ಪರಿಸ್ಥಿತಿಯಲ್ಲಿ ಬೇಡಿಕೆ ಮತ್ತು ಪೂರೈಕೆಗಳ ನಡುವೆ ಸಮತೋಲನ ಸಾಧಿಸುವ ಮೂಲಕ ಉದ್ಯೋಗ ಮತ್ತು ಆದಾಯದ ನಡುವೆ ಸಮಸ್ಥಿತಿಯನ್ನು ಸಾಧಿಸಬೇಕಾದ ಕೆಲಸ. ಪ್ರಭುತ್ವ, ಈ ಕೆಲಸವನ್ನು ಹೇಗೆ ನಿಭಾಯಿಸಬಹುದು ಎಂಬುದಕ್ಕೆ ೧೯೩೯ರಲ್ಲಿ ಅಮೇರಿಕಾದಲ್ಲಿ ಪ್ರಾರಂಭವಾದ ಜಾಗತಿಕ ಆರ್ಥಿಕ ಮುಗ್ಗಟ್ಟಿನ ಸಮಯದಲ್ಲಿ ಅಲ್ಲಿನ ಅಂದಿನ ಅಧ್ಯಕ್ಷ ಫ್ರಾಂಕ್ಲಿನ್ ಡಿ. ರೂಸ್‌ವೆಲ್ಟ್ ಅವರು ತೆಗೆದುಕೊಂಡ ಕ್ರಮಗಳ ಚರಿತ್ರೆಯತ್ತ ಗಮನಹರಿಸಬೇಕಾಗುತ್ತದೆ –

ಆಧುನಿಕ ತಂತ್ರಜ್ಞಾನದ ವ್ಯಾಪಕ ಬಳಕೆಯಿಂದ ಉತ್ಪಾದನೆ ಗಣನೀಯವಾಗಿ ಹೆಚ್ಚಿತ್ತು. ಆದರೆ ಅವುಗಳನ್ನು ಖರೀದಿಸುವವರೇ ಇಲ್ಲದಂಥ ಸ್ಥಿತಿ ಅಮೇರಿಕಾದ ಅರ್ಥವ್ಯವಸ್ಥೆಯದಾಗಿತ್ತು. ಕಾರ್ಖಾನೆಗಳಿಂದ ಹೊರದೂಡಲ್ಪಟ್ಟ ಕಾರ್ಮಿಕರು ನಿರ್ಗತಿಕರಾದರು. ಅದು ಕೃಷಿರಂಗವನ್ನೂ ಬಾಧಿಸಿ ಕೃಷಿಕರ ಉತ್ಪನ್ನಗಳಿಗೂ ಬೇಡಿಕೆ ಕುಸಿಯಿತು. ಕಾರಣವೇನೆಂದರೆ ಅವರ ಉತ್ಪನ್ನಗಳ ಗ್ರಾಹಕರಾಗಿದ್ದ ಕಾರ್ಮಿಕರು ಶೋಚನೀಯ ಸ್ಥಿತಿಯಲ್ಲಿದ್ದರು. ತತ್ಪರಿಣಾಮವಾಗಿ ಕೃಷಿ ಉತ್ಪನ್ನಗಳ ಬೆಲೆ ತೀವ್ರವಾಗಿ ಇಳಿಯಿತು. ಕೃಷಿಕರು ತಮ್ಮ ಭೂಮಿಯನ್ನು ಸಿಕ್ಕ ಬೆಲೆಗೆ ಮಾರುವಂತಾಗಿ ಅವರೂ ನಿರ್ಗತಿಕ ಕಾರ್ಮಿಕರೊಡನೆ ಬೆರೆತುಬಿಟ್ಟರು. ಈ ಸ್ಥಿತಿಯಲ್ಲಿ ಅಮೇರಿಕಾ ತನ್ನ ಉತ್ಪನ್ನಗಳನ್ನು ಅನ್ಯ ದೇಶಗಳಿಗೆ ಮಾರಾಟ ಮಾಡಬಹುದಿತ್ತು. ಆದರೆ ಆ ಕಾಲಕ್ಕೆ ಅದರ ಅತಿದೊಡ್ಡ ಮಾರುಕಟ್ಟೆ ಯೂರೋಪ್ ಆಗಿದ್ದು ೧೯೧೯ರಲ್ಲಿ ಮುಕ್ತಾಯವಾದ ಒಂದನೇ ಮಹಾಯುದ್ಧದ ದಾರುಣ ಸನ್ನಿವೇಶದಿಂದ ಅದಿನ್ನೂ ಸಾಕಷ್ಟುಮಟ್ಟಿಗೆ ಚೇತರಿಸಿಕೊಂಡಿರಲಿಲ್ಲ. ಅಲ್ಲದೆ ಸ್ವತಃ ಅಮೇರಿಕಾ ತನ್ನ ರಾಜಕೀಯ ಹಿತಾಸಕ್ತಿಯ ಉದ್ದೇಶಕ್ಕಾಗಿ ಯೂರೋಪ್‌ನ ಮಿತ್ರರಾಷ್ಟ್ರಗಳಿಗೆ ಸಹಾಯ ಮಾಡಬೇಕಾದ ಸ್ಥಿತಿ ಇತ್ತು.

ಇಂಥ ಒಂದು ಸನ್ನಿವೇಶದಲ್ಲಿ ಅಮೇರಿಕಾ ತನ್ನ ಆಂತರಿಕ ಅರ್ಥವ್ಯವಸ್ಥೆಯನ್ನು ಬಲಪಡಿಸಿಕೊಳ್ಳದೆ ಅನ್ಯ ಮಾರ್ಗವೇ ಇರಲಿಲ್ಲ. ಅದನ್ನು ಸಮರ್ಥವಾಗಿ ನಿರ್ವಹಿಸಿದವರು ೧೯೩೩ರಲ್ಲಿ ಅಧಿಕಾರಕ್ಕೆ ಬಂದ ಫ್ರಾಂಕ್ಲಿನ್ ಡಿ. ರೂಸ್‌ವೆಲ್ಟ್ ಅವರು. ಅವರು ತೆಗೆದು ಕೊಂಡ ಆರ್ಥಿಕ ಸುಧಾರಣಾ ಕ್ರಮಗಳನ್ನು ''ನ್ಯೂ ಡೀಲ್ ಪಾಲಿಸಿ'' ಎಂದು ಕರೆಯ ಲಾಗಿದೆ. ಅದರ ಪ್ರಕಾರ ಕಾರ್ಖಾನೆಗಳಲ್ಲಿನ್ನೂ ದುಡಿಯುತ್ತಿದ್ದ ಕಾರ್ಮಿಕರ ಕೆಲಸದ ಅವಧಿ ಯನ್ನು ಕಡಿಮೆ ಮಾಡಿ ವೇತನವನ್ನು ಹೆಚ್ಚಿಸಲಾಯಿತು. ಕೃಷಿ ಉತ್ಪನ್ನಗಳ ಉತ್ಪಾದನೆಯನ್ನು ಕಡಿತಗೊಳಿಸಿ ಅದಕ್ಕೆ ಪ್ರತಿಯಾಗಿ ರೈತರಿಗೆ ಪರಿಹಾರ ಧನವನ್ನು ನೀಡಲಾಯಿತು. ನಿರುದ್ಯೋಗಿಗಳಿಗೆ ನಿರುದ್ಯೋಗ ಭತ್ಯೆ ನೀಡಲಾಯಿತು. ಇವೆಲ್ಲದರ ಪರಿಣಾಮವಾಗಿ ೧೯೩೯ರ ಹೊತ್ತಿಗೆ ಅಮೇರಿಕಾದ ಅರ್ಥವ್ಯವಸ್ಥೆ ಸಾಮಾನ್ಯ ಚೇತರಿಕೆಯನ್ನು ಕಂಡಿತು.

ಇಲ್ಲಿನ ಕೆಲವು ಕ್ರಮಗಳು ಕೆಲವು ಮಂದಿ ವಾಚಕರಿಗೆ ವಿಚಿತ್ರವೆನಿಸಲೂಬಹುದು. ಆದರೆ ಅದು ವಿಚಿತ್ರವಲ್ಲ. ಯಾವುದೇ ಒಂದು ದೇಶದ ಪ್ರಭುತ್ವ ತನ್ನ ಜನರ ಹಿತಾಸಕ್ತಿಗಾಗಿ ಮತ್ತು ತನ್ನ ಅರ್ಥ ವ್ಯವಸ್ಥೆಯ ರಕ್ಷಣೆಗಾಗಿ ತೆಗೆದುಕೊಳ್ಳಬೇಕಾದ ಅನಿವಾರ್ಯ ಕ್ರಮ. ಯಾಕೆಂದರೆ, ಕಾರ್ಖಾನೆ ನೌಕರರ ದುಡಿಮೆಯ ಅವಧಿಯನ್ನು ಕಡಿತಗೊಳಿಸುವುದರಿಂದ ಉತ್ಪಾದನೆ ಕಡಿಮೆಯಾಗುತ್ತದೆ. ಅಮೇರಿಕಾ ಬಳಲುತ್ತಿದ್ದುದೇ ಉತ್ಪಾದನಾ ಆಧಿಕ್ಯದಿಂದ. ಅಂಥಲ್ಲಿ ನೌಕರರಿಗೆ ಅಧಿಕ ವೇತನ ಕೊಡುವುದರಿಂದ ಅವರ ಕೊಳ್ಳುವ ಶಕ್ತಿ ಹೆಚ್ಚಿ ರಾಶಿರಾಶಿಯಾಗಿ ಉಳಿದಿರುವ ಉತ್ಪಾದಿತ ಸರಕುಗಳಲ್ಲಿ ಒಂದಷ್ಟು ಖರೀದಿಯಾಗುತ್ತದೆ. ಇದೇ ತಂತ್ರವನ್ನು ಕೃಷಿರಂಗಕ್ಕೂ ಅಳವಡಿಸಿದ್ದು. ರೈತರು ಹೆಚ್ಚು ಉತ್ಪಾದಿಸಬಾರದು; ಏಕೆಂದರೆ ಅವರ ಉತ್ಪಾದನೆಗೆ ಈಗಾಗಲೇ ಬೇಡಿಕೆ ಕುಸಿದಿದ್ದು ಕೃಷ್ಯುತ್ಪನ್ನಗಳೂ ಮಾರಾಟವಾಗದೆ ಉಳಿದಿದ್ದವು. ಅವು ಮಾರಾಟವಾಗಬೇಕು. ಆ ನಂತರವಷ್ಟೇ ಇನ್ನಷ್ಟು ಉತ್ಪಾದನೆಗೆ ಅರ್ಥ ಬರುತ್ತದೆ. ಅಂಥಲ್ಲಿ ನಿರುದ್ಯೋಗ ಭತ್ಯೆಯ ಮೂಲಕ ನಿರ್ಗತಿಕ ಕಾರ್ಮಿಕರ, ಉದ್ಯೋಗವಿಲ್ಲದವರ ಕೊಳ್ಳುವ ಶಕ್ತಿಯನ್ನು ದೃಢೀಕರಿಸಲಾಯಿತು. ಹಾಗೆ ಅವರು ಪಡೆದ ಹಣ ಮೊದಲಿಗೆ ಕೃಷಿ ಉತ್ಪನ್ನಗಳಿಗೆ ಬೇಡಿಕೆ ಸೃಷ್ಟಿಸುತ್ತದೆ; ನಂತರ ಕೈಗಾರಿಕೋತ್ಪನ್ನಗಳಿಗೆ. ಆದರೆ ಇಷ್ಟಾಗುವಾಗ ರೈತರ ಕೆಲವು ಅನಿವಾರ್ಯ ಅಗತ್ಯದ ಕೈಗಾರಿಕಾ ಸರಕುಗಳಿರುತ್ತವೆಯಲ್ಲವೇ ಅವನ್ನು ಅವರು ಪಡೆದುಕೊಳ್ಳುವಂತಾಗಬೇಕು. ಅದಕ್ಕಾಗಿ ರೈತರಿಗೆ ಪರಿಹಾರ ಧನ ನೀಡಲಾಯಿತು. ಒಟ್ಟಿನಲ್ಲಿ ಅಮೇರಿಕಾದ ಪ್ರಭುತ್ವ ತನ್ನ ಎಲ್ಲ ಜನರಿಗೆ ಆರ್ಥಿಕ ಆತ್ಮವಿಶ್ವಾಸ ಮೂಡಿಸುವ ಕ್ರಮ ಕೈಗೊಂಡಿತು.

ಇಲ್ಲಿ ಪ್ರಭುತ್ವ ನಷ್ಟ ಅನುಭವಿಸುವುದಿಲ್ಲವೇ ಎಂಬ ಪ್ರಶ್ನೆ ಮೂಡಬಹುದು. ಆದರೆ ಯಾವುದೇ ಒಂದು ಪ್ರಭುತ್ವಕ್ಕೆ ತನ್ನ ಅರ್ಥ ವ್ಯವಸ್ಥೆಯನ್ನು ಬಲಪಡಿಸುವುದಕ್ಕಾಗಿ ಅರ್ಥ ಕ್ಷೇತ್ರದಲ್ಲಿ ವಿಪುಲವಾಗಿ ಕರೆನ್ಸಿಯನ್ನು (ಹಣ) ಚಲಾವಣೆಗೆ ತರಲು ಹೇಗೆ ಪರಮಾಧಿಕಾರವಿದೆಯೋ ಹಾಗೆಯೇ ಅರ್ಥ ವ್ಯವಸ್ಥೆ ನಿರೀಕ್ಷಿತ ಪ್ರಮಾಣದಲ್ಲಿ ಬಲಗೊಂಡಾಗ ಕರೆನ್ಸಿಯನ್ನು ಹಿಂದಕ್ಕೆ ಪಡೆಯುವ ಅಧಿಕಾರವೂ ಇದೆ. ಅದು ಎಲ್ಲೆಲ್ಲಿ ಹಣದ ಕ್ರೋಢೀಕರಣ ನಡೆದಿದೆಯೆಂದು ಗ್ರಹಿಸುತ್ತದೋ ಅಲ್ಲಿಗೆ ಅಧಿಕ ತೆರಿಗೆ ಹೇರಿ ಹಣವನ್ನು ಹಿಂದೆ ಪಡೆಯಬಹುದು.

ಅಮೇರಿಕಾದಂಥ ಒಂದು ದೇಶಕ್ಕೆ ಕರೆನ್ಸಿಯನ್ನು ಹಿಂದಕ್ಕೆ ಪಡೆಯುವ ಸಮಸ್ಯೆ ಬಹುದೊಡ್ಡದಾಗಿ ಬಾಧಿಸುವುದಿಲ್ಲ. ಏಕೆಂದರೆ ಅದರ ಕರೆನ್ಸಿಯಾದ ಡಾಲರ್ ಅಂತಾರಾಷ್ಟ್ರೀಯ ಹಣದ ಮೌಲ್ಯವನ್ನು ನಿರ್ಧರಿಸುವ ಮಾನದಂಡವಾಗಿದ್ದು ನಂತರದ ದಿನಗಳಲ್ಲಿ ಅದು ಬಹುದೊಡ್ಡ ಅಂತಾರಾಷ್ಟ್ರೀಯ ಮಾರುಕಟ್ಟೆ ಪಡೆದುಕೊಂಡದ್ದು ಗಮನಾರ್ಹ ಸಂಗತಿ.

ಆದರೆ, ಪ್ರಸ್ತುತ ಭಾರತದಲ್ಲಿ ಈ ರೀತಿಯ ಕ್ರಮ ಕೈಗೊಳ್ಳುವುದು ಸರಿಯಾಗಲಾರದು. ಏಕೆಂದರೆ ಈ ಲೇಖನ ಬರೆಯುವ ಹೊತ್ತಿಗೆ ನಮ್ಮ ೪೭.೬೫ ರೂಪಾಯಿಗಳು ಒಂದು ಡಾಲರ್‌ನ ಮೌಲ್ಯಕ್ಕೆ ಸಮವಾಗಿದೆ. ಅದನ್ನು ಓದುಗರು ೪೦ ರಿಂದ ೫೦ ರೂಪಾಯಿಗಳ ಆಸುಪಾಸು ಎಂದು ಗ್ರಹಿಸಿದರೆ ತೊಂದರೆಯೇನಿಲ್ಲ. ಇಂಥಲ್ಲಿ ನಮ್ಮ ಪ್ರಭುತ್ವ ಇನ್ನೂ ಹೆಚ್ಚಿನ ಕರೆನ್ಸಿಗಳನ್ನು ಚಲಾವಣೆಗೆ ತಂದರೆ ಡಾಲರ್‌ನ ಮುಂದೆ ನಮ್ಮ ರೂಪಾಯಿ ತೀವ್ರ ಅಪಮೌಲ್ಯಕ್ಕೆ ಗುರಿಯಾಗಬೇಕಾಗುತ್ತದೆ. ಎಷ್ಟು ಬೇಕಾದರೂ ಕರೆನ್ಸಿಗಳನ್ನು ಚಲಾವಣೆಗೇನೋ ಇಳಿಸಬಹುದು. ಏಕೆಂದರೆ ನಮ್ಮ ರಿಸರ್ವ್ ಬ್ಯಾಂಕ್ ಕನಿಷ್ಠ ಕಾಪುನಿಧಿ ಪದ್ಧತಿಯ ಮೂಲಕ ಕರೆನ್ಸಿ ಚಲಾವಣೆ ಮಾಡುತ್ತಿದೆ. ಅಂದರೆ ನೂರ ಹದಿನೈದು ಕೋಟಿ ರೂಪಾಯಿಗಳ ಮೌಲ್ಯದ ಚಿನ್ನ ಮತ್ತು ಎಂಬತ್ತೈದು ಕೋಟಿ ರೂಪಾಯಿ ಮೌಲ್ಯದ ದಾಖಲೆ ಪತ್ರ, ಹೀಗೆ ಒಟ್ಟಾಗಿ ಇನ್ನೂರು ಕೋಟಿ ರೂಪಾಯಿ ಮೌಲ್ಯವನ್ನು ತನ್ನ ರಕ್ಷಣಾನಿಧಿಯಾಗಿ ಇಟ್ಟುಕೊಂಡಿರುವ ರಿಸರ್ವ್ ಬ್ಯಾಂಕ್ ಎಷ್ಟು ಬೇಕಾದರೂ ಕರೆನ್ಸಿಗಳನ್ನು ಚಲಾವಣೆಗೆ ತರಬಹುದು. ಆದರೆ ಹೀಗೆ ಚಲಾವಣೆಗೆ ತರಲಾಗುವ ಕರೆನ್ಸಿಗಳ ಮೌಲ್ಯವನ್ನು ಡಾಲರ್‌ನ ಮುಂದೆ ಸಮದೂಗಿಸಿ ಕೊಳ್ಳಬಹುದಾದ ಮಟ್ಟಿಗೆ ವಿದೇಶಿ ಮಾರುಕಟ್ಟೆ ನಮಗೆ ಲಭ್ಯವಿಲ್ಲ (ಪ್ರಸ್ತುತ ಲೇಖನದಲ್ಲಿ ವಿದೇಶಿ ವ್ಯಾಪಾರದ ಸ್ಥಿತಿಗತಿಗಳನ್ನು ವಿವರಿಸುವ ಉದ್ದೇಶ ಇಲ್ಲವಾದ್ದರಿಂದ ಅದನ್ನು ಹೇಳುತ್ತಿಲ್ಲ). ಅಂಥಲ್ಲಿ ಇಂಥ ಒಂದು ಕ್ರಮ ರೂಪಾಯಿಯ ತೀವ್ರ ಅಪಮೌಲ್ಯಕ್ಕೆ ಒಳಪಡಿಸಬಹುದಾದ ಭೀತಿ ನಿಚ್ಚಳವಾಗಿ ಇದೆ. ಈಗಾಗಲೇ ಹಾಗೆ ಆಗಿದೆ. ೬೦-೭೦ರ ದಶಕದ ಸುಮಾರಿಗೆ ರೂಪಾಯಿಯ ಮೌಲ್ಯ ಒಂದು ಡಾಲರಿಗೆ ಏಳರಿಂದ ಇಪ್ಪತ್ತು ರೂಪಾಯಿಗಳ ಆಸುಪಾಸಿನಲ್ಲಿತ್ತು. ಅದೀಗ ನಲವತ್ತೇಳಕ್ಕೆ ಏರಿದೆ. ಅಂದರೆ ಅರ್ಥ ವ್ಯವಸ್ಥೆಗೆ ಬಿಡುಗಡೆಯಾದ ಕರೆನ್ಸಿಗಳು ಅಷ್ಟೇ ಪ್ರಮಾಣದಲ್ಲಿ ಹೆಚ್ಚಿದ್ದು ಅವು ಡಾಲರ್‌ನ ಮುಂದೆ ದುರ್ಬಲವಾಗುತ್ತಾ ಹೋಗಿವೆ.

ಇಂಥಲ್ಲಿ ಇನ್ನಷ್ಟು ಕರೆನ್ಸಿಗಳನ್ನು ಚಲಾವಣೆಗಿಳಿಸಿದರೆ ಡಾಲರ್‌ನ ಮುಂದೆ ಅದು ಮತ್ತೂ ದುರ್ಬಲವಾಗಬಹುದು. ಆದ್ದರಿಂದ ನಮ್ಮ ಪ್ರಭುತ್ವ ಮಾಡಬೇಕಾದ ಕೆಲಸ ಇದಲ್ಲ. ಬದಲು ಎಲ್ಲಿ ಹಣದ ಸಂಗ್ರಹಣೆ ಜಾಸ್ತಿ ಇದೆಯೋ ಅದನ್ನು ತೆರಿಗೆ ರೂಪದಲ್ಲಿ ಹಿಂದಕ್ಕೆ ಪಡೆದು ನಿರುದ್ಯೋಗಿಗಳಿಗೆ ಉದ್ಯೋಗ ಸೃಷ್ಟಿಸುವ ಕಾರ್ಯ ಕೈಗೊಳ್ಳಬೇಕು. ವಿದೇಶಿ ಬಂಡವಾಳಶಾಹಿ ಈ ದೇಶಕ್ಕೆ ಹರಿದು ಬರುತ್ತಿರುವುದರಿಂದ ಇನ್ನೊಂದು ಕ್ರಮ ಕೈಗೊಳ್ಳಬಹುದು. ಜಾಗತೀಕರಣದ ನೀತಿನಿಯಮಗಳೇನೇ ಇರಲಿ. ಅವು ಈ ದೇಶವನ್ನು ಪ್ರವೇಶಿಸುವಾಗ ನಿರ್ದಿಷ್ಟ ಮೊತ್ತದ ದೇಣಿಗೆ ಪಡೆಯಬೇಕು. ಅದರಿಂದ ಒಂದು ಕ್ರೋಢೀಕೃತ ನಿಧಿಯನ್ನು ಸ್ಥಾಪಿಸಬೇಕು. ಪ್ರತೀ ವರ್ಷ ವಿದೇಶಿ ಬಂಡವಾಳಶಾಹಿ ಇಲ್ಲಿ ಪಡೆಯುವ ಲಾಭಾಂಶದಲ್ಲಿ ಇಂತಿಷ್ಟು ಎಂಬ ದೇಣಿಗೆಯನ್ನು ಆ ಕ್ರೋಢೀಕೃತ ನಿಧಿಗೆ ಸಂದಾಯ ಮಾಡುವಂಥ ನಿಯಮ ರೂಪಿಸಬೇಕು. ಆ ನಿಧಿಯಿಂದ ದೇಶೀಯ ನಿರುದ್ಯೋಗಿಗಳಿಗೆ ಮಾನವ ಉದ್ಯೋಗ ಸೃಷ್ಟಿಸುವ ಯೋಜನೆ ಕಾರ್ಯಗತ ಮಾಡಬೇಕು.

ಆದರೆ ಈಗ ಕೂಡ ಕೆಲವು ಬಂಡವಾಳಶಾಹಿಗಳು ಸಾರ್ವಜನಿಕ ಹಿತಾಸಕ್ತಿಯ ಉದ್ದೇಶಕ್ಕೆ ದೇಣಿಗೆ ಕೊಡುತ್ತಿರುವರಲ್ಲ, ಅಂಥಲ್ಲಿ ಹೀಗೊಂದು ನಿಧಿಯ ಅಗತ್ಯವೇನು ಎಂಬ ಪ್ರಶ್ನೆ ಬರಬಹುದು. ಅದಕ್ಕೆ ಕಾರಣಗಳಿವೆ. ಮೊದಲನೆಯದಾಗಿ ನಾವಂದುಕೊಳ್ಳುತ್ತಿರುವಂತೆ ಯಾರೋ ಒಬ್ಬರು ೫೦ ಕೋಟಿ ನೂರು ಕೋಟಿ ದೇಣಿಗೆ ಕೊಟ್ಟರೆಂದ ಮಾತ್ರಕ್ಕೆ ಅದು ಬೃಹತ್ ಮೊತ್ತವೇನೂ ಆಗುವುದಿಲ್ಲ. ಇಡೀ ಅರ್ಥ ವ್ಯವಸ್ಥೆಯಲ್ಲಿ ಅದು ಆನೆಯ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆಯಷ್ಟೇ. ಎರಡನೆಯದಾಗಿ ಹೀಗೆ ಕೊಡಮಾಡುವ ದೇಣಿಗೆ ಪ್ರಭುತ್ವಕ್ಕೇ ಸಂದಾಯವಾಗಬೇಕಾಗಿಲ್ಲ. ಯಾವುದೋ ಖಾಸಗಿ ಚಾರಿಟೆಬಲ್ ಟ್ರಸ್ಟಿಗೆ ಸಂದಾಯವಾಗಬಹುದು. ಅಂಥಲ್ಲಿ ಅವು ಈ ದೇಣಿಗೆಯನ್ನು ಉದ್ಯೋಗ ನಿರ್ಮಾಣಕ್ಕಾಗಿಯಾಗಲಿ ಅಥವಾ ಸಾಮಾಜಿಕ ಪ್ರಗತಿಯ ಉದ್ದೇಶಕ್ಕಾಗಲಿ ಬಳಸಬೇಕೆಂದೇನೂ ಇಲ್ಲ. ಅನುತ್ಪಾದಕ ಚಟುವಟಿಕೆಗೆ ಬೇಕಾದರೂ ಬಳಸಬಹುದು. ಅಥವಾ ಫೋರ್ಜರಿ ದೃಢೀಕರಣ ಪತ್ರ ಸೃಷ್ಟಿಸಿ ಕಬಳಿಸಲೂಬಹುದು.

ಒಂದೊಮ್ಮೆ ದೇಣಿಗೆ ಕೊಡಮಾಡುವ ಬಂಡವಾಳಶಾಹಿ ಸಾರ್ವಜನಿಕ ಹಿತಕ್ಕಾಗಿಯೇ ಅದನ್ನು ಬಳಸಬೇಕೆಂಬ ನಿಯಮ ವಿಧಿಸಿದಾಗಲೂ ಫೋರ್ಜರಿ ದೃಢೀಕರಣ ತೋರಿಸಬಹುದು. ಆದರೆ ಪ್ರಭುತ್ವಕ್ಕೆ ಸಂದಾಯವಾಗುವ ದೇಣಿಗೆ ಹೀಗಲ್ಲ. ಅಲ್ಲಿಯೂ ಈ ಎಲ್ಲ ಸಾಧ್ಯತೆಗಳಿರುವುದಾದರೂ ಅದರ ಮೇಲೆ ಸಾರ್ವಜನಿಕರ ಹತೋಟಿ ಇದ್ದೇ ಇರುತ್ತದೆ. ಅಂಥಲ್ಲಿ ಅದು ಒಂದಿಷ್ಟು ಮಟ್ಟಿಗಾದರೂ ಪ್ರಾಮಾಣಿಕ ಕಾರ್ಯಗಳನ್ನು ಮಾಡಲೇಬೇಕಾಗುತ್ತದೆ. ಮೂರನೆಯದಾಗಿ ಇಂಥ ದೇಣಿಗೆ ಸ್ವ ಇಚ್ಛೆಯ 'ನೀತಿ' ಪರತೆ ದೃಷ್ಟಿಯಿಂದ ನಡೆಯುತ್ತದೆಯೇ ಹೊರತು ಕಾನೂನು ಬದ್ಧವಾಗಿ ಅಲ್ಲ. ಅಂಥಲ್ಲಿ ದೇಣಿಗೆ ಕೊಡಲೂಬಹುದು, ಕೊಡದಿರಲೂಬಹುದು.

ಆದರೆ ಪ್ರಭುತ್ವ ಸ್ಥಾಪಿಸುವ ಕ್ರೋಢೀಕೃತ ನಿಧಿ ಕಾನೂನಿನ ಮೂಲಕ ಸ್ಥಾಪಿತವಾಗಬೇಕು. ಆ ಕಾನೂನಿಗೆ ಬೆಂಬಲವಾಗಿ 'ನೀತಿ'ಪರ ದೃಷ್ಟಿ ಇದ್ದೇ ಇರುತ್ತದೆ. ಯಾವುದೇ ಬಂಡವಾಳಶಾಹಿಗಾದರೂ ಸಾಮಾಜಿಕ ಕಳಕಳಿಯಿಂದ ಕೇಳುವ ನಿಧಿಗೆ ದೇಣಿಗೆ ಕೊಡದಿರಲು ಕಷ್ಟವಾಗುತ್ತದೆ. ಏಕೆಂದರೆ ಸಾಮಾಜಿಕ ನ್ಯಾಯದ ಆಶಯವಿಲ್ಲದವರೂ ಕೂಡ ಅಂಥ ಮುಖವಾಡವೊಂದನ್ನು ಧರಿಸಿಕೊಳ್ಳಬೇಕಾಗುತ್ತದೆ.

ಇಷ್ಟಾಗಿಯೂ ಇಂಥ ನಿಧಿ ಸ್ಥಾಪನೆಗೆ ಅವಕಾಶವಿಲ್ಲವೆಂಬ ತಕರಾರು ಬಂದರೆ ಭಾರತ ಅಂಜಬೇಕಾದ್ದಿಲ್ಲ. ಹೇಳಿ ಕೇಳಿ ಭಾರತ ವಿಶ್ವದ ಅತಿಹೆಚ್ಚು ಜನಸಂಖ್ಯೆ ಉಳ್ಳ ಎರಡನೆಯ ರಾಷ್ಟ್ರ. ಅಂಥಲ್ಲಿ ಯಾವ ಬಂಡವಾಳಶಾಹಿಗೂ ವಿಶ್ವದ ಎರಡನೆಯ ಅತಿದೊಡ್ಡ ಮಾರುಕಟ್ಟೆಯನ್ನು ಕೈಬಿಡಲು ಸಾಧ್ಯವಾಗುವುದಿಲ್ಲ. ಭಾರತ ಒಂದೊಮ್ಮೆ ಪಟ್ಟು ಹಿಡಿದು ಕುಳಿತರೆ ಅನಿವಾರ್ಯವಾಗಿ ಇಂಥ ನಿಯಮವೊಂದನ್ನು ಜಾಗತೀಕರಣಕ್ಕೆ ಸೇರ್ಪಡೆಗೊಳಿಸಬೇಕಾಗುತ್ತದೆ. ಪ್ರಾರಂಭದಲ್ಲಿ ಬೆದರಿಸಬಹುದು. ಅಂಥ ಬೆದರಿಕೆಗೆ ಜಗ್ಗದಷ್ಟು ಕೆಚ್ಚು ಭಾರತದ ಪ್ರಭುತ್ವಕ್ಕಿರಬೇಕಾಗುತ್ತದೆ. ಭಾರತವನ್ನು ಬಿಟ್ಟರೆ ಇಂಥ ಶಕ್ತಿಯೊಂದು ವಿಶ್ವದ ಅತಿದೊಡ್ಡ ಮಾರುಕಟ್ಟೆಯನ್ನು ಹೊಂದಿರುವ ಚೈನಾಕ್ಕಿದೆ. ಒಂದುವೇಳೆ ರಾಜತಾಂತ್ರಿಕ ವಿಧಾನಗಳೆಲ್ಲ ಸುಲಲಿತವಾಗಿ ಸಾಗಿ ಈ ವಿಷಯದ ಮಟ್ಟಿಗಾದರೂ ಇವೆರಡೂ ದೇಶಗಳು ಒಮ್ಮತಕ್ಕೆ ಬಂದರೆ ಆಗ ಎಂಥ ಪ್ರಬಲ ವಿದೇಶಿ ಬಂಡವಾಳಶಾಹಿಯಾದರೂ ಸೋಲಬೇಕಾಗುತ್ತದೆ. ಮೊದಲು ನಮ್ಮ ಪ್ರಭುತ್ವ ಓಲೈಸುವ ಬುದ್ಧಿಯನ್ನು ಬಿಡಬೇಕಾದ್ದು ಮುಖ್ಯ.

ಪ್ರಸ್ತುತ ಭಾರತದ ಅರ್ಥ ವ್ಯವಸ್ಥೆ ಮಹಾಯುದ್ಧ ಕಾಲಾನಂತರದ ಶೋಚನೀಯ ಸ್ಥಿತಿಯಷ್ಟು ದುರ್ಬಲವಾಗಿಲ್ಲ. ಅದಾಗುವ ಮೊದಲು ಇಂಥ ಮುನ್ನೆಚ್ಚರಿಕೆಯೊಂದನ್ನು ತೆಗೆದುಕೊಳ್ಳಬೇಕಾದ್ದು ಅಗತ್ಯ.

ಪ್ರಭುತ್ವ ಈ ಕೆಲಸಕ್ಕೆ ಮುಂದಾಗದೆ ಇದ್ದಲ್ಲಿ ಪರ್ಯಾಯ ಮಾರ್ಗವೊಂದನ್ನು ಸಾಮಾನ್ಯ ಜನರಾದ ನಾವು ಹುಡುಕಿಕೊಳ್ಳಬೇಕಾಗುತ್ತದೆ. ಏನು ಮಾಡಬಹುದೆಂದರೆ ಒಂದು ಗ್ರಾಮಮಟ್ಟದಲ್ಲಿ, ಊರಿನ ಮಟ್ಟದಲ್ಲಿ, ಬಡಾವಣೆಯ ಮಟ್ಟದಲ್ಲಿನ ಜನರು ಉದ್ಯೋಗ ಕಳೆದುಕೊಂಡವರಿಗೆ ಹಾಗೂ ನಿರುದ್ಯೋಗಿಗಳಿಗೆ ಉದ್ಯೋಗ ಸೃಷ್ಟಿ ಮಾಡುವ ಪ್ರಯತ್ನಕ್ಕೆ ತೊಡಗಬೇಕು. ಅದಕ್ಕೆ ನಮ್ಮ ಪರಂಪರೆಯಲ್ಲಿ ಬೆಳೆದು ಬಂದ ಸಹಜೀವನ, ಸಹಕಾರವೆಂಬ ಮನೋಭಾವ ನೆರವಾಗುತ್ತವೆ. ನಾವು ಮಾಡಬೇಕಾದ್ದೇನೆಂದರೆ ಉದ್ಯೋಗರಹಿತರಿಗೆ ವಿಶಿಷ್ಟ ಸನ್ನಿವೇಶವನ್ನು ಹೊರತುಪಡಿಸಿ ಉಚಿತ ನೆರವು ನೀಡುವುದು ಬೇಡ. ಬದಲು ಉತ್ಪಾದಕ ಚಟುವಟಿಕೆಗೆ ನೆರವು ನೀಡಿ ನೆರವಿನ ಹಣವನ್ನು ಆತ ಸಬಲನಾದೊಡನೆ ಹಿಂದಕ್ಕೆ ಪಡೆಯಬೇಕು; ನೆರವು ನೀಡುವಾಗ ಪ್ರತಿಯಾಗಿ ಶ್ರಮವನ್ನು ಪಡೆಯಬೇಕು. ಇದರಿಂದ ಉದ್ಯೋಗರಹಿತರಿಗೆ ಆತ್ಮವಿಶ್ವಾಸ ಮೂಡಬಹುದಲ್ಲದೆ ಸ್ವಂತ ಶ್ರಮದಿಂದ ಗಳಿಸಿದ ಆದಾಯದಿಂದಲೇ ಆತ ಬೇಡಿಕೆ ಸೃಷ್ಟಿಸುತ್ತಾನೆ. ಅಂಥಲ್ಲಿ ನೆರವಿನ ಹಣ ಬಂಡವಾಳಶಾಹಿಯಲ್ಲಿ ಕೇಂದ್ರೀಕರಣವಾಗುವುದು ತಪ್ಪಿ ಮತ್ತೆ ಅದು ಸಾಮಾನ್ಯ ಜನರ ನಡುವಿನಲ್ಲಿಯೇ ಚಲಾವಣೆಯಲ್ಲಿರುವಂತಾಗುತ್ತದೆ. ಅದು ಮತ್ತೆ ಉದ್ಯೋಗವನ್ನು ಸೃಷ್ಟಿಸುತ್ತದೆ. ಹೀಗೆ ಈ ಪ್ರಕ್ರಿಯೆಯನ್ನು ಸರಪಳಿ ಕ್ರಮದಲ್ಲಿ ಮುಂದುವರಿಸುತ್ತಾ ಹೋದರೆ ಬೇಡಿಕೆ ಮತ್ತು ಪೂರೈಕೆಗಳ ನಡುವೆ ಸಮನ್ವಯ ಸಾಧಿಸಲು ಸಾಧ್ಯವಿದೆ.

ಈ ತೆರನ ಒಂದು ಕಾರ್ಯಕ್ಕೆ ನಮ್ಮ ಪರಂಪರೆಯಲ್ಲಿ ಬೆಳೆದು ಬಂದ ಇನ್ನೊಂದು ಅಂಶ ತಡೆಯಾಗುತ್ತದೆ ಎನ್ನುವುದನ್ನು ಮರೆಯುವಂತಿಲ್ಲ. ಅದೆಂದರೆ ಶ್ರಮ ಗೌರವ ರಾಹಿತ್ಯ. ವೃತ್ತಿಯಲ್ಲಿ ಮೇಲು-ಕೀಳು ಎಂಬ ತಾರತಮ್ಯ. ಅಂಥಲ್ಲಿ "ಬದುಕಬೇಕಾದರೆ ಯಾವ ಕೆಲಸವನ್ನಾದರೂ ಮಾಡಿ" ಎನ್ನುವುದು ತೀರಾ ಕ್ರೌರ್ಯವಾಗುತ್ತದೆ. ಒಟ್ಟಾರೆ ಸಮಾಜದಲ್ಲಿ ವೃತ್ತಿ ಗೌರವದ ಒಂದು ಸ್ಥಿತಿ ಕಾಣಿಸುವ ತನಕ ಇಂಥ ಸಲಹೆಗಳು ಸೂಕ್ತವಾಗಲಾರವು. ಬದಲಿಗೆ ಒಂದು ಕಡೆಯಿಂದ ಶ್ರಮ ಗೌರವವನ್ನು ಎತ್ತಿಹಿಡಿಯುವ ಪ್ರಯತ್ನ ಮಾಡುತ್ತಲೇ ಇನ್ನೊಂದು ಕಡೆಯಿಂದ ಉದ್ಯೋಗ ರಹಿತ ವ್ಯಕ್ತಿಗೆ ಆತನ ಜ್ಞಾನ, ಕೌಶಲ್ಯ, ಶಿಕ್ಷಣ ಇತ್ಯಾದಿಗಳ ಬಗ್ಗೆ ಆತ ಇಟ್ಟುಕೊಂಡಿರುವ ನಂಬಿಕೆಗೆ ಚ್ಯುತಿ ತಾರದಂಥ ಪರ್ಯಾಯ ಉದ್ಯೋಗವನ್ನು ಸೃಷ್ಟಿಸಬಹುದು. ಗ್ರಾಮ ಮಟ್ಟದಲ್ಲಿ ಕೂಡ ಇದು ಸಾಧ್ಯವಿದೆ. ಸುಶಿಕ್ಷಿತ ನಿರುದ್ಯೋಗಿಗಳನ್ನು ಕೃಷಿ ಉತ್ಪನ್ನಗಳ ವಿಲೇವಾರಿಗೆ ಬಳಸಿಕೊಳ್ಳಬಹುದು. ಮಾರುಕಟ್ಟೆ ಧಾರಣೆಯ ಬಗ್ಗೆ ತಿಳಿವಳಿಕೆ ಕೊಡಲು ಬಳಸಿಕೊಳ್ಳಬಹುದು. ಗ್ರಾಮದ ಏಳಿಗೆಯ ರೂಪುರೇಷೆ ರೂಪಿಸುವುದಕ್ಕೆ ಬಳಸಿಕೊಳ್ಳಬಹುದು. ಹೀಗಾದಲ್ಲಿ ತನ್ನ ಶಿಕ್ಷಣದ ಬಗ್ಗೆ ಆತನಿಗಿರುವ ನಂಬಿಕೆಗೆ ಒಂದಿನಿತೂ ಘಾಸಿಯಾಗದಂತೆ ಉದ್ಯೋಗ ಸೃಷ್ಟಿಸಬಹುದು. ಅಲ್ಲದೆ ಬೌದ್ಧಿಕ ಶ್ರಮಿಕರನ್ನು ದೈಹಿಕ ಶ್ರಮಕ್ಕೆ ಏಕಾಏಕಿ ಇಳಿಸುವುದೂ ಕೂಡ ತರವಲ್ಲ. ಏಕೆಂದರೆ ಅವರು ಅದರ ಬಗ್ಗೆ ಅಜ್ಞರು. ನಿಜವಾಗಿ ಹೇಳಬೇಕೆಂದರೆ ನಮ್ಮ ಕೃಷಿಗೆ ತಗಲುವ ರೋಗಗಳು, ಅದರ ಉತ್ತಮೀಕರಣಗಳ ಬಗ್ಗೆ ನಮ್ಮ ರೈತರಿಗಿರುವ ಜ್ಞಾನವನ್ನು ಕೃಷಿ ವಿಶ್ವವಿದ್ಯಾನಿಲಯಗಳ ಪರಿಣಿತರೂ ಸರಿಗಟ್ಟಲಾರರೆಂದರೆ ಬಹುಶಃ ತಪ್ಪಾಗಲಾರದು. ಏಕೆಂದರೆ ರೈತರದು ಅನುಭವಜನ್ಯ ತಿಳಿವಳಿಕೆ. ಪರಿಣಿತರದು ವ್ಯಾಸಂಗಜನ್ಯ ತಿಳಿವಳಿಕೆ. ಯಾವತ್ತಿಗೂ ವ್ಯಾಸಂಗಜನ್ಯ ತಿಳಿವಳಿಕೆ ಅನುಭವವನ್ನು ಮೀರಿ ನಿಲ್ಲಲಾರದಲ್ಲವೇ? ಹೀಗಿರುತ್ತಾ ಶ್ರಮ ಗೌರವ ಪ್ರಜ್ಞೆ ಮೂಡಿಸುವ ಕೆಲಸ ಮಾಡಬೇಕಿದೆ. ಅದಕ್ಕೆ ಸುಶಿಕ್ಷಿತರಾದ ಹೆಚ್ಚಿನ ಆತ್ಮಸ್ಥೈರ್ಯ ಉಳ್ಳ ಯುವಕ-ಯುವತಿಯರು ತಾವೇ ಮುಂದಾಗಿ ದೈಹಿಕ ಶ್ರಮದ ಒಳನೋಟ ಪಡೆದುಕೊಂಡು ಆ ಕ್ಷೇತ್ರಕ್ಕಿಳಿಯಬೇಕು. ಇಂಥ ಕಾರ್ಯ ಸಂಘಟಿತ ಸುಶಿಕ್ಷಿತ ತರುಣ ಜನಾಂಗದಿಂದ ನಡೆಯುವುದು ಯೋಗ್ಯ. ಏಕೆಂದರೆ ಏಕಾಂಗಿಯಾಗಿ ಒಬ್ಬ ಮುಂದಾದರೆ ಆತ ನಾನಾ ವಿಧವಾದ ಟೀಕೆಗಳನ್ನು, ಅವಹೇಳನಗಳನ್ನು ಎದುರಿಸಿ ಆತ್ಮಸ್ಥೈರ್ಯ ಕಳೆದುಕೊಳ್ಳುವುದಕ್ಕೆ ಅವಕಾಶ ಹೆಚ್ಚು. ಸಂಘಟನೆಯ ಮೂಲಕ ಈ ಕೆಲಸಕ್ಕಿಳಿದರೆ ಅದು ಜನಸಮುದಾಯದಲ್ಲಿ ಒಂದು ರೀತಿಯ ಮೆಚ್ಚುಗೆಗೆ ಪಾತ್ರವಾಗಲು ಅವಕಾಶವಿದೆ. ಅಲ್ಲದೆ ಬರಬಹುದಾದ ಅವಹೇಳನಕಾರಿ ಮಾತುಗಳೂ ಕೂಡ ಹಂಚಿಹೋಗುತ್ತವೆಯಾದ್ದರಿಂದ ಅಲ್ಲೊಂದು ಸಾಮೂಹಿಕ ಸ್ಥೈರ್ಯ ಇರುತ್ತದೆ. ಇಲ್ಲಿರುವ ಇನ್ನೊಂದು ಸಾಧ್ಯತೆಯೆಂದರೆ ಸಮಾಜದಲ್ಲಿ ಸಾಕಷ್ಟು ಸ್ಥಾನಮಾನ ಉಳ್ಳವರು ತಾವೇ ಮುಂದಾಗಿ ದೈಹಿಕ ಶ್ರಮಕ್ಕಿಳಿದು ಅದರಿಂದ ಯಾವ ಗೌರವವೂ ಕಳೆದು ಹೋಗುವುದಿಲ್ಲವೆಂದು ತೋರಿಸಿಕೊಡುವ ಮೂಲಕ ಶ್ರಮ ಗೌರವವನ್ನು ಎತ್ತಿ ಹಿಡಿಯುವುದು. ಆದರೆ ಈ ಪ್ರಯತ್ನ ತ್ಯಾಗವನ್ನು ಬಯಸುತ್ತದೆ. ಅಷ್ಟೊಂದು ತ್ಯಾಗಕ್ಕೆ ಸಿದ್ಧರಾಗುವಂತೆ ಸೂಚಿಸುವುದು ಸರಿಯೆನಿಸದೇನೋ. ಆದರೂ ಇಂಥ ಪ್ರಯತ್ನಗಳು ನಡೆದಲ್ಲಿ ಜಡ್ಡುಕಟ್ಟಿದ ನಮ್ಮ ಸಮಾಜಕ್ಕೆ ಒಂದಷ್ಟು ಚಲನಶೀಲತೆ ದೊರೆಯಬಹುದು.

ಈ ರೀತಿಯಾಗಿ ನಾವು ಉದ್ಯೋಗ ಮತ್ತು ಆದಾಯ, ಬೇಡಿಕೆ ಮತ್ತು ಪೂರೈಕೆಗಳ ನಡುವೆ ಸಮತೋಲನ ಸಾಧಿಸಲು ಸಾಧ್ಯವಿದೆ. ಆದರೆ ಕೇನ್ಸ್ ಹೇಳುವ ಪ್ರಕಾರ ಪೂರ್ಣೋದ್ಯೋಗ ಸಮತೋಲನ ಸಾಧ್ಯವಾಗದು. ಅರ್ಥ ವ್ಯವಸ್ಥೆಯ ಸಮತೋಲನವು ಯಾವಾಗಲೂ ಪೂರ್ಣೋದ್ಯೋಗಕ್ಕಿಂತ ಕೆಳಮಟ್ಟದಲ್ಲಿರುತ್ತದೆ. ಅಂದರೆ ಬೇಡಿಕೆ ಯಾವತ್ತಿಗೂ ಪೂರೈಕೆಗಿಂತ ಕೆಳಮಟ್ಟದಲ್ಲಿ ಇರುತ್ತದೆ. ಈ ಬಗ್ಗೆ ಕೇನ್ಸ್ ಏನೇ ಹೇಳಿರಲಿ, ಅವರು ಸಮಗ್ರ ದೇಶದ ಅರ್ಥ ವ್ಯವಸ್ಥೆಯನ್ನು ಗುರಿಯಲ್ಲಿಟ್ಟುಕೊಂಡು ಹೇಳಿದ್ದೇ ವಿನಃ ಗ್ರಾಮ ಮಟ್ಟದಲ್ಲಿ ಸ್ವಯಂ ಜನರೇ ಸೃಷ್ಟಿಸಬಹುದಾದ ಉದ್ಯೋಗವನ್ನು ಗುರಿ ಇಟ್ಟು ಹೇಳಿದ್ದಲ್ಲ. ಅಂಥಲ್ಲಿ ಗ್ರಾಮ ಮಟ್ಟದಲ್ಲಿ ನಮ್ಮ ಪ್ರಯತ್ನ ಸಾಗಿದರೆ ಪೂರ್ಣೋದ್ಯೋಗ ಸ್ಥಿತಿಯನ್ನು ಸಾಧಿಸಲೂಬಹುದು. ಅಷ್ಟಾಗಿಯೂ ಪೂರ್ಣೋದ್ಯೋಗ ಸಾಧ್ಯವಾಗಲಿಲ್ಲವಾದರೆ ಅದನ್ನು ಬಹುದೊಡ್ಡ ತಲೆಹೊರೆಯೆಂದೇನೂ ಭಾವಿಸಬೇಕಾಗಿಲ್ಲ. ಏಕೆಂದರೆ ನಮ್ಮ ಸಾಂಸ್ಕೃತಿಕ ಶಕ್ತಿ ಆ ಕೊರತೆಯನ್ನು ಭರಿಸಬಲ್ಲುದು.

ಮಾಹಿತಿ ನೆರವು :A History of Economic Thought - V. Lokanathan.

ಅರವಿಂದ ಚೊಕ್ಕಾಡಿ
ಕಮಲದೀಪ ಮನೆ, ತೆಳ್ಳಾರು ಕ್ರಾಸ್, ಕಾರ್ಕಳ-೫೭೪ ೧೦೪, ಉಡುಪಿ ಜಿಲ್ಲೆ

### ಭಕ್ಷಣೆ

ಮನುಷ್ಯ
ಸತ್ತ ನಾನಾ
ಪ್ರಾಣಿಗಳನ್ನು
ತಿನ್ನುತ್ತಾನೆ;
ಜೀವಂತವಾಗಿ ತಿನ್ನುವುದು
ಮನುಷ್ಯನನ್ನು ಮಾತ್ರ !

■ ಸಿ. ಪಿ. ಕೆ.

# ವೈದ್ಯರಿದ್ದಾರೆ, ಎಚ್ಚರಿಕೆ !

**ಸ್ಟೀಫನ್ ಲೀಕಾಕ್**

ಸುಮಾರು ಐವತ್ತು ವರ್ಷಗಳ ಹಿಂದೆ, ಯಾರಿಗಾದರೂ ಕಾಯಿಲೆ ಬಂದರೆ ವೈದ್ಯರ ಹತ್ತಿರ ಹೋಗುತ್ತಿದ್ದರು. ವೈದ್ಯರು ರೋಗಿಯನ್ನು ನೋಡಿ, ಪರೀಕ್ಷೆಮಾಡಿ, ಏನೋ ಕಾಯಿಲೆ ಅಂತ ಹೇಳಿ, ಔಷಧ ಕೊಟ್ಟು, ವಿಶ್ರಾಂತಿ ತೆಗೆದುಕೊಳ್ಳಿ ಅಂತ ಹೇಳುತ್ತಾ ಇದ್ದರು. ರೋಗಿ, ಔಷಧ ಸೇವಿಸಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದ. ಚಿಕಿತ್ಸೆ ಪಡೆದ ತೃಪ್ತಿ ಇರುತ್ತಿತ್ತು.

ಈಗಿನ ಕಾಲದಲ್ಲಿ ಹಾಗಲ್ಲ. ಆ ಒಬೀರಾಯನ ಕಾಲದ ಪದ್ಧತಿಯನ್ನು ಬಿಟ್ಟು ನಾವು ಈಗ ಈ ವೈದ್ಯಕೀಯ ಕ್ಷೇತ್ರದಲ್ಲಿ ಎಷ್ಟೊಂದು ಮುಂದುವರೆದಿದ್ದೇವೆಂದರೆ, ಸುಮ್ಮನೆ ಹಾಗೇ ನೆನಸ್ಕೊಂಡರೇನೆ ಎಷ್ಟೊಂದು 'ಸಂತೋಷ' ಅಲ್ಲವೇ ?

**ಇದನ್ನು ಚಿತ್ರಿಸಿಕೊಳ್ಳಿ**

ರೋಗಿಯನ್ನು ಮೊದಲು ಸಲಹಾ ವೈದ್ಯರು, (ಕನ್ಸಲ್ಟಿಂಗ್ ಫಿಜಿಷಿಯನ್) ನೋಡುತ್ತಾರೆ. ಅವರು ಪರೀಕ್ಷೆ ಮಾಡಿ ಏನು ಕಾಯಿಲೆ ಎಂದು ಕಂಡುಕೊಳ್ಳುತ್ತಾರೆ. ನಂತರ ರೋಗಿಯನ್ನು ಹೃದಯದ ತಪಾಸಣೆಗಾಗಿ 'ಹೃದಯ ತಜ್ಞ'ರು (ಹಾರ್ಟ್ ಸ್ಪೆಷಲಿಸ್ಟ್), ನರಗಳ ಪರೀಕ್ಷೆಗಾಗಿ 'ನರತಜ್ಞ'ರು (ನರ್ವ್ ಸ್ಪೆಷಲಿಸ್ಟ್) ಬಳಿಗೆ ಕಳಿಸುತ್ತಾರೆ. ಶಸ್ತ್ರಚಿಕಿತ್ಸೆ ಆಗಬೇಕಿದ್ದರೆ ಮೊದಲು ಅರಿವಳಿಕೆ ತಜ್ಞರು (ಅನಸ್ತೆಟಿಸ್ಟ್) ರೋಗಿಗೆ ಪ್ರಜ್ಞೆ ತಪ್ಪಿಸುತ್ತಾರೆ. ಶಸ್ತ್ರಚಿಕಿತ್ಸಾ ತಜ್ಞರು (ಆಪರೇಟಿಂಗ್ ಸರ್ಜನ್) ಶಸ್ತ್ರಕ್ರಿಯೆ ನಡೆಸುತ್ತಾರೆ. ಅದಾದ ಮೇಲೆ ಪ್ರಜ್ಞಾತಜ್ಞರು (ರಿಸರಕ್ಷನಿಸ್ಟ್) ಪ್ರಜ್ಞೆ ಬರಿಸುತ್ತಾರೆ. ಎಲ್ಲಾ ಎಷ್ಟೊಂದು ಅಚ್ಚುಕಟ್ಟಾಗಿದೆ! ಎಷ್ಟೊಂದು ಸೊಗಸಾಗಿದೆ!

ಒಂದು ವೇಳೆ, ವೈದ್ಯರಲ್ಲದೆ ಇತರ ಕಸುಬಿನವರೂ ಇದೇ ಪದ್ಧತಿಯನ್ನು ಅನುಸರಿಸಿದರೆ ಹೇಗಿರುತ್ತದೆ? ದೊಡ್ಡ ದೊಡ್ಡ ಕಸುಬುಗಳನ್ನು ಅವಲಂಬಿಸಿರುವ ಹಾಗೂ ಉಪಕಸುಬಿನ ಜನರೂ ಹೀಗೇ ಮಾಡಲು ಶುರು ಮಾಡಿಬಿಟ್ಟರೆ ಹೇಗಿರುತ್ತದೆ ?

ಈಗ ಹೀಗೆ ಚಿತ್ರಿಸಿಕೊಳ್ಳಿ :

ಒಬ್ಬ ರೋಗಿ ಕ್ಯಾಬಿನ್ ಒಳಗೆ ಬಂದು ಕುಳಿತುಕೊಳ್ಳುತ್ತಾನೆ.

''ಡಾ|| ರೋಮೇಶ್ ನಿಮ್ಮನ್ನು ಈಗ ನೋಡುತ್ತಾರೆ. ದಯಮಾಡಿ ಒಳಗೆ ಹೋಗಿ'', ಎನ್ನುತ್ತಾಳೆ ಸ್ವಾಗತಕಾರಿಣಿ.

ರೋಗಿ, ಡಾ|| ರೋಮೇಶ್‌ರ ಛೇಂಬರ್‌ಗೆ ಕಾಲಿಡುತ್ತಾನೆ.

ಡಾ|| ರೋಮೇಶ್ ರೋಮನಾಳ ಕ್ಷೇತ್ರದಲ್ಲಿ ಬಹುದೊಡ್ಡ ಹೆಸರು.

ಅವರ ಹೆಸರಿನ ಮುಂದೆ, Cap... D.. (ಪ್ರತಿಷ್ಠಿತ ಹಾರ್ವರ್ಡ್ ವಿಶ್ವವಿದ್ಯಾಲಯದಿಂದ ಪಡೆದ 'ರೋಮಪಂಡಿತ' ಪದವಿ), Doc chev (ಫ್ರಾನ್ಸಿನ ವೈದ್ಯ ಮಹಾವಿದ್ಯಾಲಯದಿಂದ ಗಿಟ್ಟಿಸಿಕೊಂಡ 'ರೋಮ್ ಗ್ರೇಸರ್' ಪದವಿ), ಜೊತೆಗೆ, ಹತ್ತಾರು ಅಂತಾರಾಷ್ಟ್ರೀಯ ರೋಮ ವಿದ್ಯಾ ಪರಿಷತ್ತುಗಳ ಗೌರವ ಸದಸ್ಯತ್ವ.

ರೋಗಿ ಒಳಗೆ ಕಾಲಿಡುತ್ತಿದ್ದಂತೆಯೇ, ಡಾ|| ರೋಮೇಶ್ ತಮ್ಮ ಬ್ಲೇಡಿನಂಥ ಹರಿತ ದೃಷ್ಟಿಯನ್ನು ರೋಗಿಯ ಮುಖದತ್ತ ಹರಿಸುತ್ತಾರೆ. ಆ ನುರಿತ-ಹರಿತ ಕಣ್ಣುಗಳಿಗೆ ರೋಗಿಯ ಸಮಸ್ಯೆ ಏನೆಂದು ತಕ್ಷಣವೇ ಅರ್ಥವಾಗಿಬಿಡುತ್ತದೆ. ಒರಟು ಮುಖದಲ್ಲಿ ಕಂಡೂ ಕಾಣದಂತೆ ಆಗತಾನೆ ಚಿಗುರುತ್ತಿದ್ದ ಗಡ್ಡ ಅವನಿಗಂಟಿದ್ದ ರೋಗದ ಚರಿತ್ರೆಯನ್ನೇ ಬಿಚ್ಚಿಡುವಂತಿರುತ್ತದೆ. ಆದರೂ, ಡಾ|| ರೋಮೇಶ್, ರೋಗಿಯ ವೈಯಕ್ತಿಕ ವಿವರಗಳು, ತಂದೆ-ತಾಯಿಯ ಹೆಸರು, ಕುಲ, ಗೋತ್ರ, ಕಸುಬು, ಚಟ-ಅಭ್ಯಾಸಗಳು, ಸ್ವಭಾವ ಚುರುಕೋ ಜಡವೋ, ಇತ್ಯಾದಿ, ಇತ್ಯಾದಿಯ ಬಗ್ಗೆ ಪ್ರಶ್ನೆಗಳನ್ನು ಕೇಳಿ ಗುರುತು ಮಾಡಿಕೊಳ್ಳುತ್ತಾರೆ. ಭೂತ ಗಾಜಿನ ಸಹಾಯದಿಂದ ರೋಗಿಯ ಮುಖವನ್ನು ವಿವರವಾಗಿ ಪರೀಕ್ಷಿಸುತ್ತಾರೆ. ಒಂದು ಹಂತ ಮುಗಿದಂತೆ ಕೈಕೊಡವಿಕೊಂಡು ''ಸಾಧ್ಯವೇ ಇಲ್ಲ'' ಎಂಬಂತೆ ಡಾ|| ರೋಮೇಶ್ ತಲೆ ಕೊಡವುತ್ತಾರೆ. ರೋಗಿಗೆ ಆತಂಕ, ಗಾಬರಿ, ಕಳವಳ.

'ನೋಡಿ, ನನ್ನ ಸ್ಪಷ್ಟ ಅಭಿಪ್ರಾಯವೇನೆಂದರೆ, ನಿಮಗೆ ತೊಂದರೆ ಇರುವುದು ನೂರಕ್ಕೆ ನೂರು ಸತ್ಯ. ಏನೂ ಮಾಡುವ ಹಾಗಿಲ್ಲ. ನೀವು ಕ್ಷೌರ ಮಾಡಿಸಿಕೊಳ್ಳಲೇಬೇಕು' ಎಂದು ತೀರ್ಪು ನೀಡುತ್ತಾರೆ.

ಈ ಅನಿರೀಕ್ಷಿತ ಘೋಷಣೆಯಿಂದ ರೋಗಿಯ ಮುಖ ಸಪ್ಪಗಾಗುತ್ತದೆ.

ಕಾಯಿಲೆ ಏನೆಂದು ಸ್ಪಷ್ಟವಾಗಿ, ಖಚಿತವಾಗಿ ರೋಗಿಗೆ ತಿಳಿಸುವುದು ತಜ್ಞ ವೈದ್ಯರ ಕರ್ತವ್ಯ ಎಂಬುದನ್ನು ರೋಗಿಯೂ ಬಲ್ಲ. ಕ್ಯಾಬಿನ್‌ನ ಒಳಗೆ ಬರುವ ಮೊದಲೇ ತನ್ನ ತೊಂದರೆ ಏನೆಂದು ಸ್ವತಃ ರೋಗಿಯ ಅಂತರಾಳಕ್ಕೇ ವೇದ್ಯವಾಗಿರುತ್ತದೆ. ಹಾಗಿದ್ದೂ ಆಸೆಯ ಮೇಲೆ ಆಸೆಯನ್ನಿಟ್ಟುಕೊಂಡು ತಜ್ಞರ ಬಳಿಗೆ ಬರಲೇಬೇಕಲ್ಲ! 'ಇಲ್ಲ ನಿನಗೆ ಯಾವ ತೊಂದರೆಯೂ ಇಲ್ಲ' ಎಂದಾರಲ್ಲವೆ? ಇದು ಈಗಲೇ ಬೇಡ, ಇನ್ನೂ ಸ್ವಲ್ಪ ಕಾದು ನೋಡೋಣ, ಎಂದರೆ? ಸ್ವಲ್ಪ ದಿನ ಕಳೆದರೆ, ಅದನ್ನು ಒಪ್ಪಿಕೊಳ್ಳುವ ಸ್ಥೈರ್ಯ ಬರಬಹುದೋ ಏನೋ... ಹೀಗೆಲ್ಲಾ ಅವನು ತನಗೆ ತಾನೇ ಸಮಾಧಾನ ಹೇಳಿಕೊಳ್ಳುವುದು ಸ್ವಾಭಾವಿಕ. ಕ್ರೂರ, ಅನಿವಾರ್ಯ ಕಟುಸತ್ಯವನ್ನು ಎದುರಿಸಬೇಕಾದಾಗ ಎಲ್ಲರೂ ಮಾಡುವುದು ಹೀಗೇ ಅಲ್ಲವೇ ?

ಅದಿರಲಿ, 'ಆಫೀಸಿನಲ್ಲಿ ನನಗೆ ಒಂದು ಹೊರೆ ಕೆಲಸ ಬಿದ್ದಿದೆ.. ಅ್ಞ... ಆಪರೇಷನ್‌ನನ್ನು ಒಂದೆರಡು ದಿನ ಮುಂದಕ್ಕೆ ಹಾಕಲು ಸಾಧ್ಯವಿಲ್ಲವೇ ?' ರೋಗಿ ಅಳುಕುತ್ತಲೇ ಕೇಳುತ್ತಾನೆ.

'ನೋಡಿ ಇವರೇ, ನಿಮಗೆ ಈ ಕೂಡಲೇ ಕ್ಷೌರದ ಅಗತ್ಯವಿದೆ ಎಂದು ನಾನಂತೂ ಹೇಳಿದ್ದೇನೆ. ಇನ್ನು ನಿಮ್ಮಿಷ್ಟ. ಛಾಯ್ಸ್ ಈಸ್ ಯುವರ್ಸ್. ನಿಮಗೆ ಬೇಕಾದರೆ ಮುಂದಕ್ಕೆ ಹಾಕಬಹುದು. ಆದರೆ ಆಮೇಲೆ ಏನಾದರೂ ಕಾಂಪ್ಲಿಕೇಶನ್ ಅರೈಸ್ ಆದ್ರೆ ನಾನು ಜವಾಬ್ದಾರನಲ್ಲ!' ತಜ್ಞರ ಸ್ಪಷ್ಟ, ಖಚಿತ ಎಚ್ಚರಿಕೆಯ ಮಾತಿಗೆ ರೋಗಿ ನಿಟ್ಟುಸಿರು ಬಿಟ್ಟು, ರೋಗಿ,

'ಆಗಲಿ, ಹಾಗೇ ಆಗಲಿ, ಇವತ್ತೇ ಆಗಬೇಕೆಂದಿದ್ದರೆ ಇವತ್ತೇ ಆಗಲಿ. ಎಷ್ಟು ಬೇಗ ಆದರೆ ಅಷ್ಟು ನಿರಾಳ. ಮಾಡಿ ಕ್ಷೌರ ಶುರು ಮಾಡಿ' ಎನ್ನುತ್ತಾನೆ.

ಆ ಮಹಾನ್ ತಜ್ಞರು ರೋಗಿಯ ಕಡೆ ನೋಡಿ ನಸುನಕ್ಕು,

'ಇಲ್ಲ ಇಲ್ಲ, ನಾನು ಕ್ಷೌರ ಮಾಡಲ್ಲ, ನಾನು ಸಲಹಾ ರೋಮ ತಜ್ಞ ಮಾತ್ರ. ರೋಗವನ್ನು ಪತ್ತೆ ಮಾಡಿ, ತಜ್ಞರ ಕೈಗೆ ನಿಮ್ಮನ್ನು ಒಪ್ಪಿಸುವುದಷ್ಟೆ ನನ್ನ ಕೆಲಸ' ಎಂದು ಕರೆಗಂಟೆ ಒತ್ತುತ್ತಾರೆ.

ಆಗ ಮಂದಸ್ಮಿತಳಾದ ಕಾರ್ಯದರ್ಶಿನಿಯ ಪ್ರವೇಶ.

''ಮಿಸ್ ಸ್ಮಿತಾ, ಈ ಮಹನೀಯರಿಗೆ, ಷೇವಿಂಗ್ ರೂಂಗೆ ಹೋಗೋಕೆ ಒಂದು ಕಾರ್ಡ್ ತುಂಬಿಸಿ ಕೊಡಿ. ಡಾ|| ಕ್ಲಿಪರ್ ಓ.ಟಿ.ಲಿದ್ರೆ ಇನ್ನೊಂದು ಷೇವಿಂಗ್ ಕೇಸ್ ಇದೆ ಅಂತ ತಿಳಿಸಿಬಿಡಿ. ಹ್ಞಾ... ಆಮೇಲೆ ಡಾ|| ಸೀಜರ್ ಇವರ ಕುತ್ತಿಗೆ ಮೇಲಿನ ಕೂದಲನ್ನ ರಿಮೂವ್ ಮಾಡ್ತಾರೆ. ಮೊದಲು ಇವರಿಗೆ ಫುಲ್ ಸೋಪಿಂಗ್ ಮಾಡ್ಸಿ ಆಮೇಲೆ ಡಾ|| ಕ್ಲಿಪರ್ ಅವರ ಬಳಿಗೆ ಕಳಿಸಿ... ತಿಳೀತೆ ?''

ಮಿಸ್. ಸ್ಮಿತಾ ಡಾ|| ರೋಮೇಶ್‌ರ ತೀರಾ ಸನಿಹಕ್ಕೆ ಸರಿದು ರೋಗಿ ಕೇಳಿಸಿಕೊಳ್ಳಬಾರದ್ದೇನನ್ನೋ ಮೆಲುದನಿಯಲ್ಲಿ ಉಸುರುತ್ತಾಳೆ.

'ಓ... ಹೀಗಾಗಬಾರದಿತ್ತು.... ಛೇ ಛೇ'... ಎಂದು ಡಾ|| ರೋಮೇಶ್ ರೋಗಿಯ ಕಡೆ ತಿರುಗಿ, 'ಏನ್ಮಾಡೋದೂ... ಇನ್ನೊಂದು ಅವರ್ ತನಕ ನಮ್ಮ ಸೋಪಿಸ್ಟ್ ಫುಲ್ ಬಿಸಿ ಅಂತಾರಲ್ಲ, ಇವರೇ. ನಮ್ಮ ಇಬ್ಬರು ಸ್ಪೆಷಲಿಸ್ಟ್ ಇಬ್ಬರೂ ತುಂಬಾ ತುಂಬಾ ಬಿಸಿಯಾಗಿದ್ದಾರಲ್ಲ!' ಎಂದು ಪೆನ್ನನ್ನು ಕೆಳತುಟಿಯ ಕೆಳಗೆ ಒತ್ತಿಕೊಳ್ಳೋದೇ !

'ಅದೂ... ಏನಾಗಿದೇ ಅಂದ್ರೆ, ಬೆಳಗ್ಗೆ ತಾನೇ ಒಂದು ಎಮರ್ಜೆನ್ಸಿ ಕೇಸ್ ಬಂದ್ಬಿಟ್ಟಿದೆ. ಕಂಪ್ಲೀಟ್ ರಿಮೂವಲ್ ಆಫ್ ಎ ಫುಲ್ ಬಿಯರ್ಡ್ ! ಇರಲಿ. ನಥಿಂಗ್ ಟು ವರಿ. ಡಾ|| ಕ್ಲಿಪರ್ ಏನಾದ್ರೂ ಒಂದು ಅರೇಂಜ್‌ಮೆಂಟ್ ಮಾಡೇ ಮಾಡ್ತಾರೆ' ಎಂದು ತಾವೇ ಸಮಾಧಾನ ಹೇಳಿಕೊಳ್ಳುತ್ತಾ ರೋಗಿಯ ಕಡೆ ತಿರುಗಿ,

''ಈಗಾ...'' ಎಂದು ತಮ್ಮ ಮುಂದಿದ್ದ ಕಾಗದಗಳ ಮೇಲೆ ಕಣ್ಣಾಡಿಸುತ್ತಾರೆ. ನಂತರ ಸಂಭಾಷಣೆ ಹೀಗೆ ಮುಂದುವರೆಯುತ್ತದೆ :

**ಡಾ||:** 'ಕಿವಿ ಸುತ್ತಾ ಇರೋ ಕೂದಲನ್ನು ತೆಗೆಸಬೇಕಾದರೆ, ನಾವು ಬೇರೆ ತಜ್ಞರನ್ನೇ ಕರೆಸಬೇಕಾಗುತ್ತೆ. ಏನೂ ಭಯ ಬೇಡ. ನಿಮಗೆ ಯಾರಲ್ಲಿ ಕಾನ್ಫಿಡೆನ್ಸ್ ಇದೆಯೋ ಅವರನ್ನೇ ಕರೆಸೋಣ. ನಿಮ್ಮ ಮನಸ್ಸಿನಲ್ಲಿ ಯಾರಾದ್ರೂ ಇದಾರಾ ?'

**ರೋ :** 'ಇಲ್ವಲ್ಲಾ!... ಯಾಕೆ ರೋಮ್... ಅದೇ ಡಾ|| ರೋಮೇಶ್ ? ಅದೇ ಆ ... ಅವರ ಹೆಸರೇನೂ ಅಂದ್ರಿ ? ... ಅವರೇ ಇದನ್ನು ಮಾಡೋಕಾಗಲ್ವ ?'

**ಡಾ||:** 'ನೋ ನೋ ನೋ... ಆಗಲ್ಲ ಅಂತಲ್ಲ... ಆಗುತ್ತೆ. ಆದರೆ ಅದರಲ್ಲಿ ಒಂದು ರಿಸ್ಕ್ ಫ್ಯಾಕ್ಟರ್ ಇದೆ. ಐ ಯಾಮ್ ದ ಲಾಸ್ಟ್ ಮ್ಯಾನ್ ಟು ಅಡ್ವೈಸ್ ದಟ್... ಯಾಕೇಂದ್ರೆ, ಕಿವಿ ಮೇಲೆ ಮತ್ತು ಸುತ್ತಾ ಇರೋ ಕೂದಲನ್ನ ತೆಗೆಯೋದು ತುಂಬಾ ಸೂಕ್ಷ್ಮದ ಕೆಲಸ. ಅದನ್ನು ವಿಶೇಷ ತಜ್ಞರ ಕೈಲಿ ಮಾಡ್ಸೋದೇ ಒಳ್ಳೇದು. ಹಿಂದೆಲ್ಲಾ... ನಾನೇ ಹೇಳೋದು, ಈ ಕೆಲಸದಲ್ಲಿ ಆಗಬಾರದಂಥ ಮಿಸ್ಟೇಕ್ಸ್ ಆಗಿಬಿಟ್ಟಿವೆ. ಸರಿಯಾದ ಟೆಕ್ನಿಕ್ ಇಲ್ದೇ ಆದಂಥ ಅನಾಹುತಗಳು, ಅಂದ್ರೆ, ಕಿವೀನೇ ಕಟ್ಟಾಗೋದೂ... ಯು ನೋ ವಾಟ್ ಐ ಮೀನ್ ?'

**ರೋ :** 'ಬೇಡ ಬೇಡ ವಿಶೇಷ ತಜ್ಞರನ್ನೇ ಕರೆಸಿ'.

**ಡಾ||:** 'ಗುಡ್... ಈಗ, ಶಾಂಪೂ ವಿಷಯಕ್ಕೆ ಬರೋಣ... ನನಗನ್ನಿಸುತ್ತೆ, ಮೇಜರ್ ಆಪರೇಷನ್ ಮೊದಲು ಆಗಿಬಿಡ್ಲಿ. ಆಮೇಲೆ ನಿಮ್ಮ ಕಂಡೀಷನ್ ನೋಡ್ಕೊಂಡು ತಜ್ಞರ ಒಪೀನಿಯನ್ ತಗೊಳ್ಳೋಣ. ನಾ ಹೇಳೋದು, ಈಗ ತಕ್ಷಣ ಶಾಂಪೂ ಬಳಸಿದ್ರೆ ತಡಕೊಳ್ಳೋ ಶಕ್ತಿ ನಿಮಗಿದೆ ಅಂತ ನನಗೇನೋ ಅನ್ನಿಸುತ್ತೆ. ಬಟ್ ಐ ಡೋಂಟ್ ವಾಂಟು ಟೇಕ್ ರಿಸ್ಕ್... ಹಾರ್ಟ್ ಚೆಕಪ್ ಮಾಡಸ್ದೇನೇ ನಾನು ಶಾಂಪೂ ಅಡ್ವೈಸ್ ಮಾಡೋಲ್ಲ, ಯಾಕೇಂದ್ರೆ, ಎಷ್ಟೋ ಸಲ ಪ್ರಿಮೇಚೂರ್ ಶಾಂಪೂ ಮಾಡಿದಾಗ, ಭಯಂಕರ ಸೈನಸ್ ತೊಂದ್ರೆ ಡೆವಲಪ್ ಆಗಿಬಿಡಬೋದು. ಸೋ, ಅವಸರ ಪಡೋದು ಬೇಡ. ಆಪರೇಶನ್ ಆದಮೇಲೆ, ನಿಮ್ಮ ಕಂಡೀಷನ್ ನೋಡಿಕೊಂಡು ಡಿಸೈಡ್ ಮಾಡೋಣ, ರೈಟ್ ?'

**ರೋ :** 'ಹಾಗೇ ಆಗಲಿ'.

ಡಾ|| ರೋಮೇಶ್, ನಗುಮುಖ ಮಾಡಿಕೊಂಡು,

'ಈಗ, ವಾಟ್ ಐ ಸಜೆಸ್ಟ್ ಈಸ್, ಐ ಮೀನ್... ಇದೆಲ್ಲಾ ಆದಮೇಲೆ ಷೂ ಪಾಲಿಶ್ ಬೇಕೋ ಹೇಗೆ ?'

**ರೋ :** 'ಓಹೋ, ಅವಶ್ಯವಾಗಿ'.

**ಡಾ||:** 'ವೆರಿಗುಡ್... ಸೋ, ಷೂ ಪಾಲಿಷ್ ಬೇಕು ಅಂತ ಆಯ್ತು. ಅಂದಹಾಗೆ, ಬ್ರಶ್ ಅಪ್... ಹ್ಯಾಟನ್ನೂ ಸೇರ್ಸಿ... ಇಲ್ಲೇ ತಾನೇ ?' ರೋಗಿ ತಲೆ ತೂಗಿಸುತ್ತಾನೆ, ಬಸವನಂತೆ.

**ಡಾ||:** 'ಎಕ್ಸಲೆಂಟ್... ಅಂ... ಮಿಸ್ ಸ್ಮಿತಾ, ಟೇಕ್ ದಿಸ್ ಜಂಟ್ಲ್‌ಮನ್ ಟು ಸೋಪಿಂಗ್ ರೂಂ... ಕರ್ಕೊಂಡು ಹೋಗಿ... ಹುಷಾರು...ಮೆಲ್ಲಗೆ'.

**ರೋಗಿ,** ಸ್ವಲ್ಪ ಹ್ಞಾಂ... ಹ್ಞೂಂ... ಅಂತ ಒದ್ದಾಡಿಕೊಳ್ಳುತ್ತಾ,

'ಡಾಕ್ಟರ್, ಫೀ ಎಷ್ಟಾಗುತ್ತೆ ಅಂತ ಹೇಳಲಿಲ್ಲ?' ಎಂದು ಕೇಳುತ್ತಾನೆ.

ಡಾ|| ರೋಮೇಶ್ ತುಂಬಾ ಘನ-ಗಾಂಭೀರ್ಯದಿಂದ ತಲೆ ಕೊಡವುತ್ತಾ...

'ನೋ, ನೋ, ನೋ... ದಯಮಾಡಿ ಆ ಬಗ್ಗೆ ಚಿಂತೆ ಬೇಡ... ಆ ಸಂದರ್ಭ ಬರಲಿ ಆಗ ಆ ಕಡೆ ಗಮನ ಕೊಡೋಣ' ಎಂದು ರೋಗಿಯ ಪ್ರಶ್ನೆಯನ್ನು ಪಕ್ಕಕ್ಕೆ ತಳ್ಳಿಬಿಡುತ್ತಾರೆ.

ರೋಗಿ ಆ ಅತ್ಯುತ್ಕೃಷ್ಟ ಸೇವೆಯ ಅಂದರೆ, ಸೋಪಿಂಗ್‌ನಿಂದ ಹಿಡಿದು ಪೌಡರ್ ಸ್ಪರ್ಶದವರೆಗಿನ ಎಲ್ಲಾ ಹಂತಗಳನ್ನೂ ದಾಟಿ 'ಸದ್ಯ ಮುಗೀತಲ್ಲಾ!' ಎಂಬ ಸಮಾಧಾನದ ನಿಟ್ಟುಸಿರುಬಿಡುತ್ತಾ, ಷೂ ಪಾಲಿಶ್ ಮಾಡುವ ಸ್ಪೆಶಲ್ ರೂಮಿಗೆ ಆಗಮಿಸುತ್ತಾನೆ.

ನೋಡಿದರೆ, ಅದೇ ಕಪ್ಪು ಮೋರೆಯ ಷೂ ಪಾಲಿಶ್ ಹುಡುಗ ಪಾಲಿಶ್ ಮಾಡಲು ಮಂಡಿಯೂರಿ ರೆಡಿ.

'ಸದ್ಯ ! ಇದೊಂದಾದರೂ ಬದಲಾಗದೆ ಉಳಿದಿದೆಯಲ್ಲಾ', ಎಂದು ರೋಗಿಗೆ ಸಂತೋಷ.

'ಯಾವ ಷೂ ?' ಹುಡುಗನ ಪ್ರಶ್ನೆ.

'ಅಂದ್ರೆ ?... ಓ... ಸರಿ... ಯಾವುದಾದ್ರೆ ಏನಂತೆ ?... ಇಗೋ ಈ ಬಲಗಾಲಿಂದೇ ಮೊದಲು ಮಾಡು' ರೋಗಿಯ ಉತ್ತರ.

ಕಪ್ಪು ಹುಡುಗ ಮೇಲೆದ್ದು ಹಾಗಾದ್ರೆ ನೀವು ಆ ಕೌಂಟರಿಗೆ ಹೋಗಿ. ನಾನು ಎಡಚ: ಎಡಗಡೆ ಷೂ ಮಾತ್ರ ನಾನು ಪಾಲಿಶ್ ಮಾಡೋದು, ನಾನು ಅದರಲ್ಲೇ ಸ್ಪೆಷಲಿಸ್ಟ್ ಎನ್ನುತ್ತಾನೆ.

ಕನ್ನಡಕ್ಕೆ : ಎ. ಎನ್. ಲಕ್ಷ್ಮೀನಾರಾಯಣ
ಎ. ೧೨೩.೭, ೨ನೇ ಮೇನ್, ವಿವೇಕಾನಂದ ನಗರ
ಮೈಸೂರು-೫೭೦ ೦೨೩



# ಸರ್ವ ಸರಕು ಶೈಕ್ಷಣಿಕ ಮಳಿಗೆ







ಸರಕಾರವು ಕಾಲೇಜುಗಳಿಗೆ ಅನುದಾನವನ್ನು ಕಡಿತಗೊಳಿಸಿದ ಮೇಲೆ ಸೊಸೈಟಿಯವರು ಅನಿವಾರ್ಯವಾಗಿ ಕೆಲವು ಸಿಬ್ಬಂದಿಯನ್ನು ಕಡಿತಗೊಳಿಸಬೇಕಾಯಿತು. ನಮ್ಮ ಪ್ರೊ|| ಭಾನಗಡಿಯವರಿಗೂ ಈ ಬಿಸಿ ತಟ್ಟಿತು. ಕೂಡಲೇ ಅವರು ಸಿ.ಎಂ. ಹತ್ತಿರ ಓಡಿ ಹೋಗಿ ಮುಂದೆ ಏನಾದರೂ ದಾರಿ ಕಾಣಿಸಬೇಕು ಎಂದು ಮೊರೆಯಿಟ್ಟರು. ಸಿ.ಎಂ. ಅವರು ಬಹಳ ಕಳಕಳಿಯಿಂದ ಪ್ರೊ|| ಭಾನಗಡಿಯನ್ನು ಹತ್ತಿರ ಕೂಡಿಸಿಕೊಂಡು ಹೇಳಿದರು, ''ನೋಡಪಾ ಭಾನಗಡಿ, ಇದು ಸರಕಾರದ ನೀತಿ ಅದ ಏನಪಾ. ಇದರಾಗ ಯಾರ ಒಬ್ಬರ ಕೈವಾಡನೂ ಇಲ್ಲ. ಆದರ ನೀ ಯಾಕ ಚಿಂತಿ ಮಾಡತಿ. ಪಿ.ಎಂ. ರೋಜಗಾರ ಯೋಜನಾಕ್ಕ ಒಂದು ಅರ್ಜಿ ಗುಜರಾಯಿಸಿಬಿಡು. ನಾ ಸ್ಯಾಂಕ್ಶನ ಮಾಡಿಸ್ತೀನಿ. ಹ್ಯಾಂಗೂ ನೀ ಅನುಭವಸ್ತ ಇದ್ದಿ. ಒಂದು ಉದ್ಯೋಗ ಸುರು ಮಾಡು. ಒಳ್ಳೇದಾಗ್ತದ.''

ಸಿ.ಎಂ. ಅವರ ಸಲಹೆ ಮತ್ತು ಪ್ರೊ|| ಭಾನಗಡಿಯವರ ಚುರುಕು ಬುದ್ಧಿಯ ಫಲವಾಗಿ ರಾಸೂರಿನ ಹೈವೇ ಮೇಲೆ ಸರ್ವ ಸರಕು ಶೈಕ್ಷಣಿಕ ಮಳಿಗೆ (Educational Departmental Stores) ಎಂಬ ನಾಮಫಲಕ ಕಂಗೊಳಿಸಹತ್ತಿತು. ಸ್ವತಃ ಸಿ.ಎಂ. ಅವರೇ ಮಳಿಗೆಯ ಉದ್ಘಾಟನೆಗೆ ಬಂದರು. ಪ್ರೊ|| ಭಾನಗಡಿಯವರು ಸಿ.ಎಂ. ಅವರಿಗೆ ತಮ್ಮ ಮಳಿಗೆಯ ವಿವಿಧ ಸರಕುಗಳ ಪರಿಚಯ ಮಾಡಿಸಿಕೊಡಹತ್ತಿದರು.

''ಸsರ, ಈ ಕೌಂಟರಿನಲ್ಲಿ ಶಾಲಾ ಕಾಲೇಜುಗಳ ಸೀಟುಗಳು ದೊರೆಯುತ್ತವೆ. ಹಿಂದೆಲ್ಲ ಮ್ಯಾನೇಜಮೆಂಟಿನವರು ಕದ್ದೂಮುಚ್ಚಿ ಸೀಟಗಳನ್ನು ಮಾರಿಕೊಳ್ಳುತ್ತಿದ್ದರು. ಈಗ ಸರಕಾರವೇ ವಿಶ್ವವಿದ್ಯಾಲಯದ ಸೀಟುಗಳನ್ನು ಮಾರಿಕೊಳ್ಳಬೇಕೆಂದು ಯೋಜನೆ ಹಾಕಿಕೊಂಡಿರುವುದರಿಂದ ಯಾವ ಭಯನೂ ಇಲ್ಲ. ನರ್ಸರಿ, ಪ್ರೈಮರಿಗಳಿಗೆಲ್ಲ ಡೊನೇಶನ್ ಹೆಸರಿನಿಂದ ಪಾಲಕರ ಸುಲಿಗೆ ಮಾಡ್ತಾರೆ ಅಂತ ಗುಲ್ಲುಗಾವಳಿ ಮಾಡತಿದ್ರು. ಈಗ ಹಾದಿ ಖುಲ್ಲಾ ಆಗೇದರಿ. ನಾವು ನಮ್ಮ ಮಾರ್ಜಿನ ಇಟಕೊಂಡು ಸೀಟ ಮಾರಾಟ ಮಾಡ್ತೇವರಿ. ನಮ್ಮ ಮಳಗಿ ಹೈವೇ ಮ್ಯಾಲ ಇರೋದ್ರಿಂದ ಈ ಕಡೆ ಆಂಧ್ರಾ ಆ ಕಡೆ ಮಹಾರಾಷ್ಟ್ರದಿಂದ ಭರಪೂರ ಗಿರಾಕಿ ಬರ್ತಾವ. ಇಂಜಿನಿಯರಿಂಗ ಮತ್ತ ಮೆಡಿಕಲಗಂತೂ ಕ್ಯೂ ಹತ್ತಿರ್ತದ.''

''ಶಾಬಾಶ, ಅಂತೂ ರೋಜಗಾರ ಯೋಜನೆ ಸಾರ್ಥಕ ಮಾಡ್ಕೊಂಡಿ ಬಿಡಪ್ಪ.'' ಎರಡನೆಯ ಕೌಂಟರಿನ ಕಡೆಗೆ ಕಣ್ಣು ಹಾಯಿಸಿ ಸಿ.ಎಂ. ಕೇಳಿದರು, ''ಇದೇನು, ಉಪಕಾರ ಕೌಂಟರ ಅಂತ ಇದೆಯಲ್ಲ?''

''ಅದು ಹೀಂಗರಿ, ಇವತ್ನಾಳ ಹುಡುಗ್ರು ಓದತಾವರಿ. ಆದರ, ಪರೀಕ್ಷೆ ಅಂದ್ರ ಏನಾಗ್ತದೋ ಏನೋ. ಅಂಜಿ ಉಚ್ಚಿ ಹೊಯ್ಕೋತಾವ. ಅಂಥ ಹುಡುಗರಿಗೆ ಸಹಾಯ ಆಗಲಿ ಅಂತ ಈ ಸರಕು ಇಟ್ಟೇವರಿ. ಅಂದ್ರ ಪರೀಕ್ಷಾದ ಕಾಲಕ್ಕ ಯಾರೂ ಹೆದರಬೇಕಾಗಿಲ್ಲರಿ. ನಮ್ಮ ಹತ್ತರ ಬಂದ್ರ ನಾವು ಪರೀಕ್ಷಾ ಬರಸೋ ವ್ಯವಸ್ಥೆ ಮಾಡಸ್ತೇವ್ರಿ.''

''ಇದಕ್ಕ ಹ್ಯಾಂಗ ರೇಟ ಫಿಕ್ಸ ಮಾಡ್ತೀರಿ ?''

''ಎಷ್ಟ ಪರಸಂಟೇಜ ಮಾರ್ಕ್ಸ ಬರೋಹಂಗ ಬರಸಬೇಕು ಅಂತಾರ ಅದರ ಮ್ಯಾಲ ರೇಟ ಹೆಚ್ಚುಕಮ್ಮಿ ಆಗ್ತದರಿ.''

''ನಿಯತ್ತ ಅಂದ್ರ ನಿಯತ್ತ ನೋಡಪಾ. ಯಾರಿಗೂ ಧೋಕಾ ಮಾಡಬಾರ್ದು.'' ಸಿ.ಎಂ. ಸಾಹೇಬರು ಹಿತನುಡಿ ಹೇಳಿದರು.

''ಆ ಕಡೆ ಬರ್‍ರೀ ಸsರ, ಇದರದೇ ಇನ್ನೊಂದು ಸೆಕ್ಷನ್ ಅದ. ಕೆಲವು ಹುಡುಗರು ಏನೋ ಜಿದ್ದಿಗಿ ಬಿದ್ದು ತಾವೇ ಪರೀಕ್ಷಾ ಬರೀತಾವ. ಆಮ್ಯಾಲ ತಮಗ ಪರ್ಸಂಟೇಜ ಬರಲ್ಲ ಅಂತ ಗಾಬರ್‍ಯಾಗಿ ಏನೇನೋ ಎಡವಟ್ಟ ಮಾಡ್ಕೊಂಡು ಕೂಡ್ತಾವ, ತಂದೀತಾಯಿ ಜೀವಕ್ಕ ಘಾಸಿ ತರ್ತಾವ. ಅಂಥ ಹುಡುಗರ ಸಹಾಯಕ್ಕಂತ ಈ ಕೌಂಟರ ತೆಗದೇವ್ರಿ. ಮೌಲ್ಯಮಾಪನದಾಗ ಚೂರು ಪಾರು ಸಹಾಯ ಮಾಡೋ ಕೆಲಸದ ಆರ್ಡರ ಈ ಕೌಂಟರನ್ಯಾಗ ತೊಗೋತೇವ್ರಿ.''

''ಆ ಕಡೆ ಏನೋ ಭಾಳ ಥಳಕಬಳಕ ಕಾಣಸ್ತದಲ್ಲ? ಅದೇನು ?''

''ಅದು ಎನ್.ಆರ್. ಕೌಂಟರ, ಸsರ. ಅಂದ್ರ ನಾನ್ ರೆಸಿಡೆಂಟ ಇಂಡಿಯನ್ ಆಗಬೇಕಂತ ಭಾಳ ಜನಕ್ಕ ಆಸೆ ಇರ್ತದರಿ. ಆದರ ಏನ ಮಾಡಬೇಕು. ಪ್ರತಿಭಾ ಇರ್ತದ, ಕ್ವಾಲಿಫಿಕೇಶನ್ ಇರೋದಿಲ್ಲ. ಪರದೇಶಕ್ಕ ಹೋಗೋ ತಾಕತ್ತಿರ್ತದ, ಆದರ ಬೇಕಾದಂಥ ಡಿಗ್ರಿ ಇರೋದಿಲ್ಲ. ಅಂಥವರ ಸಲ್ಯಾಕ ಆ ಸೆಕ್ಶನ್ ತೆಗೆದೇವ್ರಿ. ಆವಶ್ಯಕತಾ ಇರಾವ್ರಿಗೆ, ಅವರು ಬಯಸಿದಂಥ ವಿಶ್ವವಿದ್ಯಾಲಯದ ಡಿಗ್ರಿ ನೀಡೋ ವ್ಯವಸ್ಥೆ ಇಲ್ಯದರೀ. ಕೆಲವು ವಿಶ್ವವಿದ್ಯಾಲಯದವರೂ ನಮಗ ಭಾಳ ಸಹಕಾರ ನೀಡ್ತಾರರಿ. ಈ ಧಂಧೆದಾಗ ಮಾರ್ಜಿನ ಭಾಳ ಇರ್ತದರಿ. ಮಾರ್ಜಿನ ಇದ್ದಾಂಗ ನಾವೂ ಸಹಕಾರ ನೀಡಿದವರಿಗೆ ನಿಯತ್ತಿನಿಂದ ನೋಡ್ಕೋಬೇಕಾಗ್ತದರಿ.''

''ಅಂತೂ ನಮ್ಮ ಹುಡುಗ ಧಂಧೆಕ ಹತ್ತಿದಿ, ಇದೇ ನಮಗ ಸಂತೋಷ. ಈ ಧಂಧೆದಾಗ ಇಷ್ಟೆಲ್ಲ ಸ್ಕೋಪ ಇರೋದು ನನಗೆ ಗೊತ್ತೇ ಇರಲಿಲ್ಲ. ಬಹುಶಃ ನಮ್ಮ ವಿದ್ಯಾಮಂತ್ರಿಗಳು ನಿರುದ್ಯೋಗಿ ಇಂಜಿನೀಯರಗಳಿಗೆಲ್ಲ ಈ ಶಿಕ್ಷಣ ಇಲಾಖೆಗೆ ಸೇರಿಸಬೇಕಂತಾರ. ನಿಮ್ಮಂಥ ಮಾಸ್ತರಗಳಕಿಂತ ಅವರು ಇಂಥ ಕೆಲಸ ಭಾಳ ಭಲೋ ಮಾಡ್ತಾರ, ಏನಪಾ. ಯಾವ ಸರಕಾರಕ್ಕನೂ ಬುದ್ಧಿನೇ ಇಲ್ಲ ನೋಡು. ಸರಕಾರಕ್ಕ ಒಂದು ಪೈಸಾನೂ ಫಾಯಿದೆ ಇಲ್ಲದ ಈ ಶಿಕ್ಷಣ ಇಲಾಖೆ ಮುಚ್ಚಿಸಿ ನಿರುದ್ಯೋಗಿ ಮಾಸ್ತರಗಳಿಗೆ ಇಂಥ ಧಂಧೆ ಹಚ್ಚಿಕೊಟ್ಟರ ಸರಕಾರಕ್ಕ ಎಷ್ಟ ಉಳತಾಯ ಆಗ್ತದ. ಅದೇ ಹಣದಿಂದ, ಮನೆಮಾರು ಬಿಟ್ಟು ಪಾಪ ''ದೇಶಸೇವಾ'' ''ದೇಶಸೇವಾ'' ಅಂತ ಪರಿಪಿರಿ ತಿರಗ್ಯಾಡೋ ನಮ್ಮ ಜನಸೇವಕರ ಭತ್ತೆನಾದರೂ ಹೆಚ್ಚಿಸಿಕೋಬಹುದು. ಪಾಪ, ಅವರ ನಿಸ್ವಾರ್ಥ ಸೇವಾ ಸಾರ್ಥಕ ಮಾಡಿದಾಂಗ ಆಗ್ತದ. ಏನಂತೀ ಭಾನಗಡಿ ?'' ಎಂದು ರಾಸೂರಿನ ಸಿ.ಎಂ. ಅಂದರೆ ಮುನ್ಸಿಪಾಲ್ಟಿಯ ಸದರ ಸಾಹೇಬರಾದ ಶ್ರೀ ಚಕಮಕಿ ಮಣಕಪ್ಪನವರು ಕೇಳಿದರು.

ಪ್ರೊ|| ಭಾನಗಡಿಯವರು ಮೆಚ್ಚಿಕೆ ಸೂಚಿಸುತ್ತ ತಲೆ ಆಡಿಸಿ, 'ತಾವು ಹೇಳೋದು ಬರೋಬರಿ ಅದ ಸರ. ತಮ್ಮಿಂದನೇ ನನಗೆ ಇದೆಲ್ಲ ತಿಳಿದುಬಂತು. ನಡೀರಿ, ಆ ಕಡೆ ನಮ್ಮ ಶಿಷ್ಯ ಆ.ಕಂ. ಹಾಲು (ಆಲ್ ಕಂಪನೀ ಹಾಲ್= Al co hol) ತಂದು ಕಾಯ್ತಾ ಇದ್ದಾನ,' ಎಂದು ಹೇಳಿ ಅವರು ಸಿ.ಎಂ. ಅವರನ್ನು ನಸುಬೆಳಕಿನ ಕೋಣೆಗೆ ಕರೆದುಕೊಂಡು ಹೋದರು.

ಭಾಲಚಂದ್ರ ಜಯಶೆಟ್ಟಿ
ನಮ್ಮ ಮನೆ, ಜಯನಗರ, ಸೇಡಂ ರಸ್ತೆ, ಗುಲಬರ್ಗಾ-೫೮೫ ೧೦೫

# ವೈಜ್ಞಾನಿಕ ಜ್ಞಾನ ಮತ್ತು ಆಚರಣೆ

**ಮೂಲ: ಹೇಮನ್ ಲೆವಿ**

*ಹೇಮನ್ ಲೆವಿ ಅವರು ಲಂಡನ್ನಿನ ಇಂಪೀರಿಯಲ್ ಕಾಲೇಜಿನ ಗಣಿತಶಾಸ್ತ್ರದ ಪ್ರಾಧ್ಯಾಪಕರು. ವೈಜ್ಞಾನಿಕ ಅನ್ವೇಷಣೆಯ ವಿಧಾನಕ್ರಮ ಮತ್ತು ದೃಷ್ಟಿಕೋನಕ್ಕೆ ಸಂಬಂಧಪಟ್ಟಂತೆ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಈ ಲೇಖನವನ್ನು 'ಬದಲಾಗುತ್ತಿರುವ ವಿಶ್ವದಲ್ಲಿ ವಿಜ್ಞಾನ' (Science in Changing World) ಎಂಬ ಪುಸ್ತಕದಿಂದ ಆರಿಸಿಕೊಳ್ಳಲಾಗಿದೆ. ಅದರ ಸಂಪಾದಕರು ಮೇರಿ ಆಡಮ್ಸ್ ಮತ್ತು ಪ್ರಕಾಶಕರು ಜಾರ್ಜ್ ಆಲೆನ್ ಮತ್ತು ಅನ್‌ವಿನ್ ಲಿಮಿಟೆಡ್, ಲಂಡನ್, ೧೯೩೩.*

"ವೈಜ್ಞಾನಿಕ ಜ್ಞಾನದ ಒಂದು ನಿಖರವಾದ ಮತ್ತು ವಾಸ್ತವಿಕ ಹೇಳಿಕೆಯೊಂದೇ ಸಾರ್ವತ್ರಿಕ ಒಪ್ಪಿಗೆ ಪಡೆಯಲು ಸಾಕಾಗುವುದೇ ?'' ಕೇವಲ ಶಿಕ್ಷಣ ತಜ್ಞರು, ಪೋಷಕರು ಮತ್ತು ಪ್ರಚಾರಕರು ಮಾತ್ರವಲ್ಲ ನಮ್ಮಲ್ಲಿ ಪ್ರತಿಯೊಬ್ಬರೂ ಎದುರಿಸುತ್ತಿರುವ ಬಹುಮುಖ್ಯ ಪ್ರಶ್ನೆಗಳಲ್ಲಿ ಇದೂ ಒಂದು. ಇದಕ್ಕೆ ಕೊಡುವ ಉತ್ತರವು, ಸಾಂಸ್ಕೃತಿಕ ಪ್ರಗತಿಗೆ ವಿಜ್ಞಾನವು ಒಂದು ಗಂಭೀರ ವಿಷಯವಾಗಬಲ್ಲುದೇ ಎಂಬುದನ್ನು ನಿರ್ಧರಿಸುತ್ತದೆ. ಈ ಕೆಳಗಿನ ಚಿತ್ರಣದಿಂದ ಉತ್ತರಕ್ಕೆ ಕೆಲವು ಸುಳಿವುಗಳು ದೊರಕಬಹುದು.

ನನ್ನ ಬಳಿ ಒಂದು ಸುಂದರ ಗುಲಾಬಿ ಬಣ್ಣದ ಸೇಬಿದೆ ಎಂದಿಟ್ಟುಕೊಳ್ಳಿ. ಅದನ್ನು ನಿಮಗೆ ತಿನ್ನಲು ಕೊಡುತ್ತೇನೆ. ನನಗಿದು ಎಲ್ಲಿ ದೊರಕಿತು ಎಂದು ನೀವು ಕೇಳುತ್ತೀರಿ. ಸ್ಮಶಾನದ ಸೇಬಿನ ಮರಗಳಲ್ಲಿ ಒಂದರದ್ದು. – ಸ್ಮಶಾನದಲ್ಲಿ ಹಣ್ಣಿನ ಮರಗಳು ಹುಲುಸಾಗಿ ಬೆಳೆಯುತ್ತದೆಯೆಂದು ನಿಮಗೆ ಗೊತ್ತು. ನಿಮಗದು ಬೇಡವೇ ? ನೀವದನ್ನು ತಿನ್ನುವುದಿಲ್ಲವೇ ? ಅದರಲ್ಲೇನಿದೆ ?

ಅದು ಬೇರೆ ಸೇಬಿನ ಹಣ್ಣಿನಷ್ಟೇ ಒಳ್ಳೆಯದು. ಅದೇ ಸಕ್ಕರೆಯ ಅಂಶಗಳು, ಅದೇ ಆಸಿಡ್, ಅದೇ ಗುಲಾಬಿ ಬಣ್ಣ ಮತ್ತು ರಸಭರಿತವಾದ ಹಣ್ಣು. ಅದೇ ರಾಸಾಯನಿಕ ಸಂಯೋಗಗಳಿದ್ದರೂ ನೀವು ತಿನ್ನುವುದಿಲ್ಲ. ಇರಲಿ, ನಾನು ನಿಮ್ಮನ್ನು ಒತ್ತಾಯಿಸುವುದಿಲ್ಲ. ಬದಲಿಗೆ ಈ ಲೋಟದಲ್ಲಿರುವ ನೀರು – ಅತ್ಯುತ್ತಮವಾಗಿ ಶೋಧಿಸಿದ್ದೆಂದು ನಿಮಗೆ ಭರವಸೆ ನೀಡುತ್ತೇನೆ. ಇಂದು ನಾನು ಚರಂಡಿ ಕೆಲಸ ನಡೆಯುವಲ್ಲಿಗೆ ಹೋಗಿದ್ದೆ. ಅಲ್ಲಿ ಇದನ್ನು ಹೊಸ ಜೈವಿಕ ಕ್ರಿಯೆಯಿಂದ ಶುದ್ಧೀಕರಿಸುವುದನ್ನು ನೋಡಿದೆ. ಅದನ್ನು ನೋಡಿದರೆ ನೀವು ನಂಬದಿರಬಹುದು. ಆದರೆ ಅದು ದೊರಕಿದ್ದು ಅಸಹ್ಯಕರವಾದ, ದುರ್ವಾಸನೆಯ ರಾಡಿಯಲ್ಲಿ ಮತ್ತು ಈಗ ಸಂಪೂರ್ಣ ಪರಿಶುದ್ಧ, ಬ್ಯಾಕ್ಟೀರಿಯಾ ಅಥವಾ ಯಾವುದೇ ರೀತಿಯ ಕಲ್ಮಷಗಳಿಂದ ಮುಕ್ತವಾದದ್ದು ಎಂದು ದೃಢಪಟ್ಟಿದೆ. ಏನು ! ನೀವು ಕುಡಿಯುವುದಿಲ್ಲವೇ ? ಹೋ, ನೀವು ದಡ್ಡರು, ನಿಜವಾಗಿಯೂ ಇದು ನಲ್ಲಿಯಿಂದ ಬರುವ ನೀರಿಗಿಂತ ಸ್ವಚ್ಛ ಮತ್ತು ಪರಿಶುದ್ಧವಾದದ್ದು. ನಿಮ್ಮ ನಲ್ಲಿಯಿಂದ ಬರುವ ನೀರು, ನೀವು ಅಷ್ಟೊಂದು ಆಸ್ವಾದಿಸುತ್ತಾ ಕುಡಿಯುವ ನೀರು... ಏನು ? ನೀವು ಕೇಳುವುದಿಲ್ಲವೇ ? ಆಶ್ಚರ್ಯ ? ಈ ನೀರು ರಾಸಾಯನಿಕವಾಗಿ, ಜೈವಿಕವಾಗಿ ಪರಿಶುದ್ಧವಾದದ್ದೆಂದು ನಾನು ಭರವಸೆ ನೀಡಿದರೂ ನೀವು ಕುಡಿಯುವುದಿಲ್ಲ. ನೀವು ಕುಡಿಯುವ ನಿರಿನ ಬಗ್ಗೆ ನಾನೆಷ್ಟೇ ಹೇಳಬೇಕೆಂದರೂ, ಸತ್ಯವನ್ನು ತಿಳಿಯುವ ಬದಲು ಅದೇ ನೀರನ್ನು ಕುಡಿಯುವಿರಿ. ಇದೆಲ್ಲವೂ ತರ್ಕಹೀನವೆನಿಸುತ್ತದೆ !

ಈಗ, ಈ ಕಲ್ಪಿತ ಸಂಭಾಷಣೆಯಲ್ಲಿ ನಾನು ಆದರ್ಶಪ್ರಾಯವಾದ ವೈಜ್ಞಾನಿಕ ಧೋರಣೆಯನ್ನು ಹೊಂದಿದ್ದರೂ ಸಹ, ಆ ನೀರನ್ನು ನನಗೂ ಸಹ ಕುಡಿಯಲಾಗುತ್ತಿರಲಿಲ್ಲವೆಂದು ನಿಸ್ಸಂಕೋಚವಾಗಿ ಒಪ್ಪಿಕೊಳ್ಳುತ್ತೇನೆ. ಸೇಬಿನ ಹಣ್ಣಿನ ಬಗ್ಗೆಯೂ ನನಗೆ ಸಂದೇಹವಿದೆ. ದಯವಿಟ್ಟು ನಾನು ಒಪ್ಪಿಕೊಂಡಿರುವ ವಿಷಯದ ಪ್ರಾಮುಖ್ಯತೆಯನ್ನು ಗಮನಿಸಿ. ನನಗೆ ವೈಜ್ಞಾನಿಕ ಅಂಶಗಳು ತಿಳಿದಿದ್ದರೂ ಸಹ, ಕಡೆ ಪ್ರಯತ್ನದಲ್ಲಿ ನನ್ನ ಕ್ರಿಯೆಗಳು ಕೇವಲ ಈ ಅಂಶಗಳ ಹಿಡಿತದಲ್ಲಿರುವುದಿಲ್ಲ ಎಂಬುದನ್ನು ನೀವು ನೋಡುತ್ತೀರಿ. ನಿಜವಾಗಿಯೂ, ನನಗೆ ವಿಷಯ ತಿಳಿಯದೇ ಇದ್ದಿದ್ದಲ್ಲಿ, ಬಹುಶಃ ನಾನು ಸೇಬಿನ ಹಣ್ಣು ಮತ್ತು ನೀರುಗಳೆರಡನ್ನೂ ಆಸ್ವಾದಿಸುತ್ತಿದ್ದೇನೋ ? ಆದರೆ ನನ್ನ ಜ್ಞಾನ ನನ್ನಲ್ಲಿ ಅಸಹ್ಯಕರ ಭಾವನೆಯನ್ನುಂಟು ಮಾಡಿತು. ನನ್ನ ವೈಯಕ್ತಿಕ ಜಗತ್ತಿನ ಮೇಲೆ ತೀವ್ರ ಪ್ರಭಾವವನ್ನು ಬೀರಿತು.

ವೈಜ್ಞಾನಿಕ ವಿವರಣೆಯು, ಈ ವೈಯಕ್ತಿಕ ಜಗತ್ತಿನಿಂದ ಏನನ್ನೂ ಪಡೆಯದೆ ಹೊರಗಿಡಲ್ಪಟ್ಟಿದೆ. ವ್ಯಕ್ತಿಯ ಇಷ್ಟಾನಿಷ್ಟಗಳಿಗೆ ಸ್ವತಂತ್ರವಾಗಿ ತನ್ನ ಚೌಕಟ್ಟನ್ನು ಕಟ್ಟಿಕೊಳ್ಳುತ್ತಿದೆ ಎಂಬ ವಿಷಯಕ್ಕೆ ಒತ್ತು ನೀಡಲು ನಾನೀಗ ಪ್ರಯತ್ನಿಸುತ್ತಿದ್ದೇನೆ. ವಿಜ್ಞಾನಿಗಳು ಸಾಮಾಜಿಕ ಆದರ್ಶಗಳನ್ನು ಹೊಂದಿದ್ದವರಾದ್ದರಿಂದ ವಿಷಯಗಳನ್ನು ಸ್ಪಷ್ಟವಾಗಿ ಜನರ ಮುಂದಿಟ್ಟರೆ, ಜನರು ಅವುಗಳನ್ನು ಅವಶ್ಯವಾಗಿ ಒಪ್ಪಿಗೊಳ್ಳುತ್ತಾರೆಂಬ ನಂಬಿಕೆಯೊಂದಿಗೆ, ಮಾನವನ ಬೆಳವಣಿಗೆಯಲ್ಲಿ ವೈಜ್ಞಾನಿಕ ಮನೋಭಾವವನ್ನು ಕಾಣಬಯಸುವ ವ್ಯಕ್ತಿಗಳು ಮುಂದುವರಿಯುತ್ತಾರೆ. ಅದಕ್ಕಿಂತಲೂ ಹೆಚ್ಚಾಗಿ, ಪದಗಳಲ್ಲಿ ಹೇಳಿರುವುದರಿಂದಲೇ ವಿಷಯಗಳು ಸತ್ಯವೆಂದು ಜನರು ಸುಮ್ಮನೆ ಒಪ್ಪಿಕೊಳ್ಳುವುದಿಲ್ಲ. ಆದರೆ ಅದನ್ನು ನಂಬದಿದ್ದರೂ ಸಹ ಮೇಲ್ನೋಟಕ್ಕೆ ನಂಬಿದವರಂತೆ ವರ್ತಿಸುತ್ತಾರೆ ಎಂದು ಅವರು ಭಾವಿಸಿದ್ದಾರೆ. ಜನರು ಶಬ್ದಗಳಲ್ಲಿ ಅಭಿವ್ಯಕ್ತಗೊಳಿಸಿದಂತೆ, ನಂಬಿಕೆಗೆ ಅನುಗುಣವಾಗಿ ವರ್ತಿಸುತ್ತಾರೆಯೇ ? ಇದೊಂದು ತಪ್ಪಾರ್ಥ ಮಾಡಿಕೊಂಡ ನಂಬಿಕೆಯೆ ? ಜನಸಮುದಾಯದಲ್ಲಿ ವಿಜ್ಞಾನವು ಬೇರೂರುವುದನ್ನು ಬಯಸುವ ಪ್ರತಿಯೊಬ್ಬ ವಿಜ್ಞಾನಿ ಮತ್ತು ಪ್ರತಿಯೊಬ್ಬ ಶಿಕ್ಷಕನೂ, ನಂಬಿಕೆಯನ್ನೇ ಪ್ರತಿಬಿಂಬಿಸುವ ನಡತೆಯ ಸಮಸ್ಯೆಯನ್ನೆದುರಿಸಲು ಸಜ್ಜಾಗಬೇಕು. ಇಲ್ಲವಾದಲ್ಲಿ ನಂಬಿಕೆಗಳು ಕೇವಲ ನಿಸ್ಸಾರ ಪದಪುಂಜಗಳಾಗಿ ಉಳಿಯುತ್ತವೆ.

ನನಗೀಗ ಒಂದು ಚಳಿಗಾಲದ ಆಹ್ಲಾದಕರವಾದ ಬೆಳಗಿನ ಸಮಯ ನೆನಪಿಗೆ ಬರುತ್ತದೆ. ನಾನಾಗ ವಿದ್ಯಾರ್ಥಿಯಾಗಿದ್ದೆ. ನನ್ನ ರೂಮಿನಲ್ಲಿ ಕುಳಿತುಕೊಂಡು ಓದುತ್ತಿದ್ದೆ. ಕಿಟಕಿಯಿಂದ ಸೂರ್ಯನ ಕಿರಣಗಳು ತೂರಿ ಬರುತ್ತಿದ್ದವು. ಆಗ ನನ್ನ ಮನೆಯೊಡತಿ ಬಂದು ಸದ್ದಿಲ್ಲದೆ ಕಿಟಕಿ ಮುಚ್ಚಿದಳು. ಹಾಗೆ ಮಾಡದಿದ್ದರೆ ಸೂರ್ಯ ಒಲೆಯ ಬೆಂಕಿಯನ್ನು ಆರಿಸಿಬಿಡುವನೆಂದು ವಿವರಿಸಿದಳು. ನಾನಾಗ ಯುವಕ ಮತ್ತು ಯಾವುದಕ್ಕೂ ವಾದಕ್ಕಿಳಿಯುತ್ತಿದ್ದವನು. ಕೂಡಲೇ ಅವಳ ನಂಬಿಕೆಗೆ ಆಧಾರವಾದ ಸಾಕ್ಷ್ಯಗಳಾವುವು ಎಂಬುದನ್ನು ಕಂಡುಹಿಡಿಯಲು ಪ್ರಯತ್ನಪಟ್ಟೆ. ಬಲವಾದ ನಂಬಿಕೆ ಮತ್ತು ವಿಶಾಲ ಅನುಭವಗಳನ್ನು ಬಿಟ್ಟು ಅದನ್ನು ನಂಬಲು ಆಕೆಗೆ ಸ್ಪಷ್ಟವಾದ ಆಧಾರವೇನೂ ಇರಲಿಲ್ಲ. ಕತ್ತಲು ಆವರಿಸಿದಾಗ ಯಾವಾಗಲೂ ಬೆಂಕಿ ಪ್ರಜ್ವಲಿಸುವಂತೆ ಕಾಣಿಸುತ್ತದೆಯೆಂಬುದನ್ನು ಗಮನಿಸುತ್ತಾ, ಇದೇ ಅನುಭವ ಆಕೆಗಿರುವುದು ಎಂದು ಕಂಡುಹಿಡಿದೆ. ಇದೇ ಮೇಣದ ಬತ್ತಿಗೂ ಅನ್ವಯಿಸುತ್ತದೆಯೆಂದು ತೋರಿಸಿಕೊಟ್ಟೆ. ಸೂರ್ಯನ ಕಿರಣ ಅದರ ಮೇಲೆ ಬಿದ್ದಾಗ ಅದು ಮಂಕಾದಂತೆ ಕಾಣಿಸುತ್ತದೆ. ಆದರೂ ಅದು ಉರಿಯುವುದರಲ್ಲಿ ಸ್ವಲ್ಪವೂ ಕಡಿಮೆಯಾದಂತೆ ಕಾಣಬರಲಿಲ್ಲ. ಮೇಣದ ಬತ್ತಿಯ ಬೆಳಕು ಮಾತ್ರ ಮಂಕಾಯಿತು. ಆದರೆ ಒಲೆಯ ಬೆಂಕಿಯಂತೆ ಕತ್ತಲೆ ಆವರಿಸಿದಾಗ ಅದರ ಜ್ವಾಲೆ ಮತ್ತೆ ಪ್ರಜ್ವಲಿಸಿತು. ಸೂರ್ಯನಿಂದ ಬೆಂಕಿಯ ಜ್ವಾಲೆ ಕಾಣಿಸದಿದ್ದರೆ ಕಲ್ಲಿದ್ದಲು ಕಡಿಮೆ ತಾಪದಲ್ಲಿ ಉರಿಯುತ್ತಿದೆ ಎಂದರ್ಥವೇ ? ನಿಜವಾಗಿಯೂ ಆ ವಿಷಯದ ಬಗ್ಗೆ ಯಾವುದೇ ಮಾಹಿತಿಯಿರಲಿಲ್ಲ ಮತ್ತು ಆ ಮಾಹಿತಿ ದೊರಕುವವರೆಗೂ ಯಾರೂ ಬೆಂಕಿ ಆರಿಹೋಯಿತೆಂದು ಪ್ರತಿಪಾದಿಸಲು ಸಾಧ್ಯವಿಲ್ಲವೆಂದು ಆಕೆ ಒಪ್ಪಿಕೊಂಡಳು. ನಾನು ಕತ್ತಲೆಯನ್ನು ಹೋಗಲಾಡಿಸಿದೆ ಮತ್ತು ಮೇಲ್ನೋಟದಲ್ಲಿ ನಡೆದದ್ದೇನೆಂದರೆ, ಜ್ವಾಲೆಯು ಎದ್ದು ಕಾಣುವುದು ಕಡಿಮೆಯಾಯಿತಷ್ಟೇ. ಹಾಗೂ ಅದೇ ಸಮಯದಲ್ಲಿ ಕಲ್ಲಿದ್ದಲಿನ ಕಪ್ಪು ಬಣ್ಣ ಮತ್ತು ಬೂದಿಯ ಶುದ್ಧ ಬಿಳಿ ಬಣ್ಣ ವೈದೃಶ್ಯದಲ್ಲಿ ಹೆಚ್ಚು ಸ್ಪಷ್ಟವಾಗಿ ಕಾಣತೊಡಗಿದವು ಎಂದು ಆಕೆಗೆ ತೋರಿಸಿದೆ. ಕೇವಲ ತಪ್ಪಾಗಿ ಗಮನಿಸಿದಂತಹ ಮತ್ತು ಬಹಳ ಕಾಲದ ಕುರುಡು ನಂಬಿಕೆಯೆಂದು ಬಹುಶಃ ನಾನು ತಪ್ಪಾಗಿ ಅರ್ಥಮಾಡಿಕೊಂಡು, ಅದನ್ನು ಆಕೆಯ ಮನಸ್ಸಿನಿಂದ ತೆಗೆದುಹಾಕಲು ಪ್ರಯತ್ನಪಟ್ಟೆ, ಆಕೆಗೆ ಮನವೊಪ್ಪಿದಂತೆ ತೋರುತ್ತಿದೆಯೆಂದು ತಿಳಿದೆ. ಈ ವಾದಕ್ಕೆ ಪುಷ್ಟಿಕೊಡಲು, ಸೂರ್ಯನ ಕಿರಣಗಳು ಗ್ಯಾಸ್ ಬೆಂಕಿಯನ್ನು ಕಡಿಯೆ ಮಾಡಿದೆಯೆಂಬುದು ಗೋಚರವಾಗಲೇ ಇಲ್ಲವೆಂಬ ಒಪ್ಪಿಗೆಯನ್ನು ಆಕೆಯಿಂದ ಪಡೆದೆ. ನಂತರ ನಾನು ವಿಜಯೀ ಪ್ರಚಾರಕನಿಗಾಗುವ ವಿಚಿತ್ರ ಸಂತೃಪ್ತಿಯ ಭಾವನೆಯೊಂದಿಗೆ ಪುಸ್ತಕದಲ್ಲಿ ಮುಳುಗಿಹೋದೆನು. ಒಂದು ಗಂಟೆಯ ನಂತರ, ಆಕೆ ಸದ್ದಿಲ್ಲದೆ ರೂಮಿಗೆ ಬಂದು ಮತ್ತೆ ಕತ್ತಲಾಗಿಸಿರುವುದು ತಟಕ್ಕನೆ ಅರಿವಿಗೆ ಬಂತು ! ಬಹುಶಃ ನಾನು ಎತ್ತಿದ ಪ್ರಶ್ನೆಯಲ್ಲಿ ಮಹತ್ತಾದ ವಿಷಯವಿದ್ದುದರ ಬಗ್ಗೆ ಆಕೆ ಖಂಡಿತವಾಗಿಯೂ ಸಂದೇಹಪಟ್ಟಿದ್ದಾಳೆ. ಅದೂ ಸಾಧ್ಯವಿರಬಹುದು. ಅದೇನೇ ಇರಲಿ, ನಾನು ಆಕೆಯ ಕಣ್ಣ ಮುಂದೆಯೇ ತರೆದಿಟ್ಟ ಸಾಕ್ಷ್ಯಗಳನ್ನು ನಂಬದಿರುವಂತೆ ಪ್ರೇರೇಪಿಸಲು ಮತ್ತು ಚೆನ್ನಾಗಿ ಸ್ಥಾಪಿತವಾದ ಕಾರ್ಯರೂಢಿ (mode of conduct) ಯನ್ನು ಪರಿಪಾಲಿಸಿಕೊಂಡು ಹೋಗಲು ಕಾರಣ ಆಕೆಯ ಈ ಹಿಂದಿನ

ನಂಬಿಕೆ, ಈ ಪೂರ್ವಾಗ್ರಹಗಳು ಸ್ಪಷ್ಟವಾಗಿ ಆಕೆಯಲ್ಲಿತ್ತು. ವಾಸ್ತವದಲ್ಲಿ ಆಕೆ ಸಾಕ್ಷ್ಯವನ್ನು ನಂಬಲು ಸಿದ್ಧವಾಗಿರಲಿಲ್ಲ.

ಇದೇ ರೀತಿಯ ಅಪನಂಬಿಕೆಯ ಒಂದು ವಿನೋದಮಯ ಉದಾಹರಣೆಯನ್ನು ನೆನಪಿಸುತ್ತೇನೆ. ೧೭ನೇ ಶತಮಾನದ ಮಧ್ಯದಲ್ಲಿ, ಕೊಳಚೆಯಿಂದ ಇಲಿಮರಿಗಳು ಬರುತ್ತವೆಯೆಂದು, ಅರಿಸ್ಟಾಟಲ್‌ನ ಪರಮಾಧಿಕಾರದ ಬಲದಿಂದ ನೀಡಿದ ಹೇಳಿಕೆಯನ್ನು ಸರ್ ಥಾಮಸ್ ಬ್ರೌನ್ ಅನುಮಾನಿಸಿದನೆಂದು ಅಲೆಗ್ಸಾಂಡರ್ ರಾಸ್ ಆತನ ಮೇಲೆ ದಾಳಿ ಮಾಡಿದನು. ರಾಸ್‌ಗೆ ಬಲವಾದ ಅರಿಸ್ಟಾಟಲ್ ಪೂರ್ವಗ್ರಹವಿತ್ತು. ಆತ ಘೋಷಿಸಿದ: ಥಾಮಸ್ ಬ್ರೌನ್‌ನಂತೆ ಅರಿಸ್ಟಾಟಲ್ ಹೇಳಿಕೆಯನ್ನು ಪ್ರಶ್ನಿಸುವುದೆಂದರೆ, "ವಿವೇಚನೆ, ಪ್ರಜ್ಞೆ ಮತ್ತು ಅನುಭವವನ್ನೇ ಪ್ರಶ್ನಿಸಿದಂತೆ" ಮತ್ತು ಅನುಮಾನಪಡುವವರು "ನೈಲ್ ನದಿಯ ಕೊಳೆತ ಮಣ್ಣಿನಿಂದ ಹೊರಬಂದ ಇಲಿಮರಿಗಳಿಂದ ತುಂಬಿರುವ ಹೊಲಗದ್ದೆಗಳನ್ನು ಈಜಿಪ್ಟಿಗೆ ಹೋಗಿ ಸ್ವತಃ ತಾವೇ ಕಣ್ಣಾರೆ ನೋಡಲಿ" ಎಂದು ಆಗ್ರಹಿಸಿದನು. ಹಳೆ ಸಂಪ್ರದಾಯವನ್ನು ಬೆಂಬಲಿಸಲು ವಾದಗಳನ್ನು ಪುಂಖಾನುಪುಂಖವಾಗಿ ಹೊರಡಿಸಲಾಯಿತು. ನಾವೆಲ್ಲರೂ ನಮ್ಮ ಮೂಢನಂಬಿಕೆಗಳನ್ನು ತೊರೆಯಲು ಇಷ್ಟಪಡುವುದಿಲ್ಲ.

೧೭೧೨ರ ಧೂಮಕೇತುವಿನ ಬಗ್ಗೆ ಇನ್ನೊಂದು ಕಥೆಯಿದೆ. ಗಣಿತಶಾಸ್ತ್ರದ ಮಹಾಪುರುಷ ವಿಸ್ಟನ್ ಸರಿಯಾದ ಸಾಕ್ಷ್ಯಾಧಾರಗಳೊಂದಿಗೆ ಧೂಮಕೇತು ಅಕ್ಟೋಬರ್ ೧೪ರ ಬುಧವಾರ ಬೆಳಿಗ್ಗೆ ೫ ಗಂಟೆ ೫ ನಿಮಿಷಕ್ಕೆ ಕಣ್ಣಿಗೆ ಗೋಚರವಾಗುತ್ತದೆಯೆಂದು ಮತ್ತು ಹಳೆಯ ಮೂಢನಂಬಿಕೆಗೆ ಅನುಗುಣವಾಗಿ ಮುಂದಿನ ಶುಕ್ರವಾರದ ಬೆಳಿಗ್ಗೆ ಬೆಂಕಿಯಿಂದ ಪ್ರಪಂಚವೇ ಸುಟ್ಟು ಹೋಗುತ್ತದೆಯೆಂದು ಭವಿಷ್ಯ ನುಡಿದನು. ಧೂಮಕೇತು ಸಮಯಕ್ಕೆ ಸರಿಯಾಗಿ ಕಾಣಿಸಿಕೊಂಡಿತು ಮತ್ತು ಉಳಿದ ಭವಿಷ್ಯನುಡಿಯು ನಿಜವಾಗುತ್ತದೆಯೆಂಬ ನಂಬಿಕೆಯಿಂದಾಗಿ ಅಲ್ಲೋಲಕಲ್ಲೋಲ ಆರಂಭವಾಯಿತು. ಜನರು ನೀರಿನ ಮೇಲೆ ಹೆಚ್ಚು ಸುರಕ್ಷಿತರಾಗಿರಬಹುದೆಂದು ಥೇಮ್ಸ್ ನದಿಯ ಮೇಲೆ ಚಪ್ಪಟೆ ದೋಣಿ ಮತ್ತು ದೋಣಿಗಳಲ್ಲಿ ತುಂಬಿಕೊಂಡರು. ಸುಮಾರು ಒಂದು ನೂರು ಪಾದ್ರಿಗಳು, ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ವಿಶೇಷ ಪ್ರಾರ್ಥನೆಗಳಿಗಾಗಿ ಮನವಿ ಮಾಡಲು ಲ್ಯಾಂಬೆಟ್ ಅರಮನೆಗೆ ಹೋಗಿದ್ದರೆಂದು ಹೇಳುತ್ತಾರೆ. ಷೇರುಗಳ ಬೆಲೆ ತೀವ್ರವಾಗಿ ಕುಸಿಯಿತು. ಜನರು ಬ್ಯಾಂಕಿನಿಂದ ತಮ್ಮ ಠೇವಣಿಗಳನ್ನು ವಾಪಸ್ ಪಡೆಯಲು ನುಗ್ಗಿದರು. ನಿಜವಾಗಿಯೂ ಭವಿಷ್ಯದ ಈ ಭಾಗಕ್ಕೆ ವಿಸ್ಟನ್ ಬಳಿ ಯಾವುದೇ ಸಾಕ್ಷ್ಯಾಧಾರಗಳಿರಲಿಲ್ಲ. ಖಗೋಳಶಾಸ್ತ್ರದ ಲೆಕ್ಕಾಚಾರಗಳ ಅರ್ಥಗಳಿಗೆ ಬೆಲೆಕೊಡುವ ವಿಜ್ಞಾನಿಯಾಗಿದ್ದರೂ, ಆತ ಮೂಢನಂಬಿಕೆಯ ಈ ತುಣುಕೊಂದನ್ನು ಭದ್ರವಾಗಿ ನಂಬಿದ್ದನು. ಅದು ೧೭ ಮತ್ತು ೧೮ರ ಶತಮಾನಗಳಲ್ಲಿ ಎಂಬುದೇನೋ ನಿಜ. ಈಗೇನಾದರೂ ನಾವು ಹೆಚ್ಚು ಮುಂದುವರಿದಿದ್ದೇವೆಯೇ? ನಮ್ಮ ಮೂಢನಂಬಿಕೆಗಳಲ್ಲಿ ನಾವು ಅದೆಷ್ಟನ್ನು ನಿಜವಾಗಿಯೂ ತ್ಯಜಿಸಿದ್ದೇವೆ?

ನಮ್ಮ ನಂಬಿಕೆಯ ಪರಿಶುದ್ಧತೆಗೆ ಕೇವಲ ವೈಜ್ಞಾನಿಕ ಜ್ಞಾನದ ಸಂಗ್ರಹಣೆಯೊಂದೇ ಸಾಲದು. ಸ್ವತಃ ವಿಜ್ಞಾನವೇ ಮೂಢನಂಬಿಕೆಯಿಂದ ಮುಕ್ತವಾಗಿದೆಯೇ? ಯಾರಾದರೂ ಹಿಂದಿನ ವಿಜ್ಞಾನ ಕ್ಷೇತ್ರದ ಮಹಾನ್ ವ್ಯಕ್ತಿತ್ವಗಳನ್ನು ಗಮನಿಸಿದರೆ, ಅವರಿಗಿದ್ದ ನಂಬಿಕೆಗಳ ಲಕ್ಷಣಗಳನ್ನು ಪರೀಕ್ಷೆ ಮಾಡಿದರೆ ಆತನು ಅನುಮಾನಿಸಲು ಆರಂಭಿಸುತ್ತಾನೆ. ಭೂಮಿಯನ್ನು ಬ್ರಹ್ಮಾಂಡದ ಮಧ್ಯದಲ್ಲಿದ್ದ ಭವ್ಯಸ್ಥಾನದಿಂದ ಎತ್ತಂಗಡಿ ಮಾಡಿದ ಕೊಪರ್ನಿಕಸ್, ತಿರುಗಿಸುವ ದೇವತೆಗಳಿಂದ ಗ್ರಹಗಳು ತಮ್ಮ ಗತಿಯಲ್ಲಿ ತಿರುಗುತ್ತವೆಯೆಂದು ನಂಬಿದ್ದರು. ಕೆಪ್ಲರ್ ಜಾತಕಗಳನ್ನು ಬರೆದರು; ನ್ಯೂಟನ್ ತನ್ನ ಗಣಿತಶಾಸ್ತ್ರದ ಪಾಂಡಿತ್ಯವನ್ನು ಡೇನಿಯಲ್ ಪುಸ್ತಕದಲ್ಲಿನ ಜೋತಿಷ್ಯದ ಭವಿಷ್ಯ ನುಡಿಗಳನ್ನು ಬಗೆಹರಿಸಲು ಉಪಯೋಗಿಸಿದರು. ರಾಯಲ್ ಸೊಸೈಟಿಯ ಸ್ಥಾಪಕರುಗಳಲ್ಲೊಬ್ಬರಾದ ಬಾಯ್ಲ್ ಲೋಹಗಳನ್ನು ಚಿನ್ನವನ್ನಾಗಿ ಪರಿವರ್ತಿಸುವ ಸಿದ್ಧಾಂತದಲ್ಲಿ ನಂಬಿಕೆಯಿಟ್ಟಿದ್ದರು; ಅಂತೆಯೇ ಡಿಫೆರೆನ್ಷಿಯಲ್ ಕ್ಯಾಲ್ಕುಲಸ್‌ನ ಸಹ-ಸಂಶೋಧಕರಾದ ನ್ಯೂಟನ್ ಮತ್ತು ಲೆಬ್ನೆಜ್ ಸಹ ಅಂತಹುದೇ ನಂಬಿಕೆಯಿಟ್ಟಿದ್ದರು. ಆಮ್ಲಜನಕ ಕಂಡುಹಿಡಿದ ಪ್ರೀಸ್ಟ್ಲಿ, ಅದರ ಮಹತ್ವವನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ, ಆ ಕಾಲದಲ್ಲಿ ವಿಜ್ಞಾನಿಗಳನ್ನು ಕಾಡಿಸುತ್ತಿದ್ದ ಫ್ಲೋಜಿಸ್ಟಾನ್ ದ್ರವದ ಬಗ್ಗೆ ಆಳವಾದ ನಂಬಿಕೆಯಿಟ್ಟಿದ್ದರು.

ಅತ್ಯಂತ ಆಧುನಿಕ ಕಾಲದಲ್ಲೂ ಸಹ ವಿಜ್ಞಾನಿಗಳು ಕೆಲವು ತತ್ವಗಳಿಗೆ ಅದೆಷ್ಟು ಅಂಟಿಕೊಂಡಿದ್ದಾರೆಂದರೆ, ಅದರ ಸತ್ಯಾಸತ್ಯತೆಯಲ್ಲಿ ಮೂಢನಂಬಿಕೆಯನ್ನು ಬೆಳೆಸಿಕೊಳ್ಳುವ ಸಂಭವವಿದೆ. ಈ ವಿಷಯದಲ್ಲಿ ಈಥರ್ ಬಗ್ಗೆಯಿದ್ದ ನಂಬಿಕೆ ಒಂದು ಉದಾಹರಣೆ. ಮತ್ತೆ, ಭಾರತದಲ್ಲಿ ಹಲವಾರು ವರ್ಷಗಳ ಕಾಲ ಜೀವಿಸಿದ್ದು ಪ್ರಖ್ಯಾತ "ರೋಪ್ ಟ್ರಿಕ್" ನಿಜವಾಗಿಯೂ ನಡೆಯುತ್ತದೆಯೆಂದು ನಮಗೆ ಭರವಸೆ ನೀಡುವ ಬುದ್ಧಿವಂತ ಪಾಶ್ಚಿಮಾತ್ಯನನ್ನು ನಾವೆಲ್ಲಾ ಭೇಟಿಯಾಗಿದ್ದೇವೆ. ಆತ ಭಾರತದ ಬಾಲಕ ನಿಜವಾಗಿಯೂ ಕಾಣೆಯಾಗುತ್ತಾನೆಂದು ಹೇಳುತ್ತಾನೆ. ಅಥವಾ ಅಂತಹ ನಂಬಲಸಾಧ್ಯವಾದ ಕಥೆಗಳಿಗೆ ಯಾರೂ ಪೂರ್ವದೇಶಗಳಿಗೆ ಹೋಗಬೇಕಾಗಿಲ್ಲ. ಅಪಾಯದ ಸೂಚನೆ ಬಂದಾಗ ಅದೆಷ್ಟು ಜನ ಏಣಿಯ ಕೆಳಗೆ ನಡೆಯುವುದನ್ನು, ಎಡಭುಜದ ಮೇಲೆ ಉಪ್ಪು ಹೊರುವುದನ್ನು ಮತ್ತು ಹಾಸ್ಯವಾಗಿ ಮರಮುಟ್ಟುವುದನ್ನು ತಪ್ಪಿಸುತ್ತಾರೆ? ಜನರು ಶುಭಚಿಹ್ನೆ ಮತ್ತು ತಾಯಿತ, ರಕ್ಷಾಯಂತ್ರ ಮತ್ತು ರಕ್ಷಾಬಂಧನಗಳಲ್ಲಿನ ಅರೆಬರೆ ನಂಬಿಕೆಗಳನ್ನು ಈಗಲೂ ಬಿಟ್ಟಿಲ್ಲ ಮತ್ತು ದುರಾದೃಷ್ಟ ಬರಬಹುದೆಂದು ಅವುಗಳಿಂದ ದೂರವಿರಲು ಇಚ್ಛಿಸುವುದಿಲ್ಲ. ಈಗಲೂ ಸಹ ಎಷ್ಟೋ ಜನರು ಅದೃಷ್ಟದ ವಸ್ತುಗಳನ್ನು ಬಿಡದೆ ಧರಿಸುತ್ತಾರೆ. ದುರಾದೃಷ್ಟ ಎರಗಿದಾಗ ತಮ್ಮ ಚಿಕ್ಕ ಕಪ್ಪು ಹಂದಿ ಅಥವಾ ಸ್ವಸ್ತಿಕಾ ಅಥವಾ ಆನೆ ಕೂದಲಿನ ಉಂಗುರ ಅಥವಾ ಶಾರ್ಕ್ ಮೀನಿನ ಹಲ್ಲುಗಳನ್ನು ಅವರು ತೊರೆಯುತ್ತಾರೆಯೇ? ಎಷ್ಟು ಜನ ಶುಕ್ರವಾರದಂದು ಆಭರಣಗಳನ್ನು ಧರಿಸಲು ನಿರಾಕರಿಸುತ್ತಾರೆ? ಎಷ್ಟು ಜನ ಜ್ಯೋತಿಷ್ಯಾಸ್ತ್ರದ ನಿಯಮ (juridical astrology)ಗಳನ್ನು ನಂಬುತ್ತಾರೆ? ಎಷ್ಟು ಜನ ತಮ್ಮ ಭವಿಷ್ಯವನ್ನು ಕೇಳಿ, ದುರಾದೃಷ್ಟದ ಸೂಚನೆಗಳು ಬಂದಾಗ ಸಂಪೂರ್ಣ ಚಿತ್ತಶಾಂತಿಯಿಂದಿರಬಲ್ಲರು? ಅಪನಂಬಿಕೆಯ ದರ್ಪ ಸ್ವಲ್ಪ ನರದೌರ್ಬಲ್ಯದ ಲಕ್ಷಣವಲ್ಲವೇ?

ಆದುದರಿಂದ, ಪ್ರಸಕ್ತ ಮಾನವನ ವಿಕಾಸದ ಹಂತದಲ್ಲಿ, ಕೇವಲ ವಿಜ್ಞಾನವೊಂದರಿಂದ ಅಥವಾ ಬರಿಯ ತರ್ಕದಿಂದ ಆತನನ್ನು ತೃಪ್ತಿಗೊಳಿಸಬಹುದೆಂದು ಭಾವಿಸಿ, ನಾವು ಖಂಡಿತವಾಗಿ ತಪ್ಪು ಮಾಡಬಾರದು. ನಾವು ಗತಕಾಲದ ಹೊದಿಕೆ ಹೊದ್ದಿರುವ ಸಂಕೀರ್ಣ ಜೀವಿಗಳು ಮತ್ತು ನಮ್ಮ ನಡತೆ ಕೇವಲ ಬೌದ್ಧಿಕ ವಿಚಾರದಿಂದ ಮಾತ್ರವೇ ನಿರ್ದೇಶಿತವಾಗಿದೆಯೆಂದು ನಾವು ನಿರೀಕ್ಷಿಸಬಾರದು. ಸಾಮಾನ್ಯ ಪ್ರಜ್ಞೆಯು ಸ್ಥಿರವಾದ ಮತ್ತು ವಿವೇಚನಾಯುಕ್ತ ಕ್ರಿಯೆಗಳಿಗಾಗಿ ಕೂಗಿ ಕರೆಯುತ್ತಿದೆ. ಆದರೆ ನಮ್ಮಲ್ಲಿ ಎಷ್ಟು ಜನರ ಸಾಮಾನ್ಯ ಪ್ರಜ್ಞೆ ಸ್ಥಿರವಾಗಿದೆ ಮತ್ತು ವಿವೇಚನಾಯುಕ್ತವಾಗಿದೆ?

ಒಂದು ಮುಖ್ಯವಾದ ಸಮುದಾಯದ ಪ್ರಶ್ನೆ ಎದ್ದಿದೆ. ನಮ್ಮಲ್ಲಿ ಪ್ರತಿಯೊಬ್ಬರೂ ತಮ್ಮ ನಿರ್ದಿಷ್ಟ ಪೂರ್ವಾಗ್ರಹಗಳಿಗೆ ಅನುಗುಣವಾಗಿ ನಡೆಯುವುದನ್ನು ಮುಂದುವರಿಸಿದರೆ, ನಾವೆಲ್ಲಾ ಶಾಂತಿಯುತವಾಗಿ ಒಟ್ಟಾಗಿ ಬಾಳುವುದು ಕಷ್ಟವಾಗುತ್ತದೆಯೆಂದು ಅರಿವಾಗುತ್ತದೆ. ನಾವು ಜೊತೆಜೊತೆಯಾಗಿ ಬಾಳಬೇಕಾದುದರಿಂದ, ಎಲ್ಲರೂ ಸ್ವೀಕರಿಸಿದ ಮತ್ತು ಒಪ್ಪಿಕೊಂಡ ನಂಬಿಕೆಗಳಿಂದ ಹುಟ್ಟುವ ನಡತೆಗಳ ಸಾಮಾನ್ಯ ಆಧಾರವನ್ನು ಕಂಡುಕೊಳ್ಳಬೇಕು. ಇಲ್ಲಿಯವರೆಗೂ, ವೈಜ್ಞಾನಿಕ ವಿಷಯಗಳ ಆಧಾರಿತ ನಂಬಿಕೆಯೇ ಸಾರ್ವತ್ರಿಕ ಒಪ್ಪಿಗೆಯನ್ನು ಪಡೆಯುವ ಸಾಧನವಾದ ಜ್ಞಾನವನ್ನು ಪ್ರವೇಶಿಸುವ ಏಕೈಕ ಮಾರ್ಗ.

ಜೊತೆಗೂಡಿ ಜೀವನ ನಡೆಸುವ ಕಷ್ಟಕರವಾದ ಕಾರ್ಯವನ್ನು ನಾವು ಸಾಮಾನ್ಯವಾಗಿ ಶಿಕ್ಷಣದ ಮೂಲಕ ಕಲಿಸುತ್ತೇವೆ. ಶಿಕ್ಷಣವು ತನ್ನ ಕಾರ್ಯವನ್ನು ನೆರವೇರಿಸಬೇಕಾದರೆ, ಅದು ವೈಜ್ಞಾನಿಕ ಮನೋಭಾವದಿಂದ ತುಂಬಿರಬೇಕು; ವಿಮರ್ಶಾತ್ಮಕ ಪರೀಕ್ಷೆಯ ಎದುರು ನಿಲ್ಲಲಾರದ ಕುರುಡು ನಂಬಿಕೆಗಳು ಮತ್ತು ಇತರ ನಂಬಿಕೆಗಳನ್ನು ತನ್ನ ಬೋಧನೆಗಳಿಂದ ತೆಗೆದು ಹಾಕಬೇಕು. ಮಗು ಕೇಳುವ ಪ್ರತಿಯೊಂದು ಪ್ರಶ್ನೆಯನ್ನೂ ಉತ್ತರಿಸಬೇಕು ಮತ್ತು ಉತ್ತರಕ್ಕೆ ಕೊಟ್ಟ ಸಾಕ್ಷ್ಯಗಳನ್ನು ಪರಿಶೀಲಿಸಲು ಅವಕಾಶ ಮಾಡಿಕೊಡಬೇಕು. ಮಗು ತನ್ನ ಜೀವನದುದ್ದಕ್ಕೂ ಸಾಕ್ಷ್ಯಗಳನ್ನು ಪರಿಶೀಲಿಸಲು ಅಭ್ಯಾಸ ಮಾಡಿಕೊಳ್ಳಬೇಕು. ಜ್ಞಾನದ ಅರ್ಥ ಮತ್ತು ಮಾನವನ ಪ್ರಗತಿಯ ಹುಡುಕಾಟದ ದೃಷ್ಟಿಯನ್ನು ಮೆಚ್ಚುವುದನ್ನು ಮಗುವಿಗೆ ಕಲಿಸಬೇಕು. ವಿಜ್ಞಾನದ ತಳಹದಿಯ ಮೇಲೆ ಶಿಕ್ಷಣದ ಕಟ್ಟಡ ಕಟ್ಟಬೇಕು. ಈಗ ಶಿಕ್ಷಕರು ಕಷ್ಟಕರವಾದ ಕೆಲಸವನ್ನು ಶ್ಲಾಘನೀಯವಾಗಿ ನಡೆಸುತ್ತಿಲ್ಲವೆಂದು ನಾನು ಹೇಳುತ್ತಿಲ್ಲ; ಆದರೆ ಮಗುವಿನ ವಾತಾವರಣದ ಮೂಢನಂಬಿಕೆಗಳಿಂದಾಗಿ ಹಲವು ಬಾರಿ ಅವರ ಪ್ರಯತ್ನಗಳು ಮಿತಿಗೊಂಡಿವೆ. ನಾನೀಗ ತಾಂತ್ರಿಕ ಶಿಕ್ಷಣದ ಬಗ್ಗೆ ಮಾತನಾಡುತ್ತಿಲ್ಲ. ನನ್ನ ವಾದ ಸಂಸ್ಕೃತಿಯಂತಹ ಮೂಲಭೂತ ವಿಷಯದ ಬಗ್ಗೆ. ನಾಗರೀಕತೆಯು ಹೆಚ್ಚು ಹೆಚ್ಚು ಯಂತ್ರಭರಿತ ಮತ್ತು ವೈಜ್ಞಾನಿಕವಾಗುತ್ತಿದ್ದಂತೆ, ಸಮುದಾಯ ಜೀವನ ವೈಜ್ಞಾನಿಕ ಪ್ರಕ್ರಿಯೆಗಳ ಸ್ಥಿರವಾದ ಕಾರ್ಯಚಟುವಟಿಕೆಗಳ ಮೇಲೆ ಹೆಚ್ಚು ಹೆಚ್ಚು ಅವಲಂಬಿತವಾಗುತ್ತಿದ್ದಂತೆ, ಶಿಕ್ಷಣದ ಕ್ರಮಗಳೂ ಅವುಗಳಿಗೆ ಸಮಾನಾಂತರವಾಗಿ ಬೆಳೆಯುವುದು ಅತ್ಯವಶ್ಯ. ಹೇಗೆ ಹಳೆಯ ಯಂತ್ರಗಳು ಕೆಲಸಕ್ಕೆ ಬಾರದಂತಾದ ಮೇಲೆ ತುಕಡಿಗೆ ಬಿಸಾಕುತ್ತೇವೆಯೋ, ಹಾಗೆಯೇ ತಳಬುಡವಿಲ್ಲದ ಮೂಢನಂಬಿಕೆಗಳನ್ನು ತಿರಸ್ಕರಿಸಲೇಬೇಕು ಮತ್ತು ಸಾಮಾಜಿಕ ಪರಂಪರೆಯಿಂದ ತೆಗೆದುಹಾಕಬೇಕು.

ಬಹುತರವಾಗಿ ಇದೊಂದು ಹಳೇ ಅಭ್ಯಾಸಗಳ ಪ್ರಶ್ನೆ. ನಾವು ಮುಂಚೆಯೇ ನಮ್ಮ ಮಕ್ಕಳಲ್ಲಿ ವಿಮರ್ಶಾತ್ಮಕ ಅಭ್ಯಾಸಗಳನ್ನು ಬೆಳೆಸದಿದ್ದರೆ, ಅರ್ಥಮಾಡಿಕೊಳ್ಳುವಂಥ ಎಲ್ಲಾ ಸಂದರ್ಭಗಳಲ್ಲೂ ಸಾಕ್ಷ್ಯಗಳನ್ನು ಕೇಳುವಂತೆ ನಾವು ಪ್ರೋತ್ಸಾಹಿಸದಿದ್ದರೆ, ಅವರು ಬಹುಬೇಗ ಸುಮ್ಮನೆ ನಂಬಿಬಿಡುವಂತಹ ಅಭ್ಯಾಸವನ್ನು ಅಳವಡಿಸಿಕೊಳ್ಳುತ್ತಾರೆ; ಅದರ ಬೆನ್ನಲ್ಲೇ 'ಎಲ್ಲವನ್ನೂ ನಂಬುವ ನಡವಳಿಕೆ' ಬರುತ್ತದೆ. ಹೀಗೆಯೇ ಮೂಢನಂಬಿಕೆಗಳು ಮುಂದುವರಿಯುತ್ತವೆ ಮತ್ತು ಸಾಂಪ್ರದಾಯಿಕ ಕಾರ್ಯಗಳ 'ಸಾಮಾನ್ಯ ದಾಸ್ತಾನಿ'ನಲ್ಲಿ

೩೨ನೇ ಪುಟಕ್ಕೆ...

# ಫ್ರೀ ಗಿಫ್ಟ್

ಮುಳಿಯ ರಾಘವಯ್ಯ

ಮನುಷ್ಯ ಈ ಭೂಲೋಕದ ಮೇಲೆ ಕಾಲೂರಿ ಲಕ್ಷಾಂತರ ವರ್ಷಗಳಾಗಿವೆ. ಈ ಅವಧಿಯಲ್ಲಿ ಅವನ ಬೆಳವಣಿಗೆಯನ್ನು ನಾನಾ ಯುಗಗಳಲ್ಲಿ ತಜ್ಞರು ವಿಂಗಡಿಸಿದ್ದಾರೆ. ಅಲ್ಲಲ್ಲ; ನಾನು ಹೇಳುತ್ತಿರುವುದು ನಮ್ಮ ಪುರಾಣ ಪ್ರಸಿದ್ಧವಾದ, ಕೃತ, ತ್ರೇತಾ, ದ್ವಾಪರ, ಕಲಿಯುಗಗಳನ್ನಲ್ಲ, ಅದು ಎಲ್ಲರಿಗೂ ತಿಳಿದ ವಿಷಯ. ಪ್ರಾಚೀನ ಶಿಲಾಯುಗ, ತಾಮ್ರ ಯುಗ, ಲೋಹ ಯುಗ, ಯಂತ್ರ ಯುಗ, ಹೀಗೆಲ್ಲ ಚರಿತ್ರಕಾರರು ಹೆಸರಿಸುತ್ತಾರಲ್ಲ, ಆ ಕಾಲಮಾನವನ್ನು. ೨೦ನೆಯ ಶತಮಾನದಿಂದೀಚಿನ ಕಾಲವನ್ನು ಜನರು ಬೇರೆ ಬೇರೆ ರೀತಿಯಲ್ಲಿ ಬಣ್ಣಿಸಿದ್ದಾರೆ. ಕೆಲವರು ಅದನ್ನು ವಿದ್ಯುನ್ಮಾನ ಯುಗ ಎಂದು ಕರೆದರೆ ಇನ್ನಿತರ ಆಧುನಿಕರು ಮಾಹಿತಿ ತಂತ್ರಜ್ಞಾನ ಯುಗ ಎನ್ನುತ್ತಾರೆ. ಪರಿಸರವಾದಿಗಳಲ್ಲಿ ಕೆಲವರು ಪ್ಲಾಸ್ಟಿಕ್ ಯುಗ ಎಂದು ವ್ಯಂಗ್ಯ ನುಡಿಯಬಹುದು. ಏನೇ ಇರಲಿ, ನಾನಂತೂ ಇಂದಿನ ಈ ದಿನಗಳನ್ನು 'ಫ್ರೀ ಗಿಫ್ಟ್ ಯುಗ' ಎಂದೇ ಖಚಿತವಾಗಿ ನಂಬಿದ್ದೇನೆ.

'ಫ್ರೀ ಗಿಫ್ಟ್' ಎಂದೊಡನೆಯೇ ಒಂದು ವಿಷಯ ನೆನಪಾಯಿತು ನೋಡಿ. ಇತ್ತೀಚಿನವರೆಗೆ ಮದುವೆ ಮುಂಜಿಗಳ ಆಮಂತ್ರಣ ಬಂದ ಕೂಡಲೇ ಮದು ಮಕ್ಕಳಿಗೆ, ಅಥವಾ ವಟುವಿಗೆ 'ಏನು ಉಡುಗೊರೆ ಕೊಡುವುದು' ಎನ್ನುವ ಜಿಜ್ಞಾಸೆ ನಮ್ಮಲ್ಲಿ ಶುರುವಾಗುತ್ತಿತ್ತು. ಏನಾದರೂ ಆಲಂಕಾರಿಕ ಸಾಮಾನನ್ನು ಕೊಡುವುದೇ, ಇಲ್ಲ, ಗೃಹೋಪಯೋಗಿ ವಸ್ತು ಕೊಡುವುದೇ ಅಥವಾ ಬಟ್ಟೆಬರೆಯೇ – ಹೀಗೆ ಮನೆಯಲ್ಲಿ ಒಬ್ಬೊಬ್ಬರದು ಒಂದೊಂದು ಅಭಿಪ್ರಾಯ. ಇಂತಹ ಉಡುಗೊರೆಗಳಿಂದ ಕೆಲವೊಮ್ಮೆ ಒಂದು ಸಮಸ್ಯೆ ಉದ್ಭವಿಸುವುದುಂಟು. ಏನು ಗೊತ್ತೆ? ನಮ್ಮ ದೊಡ್ಡ ಮಗಳ ಮದುವೆಯನ್ನೇ ತೆಗೆದುಕೊಳ್ಳಿ. ನೀವು ನಂಬುತ್ತೀರೋ ಇಲ್ಲವೋ – ಹನ್ನೆರಡು ಗೋಡೆ ಗಂಟೆ (wall clock)ಗಳು, ಮೂರೂವರೆ ಇಸ್ತ್ರಿ ಪೆಟ್ಟಿಗೆಗಳು (ಅರ್ಧ ಯಾಕೆ ಬರೆದೆ ಎಂದರೆ ಅದನ್ನು ಬಳಸಲು ಶುರು ಮಾಡಿದ ಕೂಡಲೆ, ಮನೆಯ ವಿದ್ಯುತ್ ಫ್ಯೂಸ್ ಹೋದದ್ದು ಮಾತ್ರವಲ್ಲ, ಅದರೊಳಗಿನ coil ಕೂಡ ಸುಟ್ಟುಹೋಯಿತು !), ಅರ್ಧ ಡಜನ್ ಟೀ ಸೆಟ್ಟುಗಳು, ಏಳು ಹೂದಾನಿಗಳು, ಇನ್ನೂ ಏನೇನೋ ಎಲ್ಲ ಬಂದಿದ್ದವು. ನಮ್ಮ ಮಗಳು, ಅಳಿಯ ಇವನ್ನೆಲ್ಲಾ ತಮ್ಮೊಡನೆ ಕೊಂಡೊಯ್ಯಲು ನಿರಾಕರಿಸಿದರು. ''ಇವನ್ನು ನೀವೇ ಇಟ್ಟುಕೊಂಡುಬಿಡಿ, ನಮಗೆ ಬೇಡ'' ಎಂದು ಮಗಳಂತೂ ಖಡಾಖಂಡಿತವಾಗಿ ಹೇಳಿ ಹೋಗಿದ್ದಾಳೆ. ನಾವಾದರೂ ಏನು ಮಾಡುವುದು. ಸಾಮಾನುಗಳೇನೋ ಚೆನ್ನಾಗಿಯೇ ಇದ್ದವು. ಹೀಗೆ ಯಾವುದಾದರೂ ಮದುವೆಯ, ಮುಂಜಿಯ ಇಲ್ಲವೇ ಹುಟ್ಟಿದ ಹಬ್ಬದಂದು ಉಡುಗೊರೆಯ ರೂಪದಲ್ಲಿ ಕೊಟ್ಟುಬಿಡಬಹುದಿತ್ತು. ಕೆಲಷನ್ನು ಕೊಟ್ಟೂಬಿಟ್ಟೆವು ಅನ್ನಿ. ಆದರೆ ಅವುಗಳಲ್ಲಿ ಹೆಚ್ಚಿನವುಗಳ ಮೇಲೆ ಕೊಟ್ಟವರ ಹೆಸರು, ತಾರೀಖು ಇತ್ಯಾದಿ ವಿವರಗಳನ್ನೆಲ್ಲಾ ಅಚ್ಚು ಕೊರೆದಿದೆಯಲ್ಲಾ ! ಹಾಗಾಗಿ ಎಲ್ಲವನ್ನು ಕಟ್ಟಿ ಅಟ್ಟದ ಮೇಲೆ ಇಟ್ಟಿದ್ದೇನೆ. ಮಗಳು ಎಂದಾದರೂ ಮನಸ್ಸು ಬದಲಾಯಿಸಿದರೆ ಅವನ್ನು ಅವಳಿಗೇ ಕಳುಹಿಸಿಬಿಡೋಣ ಎಂದುಕೊಂಡಿದ್ದೇನೆ. ನಮ್ಮಲ್ಲಿ ಈ ಉಡುಗೊರೆ ವಿಷಯದಲ್ಲಿ ಕೊನೆಗೆ ಏನೂ ಇತ್ಯರ್ಥವಾಗದೆ 'ಕವರ್' ಕೊಡುವುದು ಎಂದು ಎಷ್ಟೋ ಸಲ ನಿರ್ಧಾರವಾಗುವುದುಂಟು. ಇದೇನಪ್ಪಾ 'ಕವರ್' ಎಂದರೆ ಎಂದು ನೀವು ಆಶ್ಚರ್ಯಪಡಬಹುದು. 'ಕವರ್' ಅಂದರೆ ಖಾಲಿ ಲಕೋಟೆ ಅಲ್ಲ, ಅದರೊಳಗೆ ಯಥಾಶಕ್ತಿ ನೋಟುಗಳನ್ನಿಟ್ಟು ಕೊಡುವುದು. ಕವರಿನೊಳಗಿಡದೆ ಹಾಗೆಯೇ ಕೊಟ್ಟರೆ ನಾವು ಎಷ್ಟು ಕೊಡುತ್ತಾ ಇದ್ದೇವೆ, ನಮ್ಮ ಬೆಲೆ ಎಷ್ಟು ಎಂದು ಇನ್ನೊಬ್ಬರಿಗೆ ತಿಳಿದುಬಿಡುತ್ತದಲ್ಲ ! ಅದಕ್ಕೇ ನೋಟುಗಳನ್ನು ಆಕರ್ಷಕವಾದ ಕವರಿನೊಳಗಿಟ್ಟು, ಅಂದವಾದ ಒಕ್ಕಣೆಯನ್ನು ಹೊರಗೆ ಬರೆಯುವುದು. ಅದರ ಒಳಗಿನ ಗುಟ್ಟು ಅವರೇ ಬಲ್ಲ. ಯಾಕೆ ಹೇಳಿದೆ ಅಂದರೆ, ನಮ್ಮ ಮಗನ ಮುಂಜಿಯಲ್ಲಿ ಹಾಗೊಂದು ಖಾಲಿ 'ಕವರ್' ಉಡುಗೊರೆಯೂ ಬಂದಿತ್ತು! ಈಗೀಗ ಬ್ಯಾಂಕುಗಳು ನಮ್ಮ ಕೆಲಸವನ್ನು ಇನ್ನೂ ಸುಲಭ ಮಾಡಲು 'ಗಿಫ್ಟ್ ಚೆಕ್' ಎನ್ನುವ ಒಂದು ಯೋಜನೆಯನ್ನು ರೂಪಿಸಿಕೊಂಡಿದ್ದಾರೆ.

ಇದೆಲ್ಲಾ ಜಂಜಾಟವೇ ಬೇಡ ಎಂದು ಈಗೀಗ ಆಧುನಿಕರು ಕೆಲವರು ಆಮಂತ್ರಣ ಪತ್ರಿಕೆಗಳಲ್ಲಿ ಕೆಳಗೆ – ಸಣ್ಣ ಅಕ್ಷರಗಳಲ್ಲಿ – 'ಆಶೀರ್ವಾದವೇ ಉಡುಗೊರೆ' ಅಥವಾ 'No presents please' ಎಂದು ಮುದ್ರಿಸಲಾರಂಭಿಸಿದ್ದಾರೆ. ಆದರೆ ಇದರಿಂದಲೂ ಕೆಲವೊಮ್ಮೆ ಮುಜುಗರವಾಗುವುದುಂಟು. ಹೇಗೆ ಎಂದು ಹೇಳುತ್ತೇನೆ, ಕೇಳಿ. ಶುರುವಿನ ಸಲ ಅಂತಹ ಆಮಂತ್ರಣ ಪತ್ರಿಕೆಯೊಂದು ಬಂದ ಕೂಡಲೆ ನನಗೆ ಬಹಳ ಸಂತೋಷವಾಯಿತು; ಯಾಕೆಂದರೆ ಉಡುಗೊರೆಯ ವಿಷಯದಲ್ಲಿ ತಲೆ ಕೆಡಿಸಿಕೊಳ್ಳಬೇಕಿಲ್ಲವಲ್ಲಾ ಎಂದು. ಮದುವೆಗೆ ಹೊರಡುವ ಹೊತ್ತು ನನ್ನಾಕೆ ''ಹಾಗೆಯೇ ಬರೀ ಕೈಯಲ್ಲಿ ಹೇಗ್ರೀ ಮದುವೆಗೆ ಹೋಗೋದು'' ಎಂದು ಆಕ್ಷೇಪಣೆ ಎತ್ತಿದಳು. 'ಪ್ರೆಸೆಂಟ್ ಬೇಡ' ಅಂತ ಅವರೇ ಬರೆದಿದ್ದಾರಲ್ಲ ಎಂದು ಅವಳ ಆಕ್ಷೇಪಣೆಯನ್ನು ತಳ್ಳಿಹಾಕಿ ಕೈಬೀಸಿಕೊಂಡು ಮದುವೆಗೆ ಹೊರಟೇಬಿಟ್ಟೆ. ನಿರ್ವಾಹವಿಲ್ಲದೆ ಅವಳೂ ಹಿಂಬಾಲಿಸಿದಳು. ಮದುವೆ ಮನೆಗೆ ತಲುಪುವಾಗ ನನಗೊಂದು ಆಶ್ಚರ್ಯ ಕಾದಿತ್ತು. ನಮ್ಮನ್ನು ಹೊರತಾಗಿ ಉಳಿದ ಅತಿಥಿಗಳೆಲ್ಲರೂ, ಪೈಪೋಟಿ ಮಾಡುವಂತೆ ಒಬ್ಬರಿಂದ ಇನ್ನೊಬ್ಬರು ದೊಡ್ಡ ದೊಡ್ಡ ಉಡುಗೊರೆಗಳ ಪ್ಯಾಕೆಟ್‌ಗಳನ್ನು ಅಂದವಾದ, ಬಣ್ಣ ಬಣ್ಣದ ಕಾಗದಗಳಲ್ಲಿ ಅಲಂಕರಿಸಿ ತಂದಿದ್ದರು. ಮದುಮಕ್ಕಳೂ, 'ಆಶೀರ್ವಾದ'ದೊಡನೆ 'ಉಡುಗೊರೆಯನ್ನೂ' ಸಂತೋಷದಿಂದ ಸ್ವೀಕರಿಸುತ್ತಿದ್ದರು. ನನಗೋ ಪೇಚಾಟ. ಹೇಗೆ ಈ ಪರಿಸ್ಥಿತಿಯಿಂದ ಪಾರಾಗುವುದು ಎನ್ನುವ ಯೋಚನೆಯೊಂದು ಕಡೆ, ನನ್ನಾಕೆಯ 'ನಾನಾಗಲೇ ಹೇಳಿದ್ನೆ ನನ್ನ ಮಾತೆಲ್ಲಿ ಕೇಳ್ತೀರಿ' ಎನ್ನುವ ಮುಖ ಮುದ್ರೆ ಇನ್ನೊಂದು ಕಡೆ. ಅಂತೂ ಕೊನೆಗೆ, ಪಕ್ಕದ ಬೀದಿಗೆ ಯಾರಿಗೂ ಗೊತ್ತಾಗದಂತೆ ಹೋಗಿ ಏನೋ ಒಂದು 'fancy' ಸಾಮಾನನ್ನು ಅರ್ಜೆಂಟಾಗಿ ತಂದು ಬಿಕ್ಕಟ್ಟಿನಿಂದ ಪಾರಾದೆ ಅನ್ನಿ.

'Once bitten, twice shy' ಎನ್ನುತ್ತಾರಲ್ಲ, ಹಾಗೆ ಮುಂದಿನ ಸಲ 'ಉಡುಗೊರೆ ನಿಷೇಧಿತ' ಆಮಂತ್ರಣ ಬಂದಾಗ ನಾನು 'ಬುದ್ಧಿವಂತ'ನಾಗಿಬಿಟ್ಟಿದ್ದೆ. ಮದುವೆಗೆ ಹೊರಡುವ ಮುನ್ನಿನ ದಿನವೇ ಮಾರ್ಕೆಟ್ಟಿಗೆ ಹೋಗಿ ಒಂದು ಅಂದವಾದ, ದೊಡ್ಡ ಹೂದಾನಿಯನ್ನು ಖರೀದಿಸಿ, ಅಂಗಡಿಯಲ್ಲೇ ನಮ್ಮ ಹಾಗೂ ಮದುಮಕ್ಕಳ ಪೂರ್ವೋತ್ತರಗಳನ್ನೆಲ್ಲಾ ಅದರ ಮೇಲೆ ಅಚ್ಚೊತ್ತಿಸಿ, ಅದನ್ನು ಅಲ್ಲಿಯೇ ಮಿರಿಮಿರಿ ಕಾಗದದಲ್ಲಿ ಸುತ್ತಿಸಿ, ಮೇಲೆ With best



compliments ಕಾರ್ಡನ್ನೂ ಅಂಟಿಸಿ ಮನೆಗೆ ತಂದೆ. ಮರುದಿನ ಆಟೋರಿಕ್ಷಾದಲ್ಲಿ ಕುಳಿತು ಮದುವೆಯ ಮಂಟಪ ತಲುಪಿದಾಗ ನನಗೆ ಪುನಃ ಆಘಾತ ಕಾದಿತ್ತು. ನಮ್ಮ ಹೊರತಾಗಿ ಯಾರ ಕೈಯಲ್ಲೂ ಏನೂ ಇಲ್ಲ! ಅಷ್ಟು ಮಾತ್ರವಲ್ಲ, ವರ ಹಾಗೂ ಅವನ ತಂದೆ ತಾಯಿ ನಾವು ತಂದ ಉಡುಗೊರೆಯನ್ನು ಸ್ವೀಕರಿಸಲು ಸುತಾರಂ ಒಪ್ಪಿಕೊಳ್ಳಲಿಲ್ಲ. ಪೆಚ್ಚುಮೋರೆ ಹಾಕಿಕೊಂಡು ನಾವು ಮದುವೆಯಿಂದ ಆತಿಥ್ಯ ಸ್ವೀಕರಿಸಿ ವಾಪಾಸಾಗಬೇಕಾಯಿತು. ನಂಬದಿದ್ದರೆ, ನಮ್ಮ ಮನೆಗೆ ಬಂದು ನೋಡಿ. ಹೂದಾನಿ ಹಾಗೇ ಇದೆ. ಮದುಮಕ್ಕಳ ಹೆಸರುಗಳನ್ನೂ ಮದುವೆಯ ದಿನಾಂಕವನ್ನೂ ಅದರ ಮೇಲೆ ಮೊದಲೇ ಬರೆಸಿದ್ದರಿಂದ ಅದನ್ನು ಇನ್ನು ಯಾರಿಗೂ ಕೊಡುವ ಹಾಗೂ ಇಲ್ಲ. ಆದುದರಿಂದ ಈ ಅನುಭವ ಆದ ಮೇಲೆ ಈಗ 'ಅನ್ಯಥಾ ಶರಣಂ ನಾಸ್ತಿ, ತ್ವಮೇವ ಶರಣಂ ಮಮ' ಎಂದು 'ಕವರಿಗೇ' ಶರಣು ಹೋಗಿದ್ದೇನೆ.

ಏನೋ ಹೇಳಲು ಹೋಗಿ ಇನ್ನೇನೋ ರಾಮಾಯಣ ಶುರು ಮಾಡಿದೆ. ಇರಲಿ. ನಾನು ಹೇಳಲು ಹೊರಟದ್ದು ಈ 'ಫ್ರೀ ಗಿಫ್ಟ್'ನ ಬಗ್ಗೆ. ಹಿಂದೆ ಎಲ್ಲ, ಅಂಗಡಿಗಳಲ್ಲಿ ರಿಯಾಯಿತಿ ಮಾರಾಟ ಯಾವಾಗಲಾದರೂ ಒಮ್ಮೊಮ್ಮೆ ವಿಶೇಷ ಸಂದರ್ಭಗಳಲ್ಲಿ ಮಾತ್ರ ಇರುತ್ತಾ ಇತ್ತು. ಸಾಮಾನುಗಳ ದರದಲ್ಲಿ, ಅದರಲ್ಲೂ ಬಟ್ಟೆಬರೆಗಳ ದರದಲ್ಲಿ ೫%, ೧೦%, ೧೫% ಕಡಿತ, ಹೀಗೆ. ಖಾದಿ ಮತ್ತು ಗ್ರಾಮೋದ್ಯೋಗ ಉತ್ಪನ್ನಗಳನ್ನು ಜನಪ್ರಿಯಗೊಳಿಸುವ ಉದ್ದೇಶದಿಂದ ಅವುಗಳ ಮೇಲೆ ದರ ಕಡಿತ ಯಾವತ್ತೂ ಇದ್ದದ್ದೇ. ಅಮೆರಿಕದಲ್ಲಿರುವ ಹಾಗೆ ಮುಂಬಯಿಯಲ್ಲಿ ಕೂಡಾ ಕೆಲವು ಅಂಗಡಿಗಳಲ್ಲಿ ಖಾಯಂ ಆಗಿ ಕಡಿತದ ಮಾರಾಟವಿರುತ್ತದೆ. ಈ ಮಧ್ಯೆ ಕೆಲವು ಸಮಯ ವಿನಿಮಯ ಮಾರಾಟ (exchange offers) ಬಹಳ ಜನಪ್ರಿಯವಾಗಿತ್ತು. ಈಗಲೂ ಇದೆ. ಒಂದೆಡೆ ಹಳೆಯ ಟಿ.ವಿ. (ಕಪ್ಪು-ಬಿಳುಪು, ಇಲ್ಲವೆ ಬಣ್ಣದ) ಕೊಟ್ಟು ಅತ್ಯಾಧುನಿಕ ಬಹು ಚ್ಯಾನೆಲ್ ಟಿ. ವಿ. ಖರೀದಿಸಬಹುದಾದರೆ, ಇನ್ನೊಂದೆಡೆ ಹಳೆಯದಾದ, ಆದರೆ ಕೆಲಸ ಮಾಡುತ್ತಿರುವ ರೆಫ್ರಿಜರೇಟರ್‌ನ ಬದಲಿಗೆ ಸಿಗುವ ಅತ್ಯಾಧುನಿಕ, ಹಿಮರಹಿತ (frost free) ರೆಫ್ರಿಜರೇಟರ್‌ನ ಆಕರ್ಷಣೆ. ಕೆಲಸ ಮಾಡುತ್ತಿರಲಿ, ಇಲ್ಲವೆ ಕೆಟ್ಟು ಹೋಗಿರಲಿ, ಹೇಗಾದರೂ ಇರಲಿ, ಹಳೆಯ ಇಸ್ತ್ರಿ ಪೆಟ್ಟಿಗೆ ಕೊಟ್ಟರೆ ನವೀನವಾದ ಬಾಷ್ಪಯುಕ್ತ ಇಸ್ತ್ರಿ ಪೆಟ್ಟಿಗೆ (steam iron) ಲಭ್ಯ ಎನ್ನುವ ಆಮಿಷ ಮತ್ತೊಂದೆಡೆ. ಹೀಗೆ ಇನ್ನೂ ಏನೇನೋ. ಇತ್ತೀಚೆಗೆ, ಸ್ಕೂಟರ್, ಬೈಕ್, ಕಾರು, ಬಸ್ಸು, ಲಾರಿ ಎಲ್ಲವಕ್ಕೂ ವಿನಿಮಯ ಯೋಜನೆಗಳು ಬಂದಿವೆ. 'ಫಾರಿನ್'ನಲ್ಲಿ ಏರೋಪ್ಲೇನುಗಳಿಗೂ ಇಂತಹ ಯೋಜನೆಗಳಿವೆಯಂತೆ. ಎಷ್ಟು ನಿಜವೋ, ಎಷ್ಟು ಸುಳ್ಳೋ ಗೊತ್ತಿಲ್ಲ. ಆದರೆ ಹೆಚ್ಚುತ್ತಿರುವ ವಿಮಾನ ಅಪಘಾತಗಳನ್ನು ನೋಡಿದರೆ ಈ ಸುದ್ದಿ ನಿಜವಿರಬಹುದೇನೋ ಎನ್ನುವ ಸಂಶಯ ಉಂಟಾಗುತ್ತದೆ. ಇವೆಲ್ಲವಕ್ಕೆ, ಹೊಸ ವಸ್ತುವಿನ ದರದಿಂದ ಸ್ವಲ್ಪವೇ ಕಡಿಮೆ ಬೆಲೆಯನ್ನು ತೆರಬೇಕಾಗುತ್ತದೆ ಎನ್ನುವುದನ್ನೂ ಮರೆಯಬಾರದು.

ದರದಲ್ಲಿ ರಿಯಾಯಿತಿ ತೋರಿಸುವ ಬದಲು ಈಗ ಕೆಲವು ವರ್ಷಗಳಿಂದ ಅಂಗಡಿ ಗಳಲ್ಲಿ ಕೊಳ್ಳುವ ಸಾಮಾನುಗಳೊಂದಿಗೆ ಏನಾದರೊಂದು 'ಫ್ರೀ ಗಿಫ್ಟ್' ಅಥವಾ 'ಉಚಿತ ಬಹುಮಾನ' ಕೊಡುವ ಯೋಜನೆ ಬಹಳ ಜನಪ್ರಿಯವಾಗುತ್ತಾ ಇದೆ. ಈ ಮೊದಲೂ ಈ ಪದ್ಧತಿ ಅಪರೂಪಕ್ಕೆ ಒಮ್ಮೊಮ್ಮೆ ಇರುತ್ತಿತ್ತು. ಚಾ ಪುಡಿಯ ಜೊತೆಗೆ ಚಮಚ, ಸಾಬೂನಿನ ಜೊತೆಗೆ ಸಾಬೂನು ಪೆಟ್ಟಿಗೆ ಇತ್ಯಾದಿ. ಆದರೆ ಈಗ ಈ ಪರಿಪಾಠ ಇನ್ನೂ ವ್ಯಾಪಕವಾಗಿ ಬೆಳೆದಿದೆ. ಈಗ 'ಫ್ರೀ ಗಿಫ್ಟ್' ಜೊತೆ ಇರದ ವಸ್ತು ಅಂಗಡಿಗಳಲ್ಲಿ ಇಲ್ಲವೇ ಇಲ್ಲ ಎಂದರೆ ಉತ್ಪ್ರೇಕ್ಷೆಯಲ್ಲ. ಚಾಪುಡಿಯ ಒಟ್ಟಿಗೆ ಸಕ್ಕರೆ, ಕಾಫಿ ಪುಡಿ ಕೊಂಡರೆ ಒಟ್ಟಿಗೆ ಹಾಲಿನ ಪುಡಿ, ಗೋಧಿ ಹಿಟ್ಟಿನ ಜೊತೆಗೆ ಉಪ್ಪು, ಸಾಬೂನು ಪುಡಿಯ ಒಟ್ಟಿಗೆ ಬಕೆಟ್, ಟೂಥ್ ಪೇಸ್ಟಿನೊಡನೆ ಬ್ರಶ್ಶು, ದೊಡ್ಡ ಶಾಂಪೂ ಬಾಟಲಿನೊಡನೆ ಮರಿ ಶಾಂಪೂ ಬಾಟಲ್, ಮ್ಯೂಸಿಕ್ ಸಿಸ್ಟಂ ಕೊಂಡರೆ ಜೊತೆಗೆ ಉಚಿತ ಕ್ಯಾಸೆಟ್‌ಗಳು ಇಲ್ಲವೆ ಸೀಡಿ (CD) ಗಳು, ಕಾರು ಕೊಂಡರೆ ಉಚಿತ ಸ್ಟೀರಿಯೋ ಸಿಸ್ಟಂ, ಒಂದೇ ಎರಡೇ, ಹತ್ತು ಹಲವು ವಿಧವಾದ ಇನಾಮುಗಳು.

ಈ ಇನಾಮುಗಳನ್ನು ಕೊಡುವ ರೀತಿಯಲ್ಲಿಯೂ ವೈವಿಧ್ಯವಿದೆ. ಕೆಲವು ಇನಾಮುಗಳು ಸೀದಾ ಸಾದಾ. ಅಂದರೆ ಸಾಮಾನು ಕೊಳ್ಳುವಾಗ ಅದರ ಜೊತೆಯಲ್ಲಿಯೇ ವ್ಯಾಪಾರಿ ಇನಾಮನ್ನೂ ಕೊಟ್ಟುಬಿಡುತ್ತಾನೆ. ಇನ್ನು ಕೆಲವು ಸಾಮಾನುಗಳ ಪೆಟ್ಟಿಗೆಯೊಳಗೆ ಕೂಪನ್ ಇರುತ್ತದೆ. ಒಂದೋ, ಎರಡೋ, ಮೂರೋ ಅಥವಾ ಇನ್ನೂ ಹೆಚ್ಚು ಕೂಪನ್ನುಗಳನ್ನು ಒಟ್ಟು ಸೇರಿಸಿ ಕಂಪೆನಿಯ ವಿಳಾಸಕ್ಕೆ ಕಳುಹಿಸಿ ಇನಾಮು ಪಡೆದುಕೊಳ್ಳಬೇಕು. ಇನ್ನು ಕೆಲವು ಇನ್ನೂ ವಿಚಿತ್ರ. ಕೂಪನ್‌ಗಳಲ್ಲಿ ಯಾವುದೋ ಒಂದು ವಸ್ತುವಿನ ಹೆಸರು ಬರೆಯಲ್ಪಟ್ಟು ಅದರ ಮೇಲೆ ಒಂದು ಮಚ್ಚೆಯಿರುತ್ತದೆ. ಅದನ್ನು ಉಗುರಿನಿಂದ ಗೀಚಿ ತೆಗೆದರೆ ನಿಮ್ಮ ಅದೃಷ್ಟದ ವಸ್ತುವಿನ ಹೆಸರಿರುತ್ತದೆ. ಹೀಗೆ ಶುರು ಶುರುವಿಗೆ ಇನಾಮಿನ ಮೌಲ್ಯ ಮುಖ್ಯ ವಸ್ತುವಿನ ಬೆಲೆಗಿಂತ ಕಡಿಮೆ ಇರುತ್ತಿತ್ತು, ಸಾಬೂನು ಪುಡಿಯ ಜೊತೆಯ ಚಮಚದ ಹಾಗೆ. ನಂತರ ಎರಡರ ಮೌಲ್ಯವೂ ಹೆಚ್ಚು ಕಡಿಮೆ ಒಂದೇ ಆಗಲಾರಂಭವಾಯಿತು. ಒಂದು ಸೀರೆ ಕೊಂಡರೆ ಇನ್ನೊಂದು ಉಚಿತವಾಗಿರುವಂತೆ. ಆದರೆ ಈಗೀಗ ಕೆಲವೊಮ್ಮೆ ಇನಾಮಿನ ಮೌಲ್ಯ ಹೆಚ್ಚಿ ಮುಖ್ಯ ವಸ್ತುವಿನ ಎಷ್ಟೋ ಪಾಲು ಆಗಿದೆ. ಚಾ ಪುಡಿಯ ಪೊಟ್ಟಣದೊಳಗೆ ಚಿನ್ನದ ನಾಣ್ಯ ! ಸಾಬೂನುಪುಡಿಯೊಳಗೆ ವಜ್ರದ ಹರಳು ಇತ್ಯಾದಿ. ಅಂದರೆ ಎಲ್ಲ ಪೊಟ್ಟಣಗಳ ಒಳಗೆ ಇರುವುದಿಲ್ಲ. ಯಾವುದೋ ಒಂದರೊಳಗೆ ಇರಬಹುದು. ನೀವು ಅದೃಷ್ಟಶಾಲಿಗಳಾಗಿದ್ದರೆ ನೀವು ಇನ್ನೊಮ್ಮೆ ಚಾ ಪುಡಿ ಖರೀದಿಸುವಾಗ ನಿಮ್ಮದಾಗಬಹುದು. Best of Luck. ಇದೇ ವಿಷಯವಾಗಿ ಸ್ವಲ್ಪ ಸಮಯದ ಹಿಂದೆ ಅಂತಾರಾಷ್ಟ್ರೀಯ ಪ್ರಖ್ಯಾತಿಯ ವ್ಯಂಗ್ಯ ಚಿತ್ರಕಾರ ಆರ್. ಕೆ. ಲಕ್ಷ್ಮಣ್ ಅವರು ಬರೆದ ಒಂದು ವ್ಯಂಗ್ಯ ಚಿತ್ರ, 'ಟೈಮ್ಸ್ ಆಫ್ ಇಂಡಿಯಾ' ದಿನಪತ್ರಿಕೆಯಲ್ಲಿ ಪ್ರಕಟವಾಗಿತ್ತು. ರಸ್ತೆಯ ಬದಿಯ ಫಲಕದಲ್ಲೊಂದು ಜಾಹೀರಾತು – 'ನಮ್ಮ .... ಬ್ರ್ಯಾಂಡ್ ಟೂಥ್ ಪೇಸ್ಟ್ ಕೊಂಡರೆ ಒಂದು ಬಣ್ಣದ ಟಿ.ವಿ. ಉಚಿತ' ಎಂದು. ಎಂತಹ ಕಾಲ ಬಂತು ನೋಡಿ. ಆದರೆ ಒಂದು ವಿಷಯ ಇನ್ನೂ ಅರ್ಥ ಆಗಲಿಲ್ಲ. ಈ 'ಗಿಫ್ಟ್'ನ ಜೊತೆಗೆ 'ಫ್ರೀ' ಎನ್ನುವ ವಿಶೇಷಣ ಯಾಕೆ ? 'ಗಿಫ್ಟ್' ಯಾವತ್ತಿದ್ದರೂ 'ಫ್ರೀ' ಅಲ್ಲವೆ ? ಬೆಲೆ ಕೊಟ್ಟರೆ ಅದು 'ಗಿಫ್ಟ್ - ಇನಾಮು' ಆಗುತ್ತದೆಯೇ ? ಈ ಪ್ರಶ್ನೆಗೆ ಉತ್ತರ ನಿಮಗೇನಾದರೂ ಗೊತ್ತಿದ್ದರೆ ನನಗೂ ತಿಳಿಸಿಬಿಡಿ.

ಅದು ಹೇಗಾದರೂ ಇರಲಿ. ನನಗಂತೂ 'ಫ್ರೀ ಗಿಫ್ಟ್'ನ ಗೀಳು ಮೊದಲಿನಿಂದಲೇ ಇದ್ದದ್ದೆ. ಯಾವ ಗಿಫ್ಟ್ ಇದೆ ಎಂದು ನೋಡಿ ಸಾಮಾನು ಕೊಳ್ಳುವುದರಲ್ಲಿ ನಾನು ನಿಸ್ಸೀಮ. ನಂಬಿದರೆ ನಂಬಿ, ಬಿಟ್ಟರೆ ಬಿಡಿ. ನಮ್ಮ ಮನೆಯಲ್ಲಿರುವ ಅರ್ಧಕ್ಕರ್ಧ ಸಾಮಾನುಗಳು ಹೀಗೆ 'ಫ್ರೀ ಗಿಫ್ಟ್' ಆಗಿಯೇ ಸಿಕ್ಕಿದ್ದು. ಈ ನನ್ನ ಹವ್ಯಾಸದಿಂದ ಮನೆಯಲ್ಲಿ ಆಗಿಂದಾಗ ಕುರುಕ್ಷೇತ್ರ ಶುರುವಾಗುವುದು ಇದ್ದದ್ದೇ. ಒಮ್ಮೆ ಏನಾಯಿತು ಗೊತ್ತೇ ? ಏನೋ ಕೆಲಸದ ನಿಮಿತ್ತ ಬೆಂಗಳೂರಿಗೆ ಹೋಗಿದ್ದೆ. ಕಮರ್ಷಿಯಲ್ ರಸ್ತೆಯಲ್ಲಿ ಹೋಗುತ್ತಿದ್ದಾಗ ಜವುಳಿ ಅಂಗಡಿಯೊಂದರ ಹೊರಗೆ ದೊಡ್ಡ ಬೋರ್ಡು. ಒಳಗೆ ಎಳ್ಳಿನ ಕಾಳು ಹಾಕಲೂ ಎಡೆಯಿಲ್ಲದಂತಹ ಜನ ಜಂಗುಳಿ. ಬೋರ್ಡಿನ ಮೇಲೆ ಬಣ್ಣ ಬಣ್ಣದ ದೊಡ್ಡ ದೊಡ್ಡ ಅಕ್ಷರಗಳಲ್ಲಿ ಬರೆದಿತ್ತು – 'ನೂರು ರೂಪಾಯಿಗೆ ಒಂದು ಇಂಪೋರ್ಟೆಡ್ ಸೀರೆ – ಎರಡು ಕೊಂಡರೆ ಇನ್ನೊಂದು ಫ್ರೀ' ಎಂದು. ಮತ್ತೊಂದೇ ವಾರದಲ್ಲಿ ನನ್ನ ಹೆಂಡತಿಯ ಜನ್ಮ ದಿನ ಬರುತ್ತಿತ್ತು, ಹೇಗೂ ಸೀರೆ ತೆಗೆಯಲೇಬೇಕು. ಇಂತಹ ಸದವಕಾಶವನ್ನು ಬಿಡುವ ದಡ್ಡನೇ ನಾನು ! ತಕ್ಷಣವೇ ಅಂಗಡಿಯನ್ನು ಪ್ರವೇಶಿಸಿ, ಆ ನೂಕು ನುಗ್ಗಲಿನಲ್ಲಿ ಹೇಗೋ ಎಡೆ ಮಾಡಿಕೊಂಡು ಸೇಲ್ಸ್ ಕೌಂಟರ್ ತಲುಪಿದೆ. ಅಲ್ಲೊಬ್ಬಳು ಸುಂದರಾಂಗಿ ಸೇಲ್ಸ್ ಗರ್ಲ್ ನನ್ನನ್ನು ಕಂಡೊಡನೆಯೇ ''ಏನು ಬೇಕು ಸಾರ್ ?'' ಎನ್ನುತ್ತಾ ಬಂದು ವಿಚಾರಿಸಿದಳು. ನಾನು ಇಂಪೋರ್ಟೆಡ್ ಸೀರೆಗಳನ್ನು ತೋರಿಸಲು ಹೇಳಿದೆ. ಕೂಡಲೇ ನನ್ನ ಮುಂದೆ ಸೀರೆಗಳ ಒಂದು ರಾಶಿ ಪ್ರತ್ಯಕ್ಷವಾಯಿತು. ಬಣ್ಣ ಬಣ್ಣದ, ವಿಧ ವಿಧವಾದ ಡಿಸೈನ್‌ಗಳ ನೂರಾರು ಸೀರೆಗಳು. ಯಾವುದನ್ನು ಕೊಳ್ಳುವುದು; ಯಾವುದನ್ನು ಬಿಡುವುದು – ಎಂದು ಗೊತ್ತಾಗುತ್ತಿರಲಿಲ್ಲ. ಅಂತೂ ಇಂತೂ ಕೆಂಪು ಮತ್ತು ನೀಲಿ ಬಣ್ಣದ ಎರಡು ಸೀರೆಗಳನ್ನು ಆರಿಸಿದೆ. ನನ್ನ ಆಯ್ಕೆಯನ್ನು ನೋಡಿ ಮೆಚ್ಚುಗೆ ಸೂಸುತ್ತಾ ಇನ್ನೊಂದು ಹಸಿರು ಬಣ್ಣದ 'ಫ್ರೀ' ಸೀರೆಯನ್ನು ಸೇರಿಸಿ ಪ್ಯಾಕ್ ಮಾಡಿ ನನ್ನ ಕೈಗಿತ್ತಳು, ಎದುರಿಗಿದ್ದ ಸುಂದರಿ. ಇನ್ನೂರು ರುಪಾಯಿಗಳನ್ನು ತೆತ್ತು ಹೊರಬಂದೆ. ಮೈಸೂರಿಗೆ ಹಿಂದಿರುಗಿ, ಬೆಂಗಳೂರಿನಿಂದ ತಂದ ಸೀರೆಯ ಪೊಟ್ಟಣವನ್ನು ಹೆಮ್ಮೆಯಿಂದ ಮಡದಿಯ ಕೈಗಿತ್ತೆ. ಬಿಡಿಸಿ ನೋಡಿದ ಅರ್ಧಾಂಗಿ ಹೇಳಿದಳು -

''ಏನ್ರೀ ಇದು, ಈ ಕಲರ್ ಸೀರೆ ನನ್ನ ಹತ್ರ ಮೊದಲೇ ಇದೆ ಅಲ್ರೀ?''

''ಇದ್ದರೇನಾಯಿತು. ಇನ್ನೊಂದಿರಲಿ. ಇಷ್ಟು ಅಗ್ಗಕ್ಕೆ ಈ ಕಾಲದಲ್ಲಿ ಸೀರೆ ಸಿಗುತ್ತೇನೇ ? ಅದ್ರಲ್ಲೂ ಒಂದು ಫ್ರೀ ?''

ಆಯ್ತು ಮತ್ತೆ ಆ ಸೀರೆಗಳ ಬಣ್ಣಕ್ಕೆ ಹೊಂದುವಂತಹ ಬ್ಲೌಸ್ ಬಟ್ಟೆಯನ್ನೂ – ಮೂರಕ್ಕೆ ರೂ. ಮುನ್ನೂರು ಕೊಟ್ಟುತಂದದ್ದಾಯಿತು. ತುರ್ತಾಗಿ ರೂ. ತೊಂಬತ್ತು ತೆತ್ತು ರವಿಕೆಯನ್ನು ಹೊಲಿಸಿದ್ದೂ ಆಯಿತು. ಬೇರೆ ದಿನಗಳಲ್ಲಾಗಿದ್ದರೆ ಎಪ್ಪತ್ತೈದು ರುಪಾಯಿಯಲ್ಲಿಯೇ ಆಗುತ್ತಿತ್ತು. ಆದರೆ ಈಗ Birthdayಯ ಮೊದಲು ತಯಾರಾಗಬೇಕಿತ್ತಲ್ಲ, ಅದಕ್ಕಾಗಿ ಹೆಚ್ಚಿನ ದರ. ಅಂತೂ ಜನ್ಮ ದಿನದಂದು ನನ್ನವಳು ಕೆಂಪು ಬಣ್ಣದ ಸೀರೆಯನ್ನುಟ್ಟಳು. ನನಗೆ ಕೆಂಪು ಬಣ್ಣ ಇಷ್ಟ ಎಂದು ಅವಳಿಗೆ ಗೊತ್ತಿತ್ತು. ಮರುದಿನ ಎಂದಿನಂತೆ ಬೇರೆಲ್ಲ ಬಟ್ಟೆಗಳೊಡನೆ ಕೆಂಪು ಸೀರೆಯೂ ವಾಶಿಂಗ್ ಮೆಶಿನ್ನಿನೊಳಕ್ಕೆ ಹೋಯಿತು. ಒಗೆದಾದ ನಂತರ ನೋಡಿದರೆ ನನ್ನ ಬಿಳಿ ಬನಿಯನ್ ಸೇರಿದಂತೆ ಎಲ್ಲ ಬಟ್ಟೆಗಳೂ ಕೆಂಪಾಗಿದ್ದು. ಅಷ್ಟೇ ಅಲ್ಲ ಸೀರೆಯಾಗಿ ಒಳಗೆ ಹೋದ ಇಂಪೋರ್ಟೆಡ್ ಸೀರೆ ಬ್ಲೌಸ್ ಪೀಸ್ ಆಗಿ ಹೊರಗೆ ಬಂದಿತ್ತು!!

ಮಡದಿ ಮಕ್ಕಳ ಚುಚ್ಚು ಮಾತಿಗೆ ನನ್ನ ಉತ್ತರ ರೆಡಿಯಾಗಿತ್ತು.

''ಹೋಗಲಿ ಬಿಡಿ. ಈ ಕಾಲದಲ್ಲಿ ನೂರು ರುಪಾಯಿ ಸೀರೆಯಿಂದ ಇನ್ನೇನು ಅಪೇಕ್ಷಿಸಲು ಸಾಧ್ಯ. ಒಮ್ಮೆಯಾದರೂ ಅದನ್ನು ಉಟ್ಟದ್ದಾಯಿತಲ್ಲ ?''

ಉಳಿದೆರಡು ಸೀರೆಗಳನ್ನು ನನ್ನ ಹೆಂಡತಿ ಇನ್ನೂ ಉಪಯೋಗಿಸಿಲ್ಲ!

ಇಷ್ಟಾದರೂ ನನ್ನ 'ಫ್ರೀ ಗಿಫ್ಟ್'ನ ಹುಚ್ಚು ಹೋಗಿರಲಿಲ್ಲ. ಎಲ್ಲೋ ಒಂದು ಕಡೆ ಮೋಸ ಹೋದರೆ ಎಲ್ಲಾ ಕಡೆ ಹಾಗಾಗಬೇಕೆಂದಿದೆಯೇ? ಎಂದು ನನ್ನ ವಾದ. ಎಂದಾದರೊಂದು ದಿನ ಆ ಚಿನ್ನದ ನಾಣ್ಯವೋ, ವಜ್ರದ ಹರಳೋ ಅಥವಾ ಇನ್ನು ಯಾವುದಾದರೂ ಅಮೂಲ್ಯವಾದ

'ಫ್ರೀ ಗಿಫ್ಟ್' ನನ್ನದಾಗಿಯೇ ಆಗುತ್ತದೆ ಎಂದು ನನ್ನ ದೃಢವಾದ ನಂಬಿಕೆ. ಈಗ ಮೂರು ತಿಂಗಳ ಹಿಂದೆ ಏನಾಯಿತು ಗೊತ್ತೆ? ನಾನು ತುಂಬಾ ವರ್ಷದಿಂದ ಬಳಸುತ್ತಾ ಬಂದದ್ದು ಕಾಲ್ಗೇಟ್ ಟೂಥ್ ಪೇಸ್ಟನ್ನು. ಅದರ ಮೇಲೆ ನನಗೆ ಯಾವ ರೀತಿಯ ದೂರು ಕೂಡ ಇಲ್ಲ. ಆದರೆ ಒಂದು ದಿನ ಬೆಳಗ್ಗೆ ಕಾಫಿ ಕುಡಿಯುತ್ತಾ ವರ್ತಮಾನ ಪತ್ರಿಕೆ ತೆರೆದ ಕೂಡಲೇ ಒಂದು ಜಾಹೀರಾತು ನೋಡಿದೆ. ಬೆಳಗ್ಗೆ ಕೈಯಲ್ಲಿ ದಿನಪತ್ರಿಕೆ ಇಲ್ಲದಿದ್ದರೆ ನನಗೆ ಕಾಫಿಯ ರುಚಿಯೇ ಗೊತ್ತಾಗುವುದಿಲ್ಲ. ಅದು ಬೇರೆ ಮಾತು. ಇರಲಿ ಯಾವುದೋ ಒಂದು ಹೊಸ ಕಂಪೆನಿ ಹೊರ ತಂದ ಟೂಥ್ ಪೇಸ್ಟಿನ ಬಗೆಗಿನ introductory ಜಾಹೀರಾತು ಅದಾಗಿತ್ತು. ಕಂಪೆನಿಯ ಹೆಸರು, ಟೂಥ್ ಪೇಸ್ಟಿನ ಬ್ರ್ಯಾಂಡ್ ಇತ್ಯಾದಿ ಬೇಡ ಬಿಡಿ. ಮುಖ್ಯವಾದ ವಿಷಯ ಅಂದರೆ ಅದರೊಡನೆ ಕೂಡ ಮಾಡಿದ 'ಫ್ರೀ ಗಿಫ್ಟ್'. ಜಾಹೀರಾತಿನ ಪ್ರಕಾರ ಟೂಥ್ ಪೇಸ್ಟಿನ ಜೊತೆಗೆ ಸಿಗಲಿದ್ದ ಬಂಪರ್ 'ಫ್ರೀ ಗಿಫ್ಟ್' ಒಂದು ಕಾರು ! ಮನೆಯಲ್ಲಿ ಹಿಂದಿನ ವಾರವೇ ತಂದಿದ್ದ ಟೂಥ್ ಪೇಸ್ಟಿನ ಹೊಸ ಟ್ಯೂಬ್ ಇದ್ದರೂ ಅದೇ ದಿನ ಸಂಜೆ ಆಫೀಸಿನಿಂದ ಹಿಂತಿರುಗಿದ ಮೇಲೆ, ಅಂಗಡಿಗೆ ಹೋಗಿ ಆ ಟೂಥ್ ಪೇಸ್ಟನ್ನು ಕೊಂಡು ತಂದೆ. ಒಳಗೆ ನೋಡಿದರೆ ಒಂದು ಕೂಪನ್ನು. ಕೂಪನ್ನಿನ ಮೇಲೆ ಒಂದು ಬಿಳಿ ಬಣ್ಣದ ಮಚ್ಚೆ. ಆ ಮಚ್ಚೆಯನ್ನು ಉಗುರಿನಿಂದ ಗೀಚಿ ತೆಗೆದರೆ ಒಳಗೆ ಇನಾಮು ಯಾವುದೆಂದು ಗೊತ್ತಾಗುತ್ತದೆ ಎಂದು ಬರೆದಿತ್ತು. ಮನಸ್ಸಿನಲ್ಲಿ ಏನೋ ಒಂದು ರೀತಿಯ ಕಸಿವಿಸಿ ಆಗುತ್ತಿತ್ತು. ಬಲಗಣ್ಣು ಬೇರೆ ಹಾರುತ್ತಾ ಇತ್ತು. ಮಚ್ಚೆಯನ್ನು ಗೀಚಿ ತೆಗೆಯಲು ಬೆರಳು ಯಾಕೋ ಮುಂದಾಗುತ್ತಿರಲಿಲ್ಲ. ನನ್ನ ಹೆಂಡತಿ ಮಕ್ಕಳಿಗೆಲ್ಲಾ ಕುತೂಹಲ. ನಾನು ಹಿಂದೆ ಮುಂದೆ ನೋಡುತ್ತಾ ಇರುವುದನ್ನು ತಡೆಯಲಾರದೆ ನನ್ನ ಎರಡನೆ ಮಗಳು – ಪಿಯುಸಿ ಓದುತ್ತಾ ಇರುವವಳು – ಕೂಪನ್ನನ್ನು ನನ್ನ ಕೈಯಿಂದ ಕಿತ್ತುಕೊಂಡು ಮಚ್ಚೆಯನ್ನು ಅಳಿಸಲಾರಂಭಿಸಿದಳು. ಮಚ್ಚೆ ಮರೆಯಾದ ಕೂಡಲೇ ಅವಳ ಮುಖದಿಂದ ''ಅಪ್ಪಾ ಕಾರು !'' ಎಂದು ಉದ್ಗಾರ ಹೊರಟಿತು. ನಮ್ಮ ಕಣ್ಣನ್ನು ನಮಗೇ ನಂಬಲಾಗುತ್ತಿರಲಿಲ್ಲ! ನನ್ನ ಕನಸು ನನಸಾಯಿತು ಎಂದು ನನಗೆ ತೃಪ್ತಿ. ಒಂದು ರೀತಿಯ ಹೆಮ್ಮೆ ಕೂಡಾ. ಯಾವ ಮಾಡೆಲ್ ಸಿಗುತ್ತದೋ, ಯಾವ ಬಣ್ಣದ್ದೋ, ಹೀಗೆಲ್ಲಾ ನಾನೂ ಮಕ್ಕಳು ಚರ್ಚಿಸಲು ಸುರು ಮಾಡಿದೆವು. ನನಗೆ ಬಿಳಿ ಬಣ್ಣದ ಕಾರು ಇಷ್ಟ ಆದರೆ ನನ್ನ ಮಗಳು -

''ಬಿಳಿ ಬೇಡಪ್ಪ, ಬಹಳ ಬೇಗ ಗಲೀಜಾಗಿ ಬಿಡುತ್ತದೆ. ಕಾರಿಗೆ ಕರಿ ಬಣ್ಣವೇ ಚೆನ್ನ'' - ಎಂದರೆ, ಎಂಜಿನಿಯರಿಂಗ್ ಓದುತ್ತಿದ್ದ ನನ್ನ ಮಗ -

''ಅದೆಲ್ಲಾ ಹಳೇ ಸ್ಟೈಲ್. ಈಗ ಮೆಟ್ಯಾಲಿಕ್ ಬಣ್ಣವೇ (ಅದೇನೆಂದು ನನಗೂ ಸರಿಯಾಗಿ ಗೊತ್ತಿಲ್ಲ) ತುಂಬಾ ಪಾಪ್ಯುಲರ್'' ಎಂದು ಸಲಹೆ ಕೊಟ್ಟ. ಅಷ್ಟರಲ್ಲಿ ಅಡಿಗೆ ಮನೆಯಿಂದ ನನ್ನ ಪತ್ನಿಯ ಅಶರೀರವಾಣಿ ನಮ್ಮನ್ನು ಹೊಡೆದೆಬ್ಬಿಸಿತು.

''ಆಯಿತಪ್ಪಾ ಅದೆಲ್ಲಾ ಕಾರು ಬಂದ ಮೇಲಲ್ಲವೇ. ನನಗಂತೂ ಈಗ ಹಸಿವಾಗುತ್ತಾ ಇದೆ. ಊಟಕ್ಕೆ ಬರ್ತೀರೋ ಇಲ್ಲವೋ ?''

ನಮ್ಮ ಉತ್ಸಾಹಕ್ಕೆ ತಣ್ಣೀರೆರಚಿದಂತಾಯಿತು ಆದರೂ ಸಾವರಿಸಿಕೊಂಡು ಊಟಕ್ಕೆ ನಡೆದೆವು. ಊಟವಾದ ನಂತರ ಕೂಪನ್ನಿನಲ್ಲಿ ಇನ್ನೇನು ಬರೆದಿದೆ ಎಂದು ಪರೀಕ್ಷಿಸಿದೆವು. ಕೆಳಗೆ ನನ್ನ ವಿಳಾಸ, ಕೊಂಡುಕೊಂಡ ಅಂಗಡಿಯ ವಿವರ, cash memoವಿನ ನಂಬರು, ತಾರೀಖು ಎಲ್ಲ ಬರೆಯಲು ಎಡೆ ಇತ್ತು. ಅಲ್ಲಿ ಎಲ್ಲ ವಿವರಗಳನ್ನು ದೊಡ್ಡ ಅಕ್ಷರಗಳಲ್ಲಿ (capital letters) ತುಂಬಿಸಿ, ನಮ್ಮ ವಿಳಾಸ ಬರೆದು ಕೂಪನ್ನನ್ನು ಕಂಪೆನಿಗೆ ಕಳುಹಿಸಬೇಕು ಎಂದೂ, ಗಿಫ್ಟನ್ನು ಮೂರು ವಾರದೊಳಗೆ ಕಳುಹಿಸಿ ಕೊಡಲಾಗುತ್ತದೆ ಎಂದೂ ಬರೆದಿತ್ತು.

ಅದರಂತೆಯೇ ಮಾಡಿ ಕೂಪನ್ನನ್ನು ಮರುದಿನ ಬೆಳಗ್ಗೆಯೇ ಮುಖ್ಯ ಅಂಚೆ ಕಛೇರಿಗೆ ಹೋಗಿ ಅಂಚೆ ಪೆಟ್ಟಿಗೆಯಲ್ಲಿ ಹಾಕಿದ್ದಾಯಿತು. ಬೇರೆ ಯಾವುದಾದರೂ ರಸ್ತೆ ಬದಿಯಲ್ಲಿನ ಪೆಟ್ಟಿಗೆಯಲ್ಲಿ ಹಾಕಿದರೆ ಎಲ್ಲಾದರೂ ಕೂಪನ್ನು ಕಳೆದುಹೋದರೆ, ಅಲ್ಲವೇ !

ಅದಾದ ಮೇಲೆ ಪ್ರತಿ ದಿನ ನಮಗೆ ದಾರಿ ನೋಡುವ ಕೆಲಸ. ಯಾವುದಾದರೂ ಹೊಸ ಕಾರು ರಸ್ತೆಯಲ್ಲಿ ಬರುವುದನ್ನು ಕಂಡರೆ, ಅದು ನಮ್ಮ ಗೇಟಿನ ಮುಂದೆ ಬಂದು ನಿಲ್ಲುತ್ತದೋ ಎಂದು ನಿರೀಕ್ಷೆ; ಅಂಚೆ ಪೇದೆ ಬರುವಾಗಲೆಲ್ಲಾ ಟೂಥ್ ಪೇಸ್ಟ್ ಕಂಪೆನಿಯಿಂದ ಏನಾದರೂ ಸಿಹಿ ಸುದ್ದಿ ಬರುತ್ತದೋ ಎನ್ನುವ ಪ್ರತೀಕ್ಷೆ. ಹೀಗೆ ಎರಡು ಮೂರು ವಾರ ಕಳೆಯಿತು. ಕಾರಿನ ಪತ್ತೆಯಿಲ್ಲ. ಕೂಪನ್ನಿನ ಜೆರಾಕ್ಸ್ ಪ್ರತಿಯನ್ನಾದರೂ ಇಟ್ಟುಕೊಳ್ಳಬೇಕಿತ್ತು ಎಂದು ನನ್ನ ಪತ್ನಿ ರಾಗ ತೆಗೆದಳು. ಕೂಪನ್ನನ್ನು ಯಾರಾದರೂ ಲಪಟಾಯಿಸಿದ್ದರೆ ! ಹೌದಲ್ಲ ಎಂದು ಅನಿಸಿದರೂ ಈಗ ಏನು ಮಾಡುವುದು. 'ಮಿಂಚಿ ಹೋದ ಕಾರ್ಯಕ್ಕೆ ಚಿಂತಿಸಿ ಫಲವೇನು' ಎಂದು ನಮ್ಮನ್ನು ನಾವೇ ಸಮಾಧಾನ ಮಾಡಿಕೊಂಡದ್ದಾಯಿತು. ಮತ್ತೂ ಒಂದು ವಾರ ಕಳೆಯಿತು. ಹೀಗೆ ಒಂದು ದಿನ ಶನಿವಾರ ಮಧ್ಯಾಹ್ನ ಊಟ ಮಾಡಿ ಮಲಗಲು ಸಿದ್ಧನಾಗುತ್ತಿದ್ದಂತೆಯೇ ಬಾಗಿಲ ಕರೆಗಂಟೆಯ ಸದ್ದಾಯಿತು. ಬಾಗಿಲು ತೆರೆದರೆ ಹೊರಗೆ ನಿಂತಿದ್ದ ವ್ಯಕ್ತಿ ಕೇಳಿದ –

''ಸಾರ್ ಇದು... ಅವರ ಮನೆ ಹೌದೇ ?''

''ಹೌದು, ಯಾಕೆ ?''– ನಾನು ಕೇಳಿದೆ. ನನ್ನ ಕೈಯಲ್ಲೊಂದು ಚೀಟಿ ಕೊಟ್ಟು ಮತ್ತೆ ಹೇಳಿದ –

''ಇಲ್ಲಿ ರುಜು ಮಾಡಿ ಸಾರ್, ನಿಮಗೊಂದು ಪಾರ್ಸೆಲ್ ಇದೆ.''

ಅವನೆಂದಂತೆ ರುಜು ಮಾಡಿ ಪಾರ್ಸೆಲ್ ತೆಗೆದುಕೊಂಡೆ. ಒಳಗೆ ಬಂದು ಇನ್ನೇನು ಪಾರ್ಸೆಲ್ಲನ್ನು ಬಿಚ್ಚಬೇಕು; ಅಷ್ಟರಲ್ಲಿ ನನ್ನ ಮಗ ಹೇಳಿದ.

''ನಿಲ್ಲಪ್ಪಾ, ಅದರೊಳಗೇನಿದೆಯೋ. ಬಾಂಬ್ ಏನಾದರೂ ಇದ್ದರೆ !? ಈಗೆಲ್ಲಾ ನಾವು ತುಂಬಾ ಹುಷಾರಾಗಿರಬೇಕು. ದಿನ ಬೆಳಗಾದರೆ ಟೆರರಿಸ್ಟ್ ಧಾಳಿ, ಲೆಟರ್ ಬಾಂಬ್ ಇತ್ಯಾದಿ ವಿಷಯ ಪೇಪರಿನಲ್ಲಿ ಓದುತ್ತೇವಲ್ಲ ?'' ನಾನೆಂದೆ –

''ಸುಮ್ಮನಿರೋ, ಬಾಂಬಂತೆ, ಗೀಂಬಂತೆ, ನೀನು ಟಿ.ವಿ. ನೋಡೋದು ಹೆಚ್ಚಾಯ್ತು. ಲೆಟರ್ ಬಾಂಬ್ ಬರಲಿಕ್ಕೆ ನಾವೇನು ಮಂತ್ರಿಗಳೆ, ಇಲ್ಲ ಫಿಲ್ಮ್ ಸ್ಟಾರ್‌ಗಳೆ ? ಇಲ್ಲದ್ದೆಲ್ಲ ತಲೇಲಿ ತುಂಬಿಸ್ಕೊಂಡಿರ್ತೀಯಾ.''

ಸುತ್ತಲೂ ನನ್ನ ಹೆಂಡತಿ, ಮಗ, ಮಗಳು ಎಲ್ಲರೂ ಆತುರದಿಂದ ಕಾಯುತ್ತಿರುವಂತೆಯೇ ನಾನು ಪಾರ್ಸೆಲ್ಲನ್ನು ತೆರೆದೆ. ಒಳಗಡೆ ಒಂದು ಪುಟ್ಟ 'ಕಾರು' ಮತ್ತು ಒಂದು ಚೀಟಿ. ಅದರಲ್ಲಿ ಬರೆದಿತ್ತು – Congratulations. Here is your free gift as promised. Please acknowledge receipt. Yours...' ಇತ್ಯಾದಿ ಮತ್ತು ಆ ಟೂಥ್ ಪೇಸ್ಟಿನ ಕಂಪೆನಿಯ ಹೆಸರು !

**ಮುಳಿಯ ರಾಘವಯ್ಯ**
ನಂ. ೩, ೮ನೇ ಬ್ಲಾಕ್, ಎಸ್. ಬಿ. ಎಮ್. ಕಾಲೋನಿ ಶ್ರೀರಾಂಪುರ
೨ನೇ ಹಂತ, ಮೈಸೂರು - ೫೭೦ ೦೨೩

---

*೨೯ನೇ ಪುಟದಿಂದ*

ಉಳಿಯುತ್ತವೆ. ತಪ್ಪು ತಳಹದಿಯುಳ್ಳ ನಂಬಿಕೆಗಳನ್ನು ತೆಗೆದುಹಾಕಬೇಕಾದರೆ ಶಬ್ದ ಪರಿಚಯವೊಂದೇ ಸಾಲದು ಎಂಬುದು ಸತ್ಯ. ಮೂಢನಂಬಿಕೆಗಳಿಂದ ಹುಟ್ಟುವ ನಡೆವಳಿಕೆಗಳಿಗೂ ಗಮನವೀಯಬೇಕಾಗುತ್ತದೆ. ೧೩ ದುರದೃಷ್ಟದ ಸಂಖ್ಯೆಯೆಂಬ ನಂಬಿಕೆಗೆ ಯಾವುದೇ ಆಧಾರವಿಲ್ಲವೆಂದು ತೋರಿಸುವುದು ಅಷ್ಟೇನೂ ಕಷ್ಟವಾದುದಲ್ಲ, ಆದರೆ ೧೩ ದುರದೃಷ್ಟದ ಸಂಖ್ಯೆಯೆಂದು ನಂಬಿರುವ ಜನರು ಅದನ್ನು ಪಾಲಿಸದಂತೆ ಹೇಗೆ ತಡೆಯಲು ಸಾಧ್ಯ ? ಹೇಗೆ ಅವರನ್ನು ಟೇಬಲ್ಲಿನ ಮೇಲೆ ೧೩ ನೆಯವರಾಗಿ ಕುಳಿತುಕೊಳ್ಳುವಂತೆ ಮಾಡುವಿರಿ ?

ಶಿಕ್ಷಣ ತಜ್ಞರು ಎರಡು ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಪ್ರಥಮ ಸ್ಥಾನದಲ್ಲಿ, ಮಕ್ಕಳು ಶಿಕ್ಷಣ ಪಡೆಯುವ ಉದ್ದಕ್ಕೂ ರುಜುವಾತಿನ ವಿಷಯದಲ್ಲಿ ವಿಮರ್ಶಾತ್ಮಕ ದೃಷ್ಟಿಯನ್ನು ಅಳವಡಿಸಿಕೊಳ್ಳುವಂತೆ ಶಿಕ್ಷಕರು ನೋಡಿಕೊಳ್ಳಬೇಕು. ಎರಡನೇ ಸ್ಥಾನದಲ್ಲಿ ಸಂದರ್ಭಕ್ಕನುಗುಣವಾದ ನಡವಳಿಕೆಯನ್ನು ಶಿಕ್ಷಕರು ತಯಾರಿ ಮಾಡಬೇಕು. ಮೂಢನಂಬಿಕೆಗಳನ್ನು ಧ್ವಂಸಮಾಡಿದರಷ್ಟೇ ಸಾಲದು; ಆ ಧ್ವಂಸ ಮಗುವಿನ ನಂಬಿಕೆಗಳನ್ನು ಅಲುಗಾಡಿಸಬೇಕು. ಅದು ಸುಲಭದ ಕೆಲಸವಲ್ಲ; ಏಕೆಂದರೆ ಶಾಲೆಗೆ ಬರುವ ಹೊತ್ತಿಗೆ ಮಕ್ಕಳಲ್ಲಿ ಮೂಢನಂಬಿಕೆಗಳು ...ಗ್ರಹಗಳು, ಅಸ್ಪೃಶ್ಯತೆ ಮತ್ತು ಸಂಪ್ರದಾಯಗಳು ಚೆನ್ನಾಗಿ ಬೇರೂರಿರುತ್ತವೆ. ... ಮಗುವಿನ ದೃಷ್ಟಿಕೋನದಲ್ಲಿ ಪೂರ್ವಾಗ್ರಹದ ಪ್ರವೇಶವಾಗಿರುತ್ತದೆ. ಈ ಸಮಸ್ಯೆಗಳನ್ನು ಎದುರಿಸಲು ಹೇಗೆ ಶಿಕ್ಷಣದ ಆಚರಣೆಗಳನ್ನು ಸರಿಹೊಂದಿಸಿಕೊಳ್ಳಬೇಕೆಂಬುದೇ ಒಂದು ಗಂಭೀರ ಅಧ್ಯಯನದ ವಿಷಯ ಮತ್ತು ಸ್ವತಃ ಶಿಕ್ಷಕರೇ ತಮ್ಮ ಹುಡುಕಾಟದಲ್ಲಿ ಮೂಢನಂಬಿಕೆಗಳನ್ನು ತೊರೆಯುವ ಅವಶ್ಯಕತೆಯಿದೆ.

ಸಾವಿರಾರು ರೀತಿಯಲ್ಲಿ ಶಿಕ್ಷಣದ ಸಹಾಯಕ್ಕೆ ಈಗಾಗಲೇ ವಿಜ್ಞಾನವನ್ನು ಉಪಯೋಗಿಸಲಾಗಿದೆ – ಪುಸ್ತಕಗಳು, ಚಿತ್ರಗಳು, ವೈರ್‌ಲೆಸ್‌ಗಳು, ಎಲ್ಲವೂ ಕಲಿಕೆಗೆ ಸಹಕಾರಿಯಾಗಿವೆ. ಆದರೆ ಈ ವಸ್ತುಗಳೆಲ್ಲವೂ ವಿಜ್ಞಾನದ ಯಂತ್ರಭಾಗಗಳು; ಶಿಕ್ಷಣದ ಸೇವೆಗಾಗಿ ವೈಜ್ಞಾನಿಕ ಮನೋಭಾವವನ್ನು ಇನ್ನೂ ಬಿಡುಗಡೆಗೊಳಿಸಬೇಕಾಗಿದೆ; ಸಾಮಾಜಿಕ ಸಂಬಂಧಗಳಲ್ಲಿ ತುಂಬಬೇಕಾಗಿದೆ. ನಮ್ಮ ತಲೆಮಾರಿನ ಶಿಕ್ಷಕರ ಮತ್ತು ಚಿಂತಕರ ಪ್ರಯತ್ನ ಮತ್ತು ಆರಂಭಶೀಲತೆಗಳನ್ನು ಬಯಸುವ ಸಮಸ್ಯೆಯಿದು. ವಿಮರ್ಶಾತ್ಮಕ ದೂರದೃಷ್ಟಿಯನ್ನು ಸಾಮಾಜಿಕ ಜೀವನದಲ್ಲಿ ಹರಡುವುದರಿಂದ, ಕರಾರುವಾಕ್ಕಾದ ಜ್ಞಾನದೊಂದಿಗೆ ನಡೆವಳಿಕೆಯನ್ನು ನಿರ್ದೇಶಿಸಲು ಪ್ರಯತ್ನಿಸುತ್ತಾ, ವಿಜ್ಞಾನವು ಮನುಕುಲಕ್ಕೆ ಹೊಸ ಭವಿಷ್ಯವನ್ನು ಈಗಲೂ ರೂಪಿಸಬಹುದು.

**ಅನುವಾದ: ಎಸ್. ಎನ್. ಸ್ವಾಮಿ (ಸೈನಿ)**
ಕೃಪೆ: ಬ್ರೇಕ್‌ಥ್ರೂ ವಿಜ್ಞಾನ ತ್ರೈಮಾಸಿಕ, ೩೧/೧, ೨ನೇ ಮಹಡಿ
೩ನೇ ಅಡ್ಡರಸ್ತೆ, ಸಂಪಿಗೆ ರಸ್ತೆ ಮಲ್ಲೇಶ್ವರಂ, ಬೆಂಗಳೂರು-೫೬೦ ೦೦೩

# ಧರ್ಮ ಮತ್ತು ವಿಜ್ಞಾನ

**ಬಿ. ಎಂ. ಪ್ರದೀಪ್ ಕುಮಾರ್**

'ಧರ್ಮ' ಎಂಬ ಪದವನ್ನು ನಾವು ವಿವಿಧಾರ್ಥಗಳಲ್ಲಿ ಬಳಸುತ್ತೇವೆ. ಈ ಪ್ರಕ್ರಿಯೆಯಲ್ಲಿನ ಚರ್ಚೆಗಳಲ್ಲಿ ಹಲವು ಬಾರಿ ಹಳಿ ತಪ್ಪುವ ಸಾಧ್ಯತೆಗಳಿವೆ. ಹಾಗೆಯೇ ವಿಜ್ಞಾನದಲ್ಲಿ ಎಲ್ಲದಕ್ಕೂ ಉತ್ತರವಿದೆ ಎಂಬ ಸರಳ ನಿಲುವಿನಲ್ಲಿ ನಮ್ಮ ಮೂಲ ಸ್ವೀಕೃತಿ ವಿಜ್ಞಾನವೆಂದರೆ ತಂತ್ರಜ್ಞಾನ ಅಥವಾ ಹಿಗ್ಗಿಸಿದ ಅರ್ಥದಲ್ಲಿ, ಪ್ರಕೃತಿ ವಿಜ್ಞಾನ ಎಂದಾಗಿರಲೂಬಹುದು. ಪ್ರಕೃತಿಯ ಭಾಗವಾದ ಮಾನವ ಸಮಾಜ ಇಂತಹ ಅಧ್ಯಯನ ಸಾಧ್ಯತೆಯಿಂದ ಹೊರಗೆ ಎಂದು ಹಲವರು ಭಾವಿಸುತ್ತಾರೆ. ಕಾಲಕಾಲಕ್ಕೆ ಸಮಾಜ ಪರಿಕಲ್ಪನೆಗಳನ್ನು ಗ್ರಹಿಸಿದ ರೀತಿಯನ್ನು ಪುನರ್ ಪರಿಶೀಲಿಸುವ ಅಗತ್ಯ ಉಂಟಾಗುತ್ತದೆ. ಇಂತಹ ಪುನರ್‌ಚಿಂತನೆ ಅಗತ್ಯ ಎಂದು ಭಾವಿಸಿ, ಈ ನಿಟ್ಟಿನಲ್ಲಿ ಕೆಲ ವಿಚಾರಗಳನ್ನು ಮುಂದಿಡುವುದು ಇಲ್ಲಿಯ ಉದ್ದೇಶ.

'ಧರ್ಮ' ಎಂಬ ಪದವನ್ನು ಬಳಸುವ ಎರಡು ಪ್ರಮುಖ ಅರ್ಥಗಳಲ್ಲಿ ಮೊದಲನೆಯದು ನಂಬಿಕೆ, ಆಚರಣೆ, ಕಟ್ಟುಪಾಡು. ಎರಡನೆಯದು ವ್ಯಕ್ತಿ, ಸಮಾಜದ ರೀತಿನೀತಿ, ಕರ್ತವ್ಯ, ನಡವಳಿಕೆಗಳನ್ನು ನಿರ್ದೇಶಿಸುವ ನೀತಿಸಂಹಿತೆ. ಮೊದಲನೆಯ ಅರ್ಥದಲ್ಲಿ ಹಿಂದೂ, ಬೌದ್ಧ, ಕ್ರೈಸ್ತ, ಇಸ್ಲಾಂ ಮುಂತಾದ ಸಾಂಸ್ಥಿಕ ಧರ್ಮಗಳ, ಹಾಗೂ ಎರಡನೆಯ ಅರ್ಥದಲ್ಲಿ ಮಾನವಧರ್ಮ, ಸಹಜಧರ್ಮ ಬಳಕೆಗಳನ್ನು ಉದಾಹರಿಸಬಹುದು. ಇವೆರಡರ ಮಧ್ಯೆ ವ್ಯತ್ಯಾಸ ಅಗತ್ಯವಿದೆ ಎಂದು ಗುರುತಿಸಿದ ಬರ್ಟ್ರೆಂಡ್ ರಸಲ್, ಕೇವಲ ಕ್ರೈಸ್ತ ನೀತಿ ಸೂತ್ರಗಳನ್ನಷ್ಟೇ ಅಳವಡಿಸಿಕೊಂಡರೆ ಕ್ರಿಶ್ಚಿಯನ್ ಎನ್ನುವುದಿಲ್ಲ, ಬದಲಾಗಿ ಕ್ರಿಸ್ತನ ಬಗೆಗೂ, ಬೈಬಲ್ ಬಗೆಗೂ ನಿರ್ದಿಷ್ಟ ನಂಬಿಕೆಗಳು ಅಗತ್ಯ ಎನ್ನುತ್ತಾರೆ. ಹಾಗಾದರೆ ಸಾಂಸ್ಥಿಕ ಧರ್ಮಗಳ ತಿರಸ್ಕರಣೆ ಧರ್ಮ ವಿರೋಧಿಯಾಗುತ್ತದೆಯೇ ? ಎರಡು ಅರ್ಥಗಳನ್ನು ಬೆರಸಿ ಚರ್ಚಿಸುವಾಗ ಈ ಸಮಸ್ಯೆ ಉಂಟಾಗುತ್ತದೆ. ಸಾಮಾಜಿಕ ನೈತಿಕತೆಗೆ ಸಾಂಸ್ಥಿಕ ಧರ್ಮ ಅಗತ್ಯ ಎಂದು ಭಾವಿಸುವವರು ಸಾಂಸ್ಥಿಕ ಧರ್ಮದ ತಿರಸ್ಕರಣೆಯನ್ನು ನೈತಿಕತೆಯ ತಿರಸ್ಕರಣೆ ಸಹ ಎಂದು ಭಾವಿಸುತ್ತಾರೆ. ಸಾಂಸ್ಥಿಕ ಧರ್ಮಗಳನ್ನು ತಿರಸ್ಕರಿಸಿ, ವೈಚಾರಿಕ ಕ್ರಾಂತಿಗೆ ಆಹ್ವಾನವಿತ್ತ ಕುವೆಂಪು ಅವರಾಗಲಿ, ಹೆಚ್. ಎನ್. ಮುಂತಾದ ವಿಚಾರವಾದಿಗಳಾಗಲಿ ನೈತಿಕತೆಯನ್ನೇನೂ ತಿರಸ್ಕರಿಸಲಿಲ್ಲ. ಸಮಕಾಲೀನ ಮೌಲ್ಯಗಳಿಗೆ ವಿರುದ್ಧವಾದ ಜಾತಿ ಶ್ರೇಣೀಕರಣ, ಪೌರೋಹಿತ್ಯಶಾಹಿ, ಧಾರ್ಮಿಕ ಮೌಢ್ಯಗಳ ವಿರುದ್ಧ ಗಟ್ಟಿಧ್ವನಿ ಎತ್ತುವುದು ಅಗತ್ಯವೆಂದೇ ಅವರು ಭಾವಿಸಿದರು. ಈ ಕಾರಣಕ್ಕೆ ಭಾರತೀಯ ಸಂದರ್ಭದಲ್ಲಿಯೂ ಇಂತಹ ಧರ್ಮ ಹಾಗೂ ಸಾಮಾಜಿಕ ನೈತಿಕತೆಗಳಿಗೆ ವಿಭಿನ್ನ ಪದಗಳನ್ನು ಬಳಸುವುದು ಅಗತ್ಯವೆಂದೇ ತೋರುತ್ತದೆ. ಇಲ್ಲಿ ಧರ್ಮವನ್ನು ನಂಬಿಕೆ, ಆಚರಣೆ, ಕಟ್ಟುಪಾಡು ಎಂಬರ್ಥದಲ್ಲಿ ಬಳಸಲಾಗಿದೆ.

ಕೆಲವರು ಇತಿಹಾಸದಲ್ಲಿ ವಿಜ್ಞಾನ ಹಾಗೂ ಧರ್ಮದ ನಡುವೆ ನೇರ ಸಂಘರ್ಷವಿದೆ ಎಂದೇ ಭಾವಿಸುತ್ತಾರೆ. ಇದು ಇತಿಹಾಸವನ್ನು ಅರ್ಥೈಸುವ ಸರಳ ರೀತಿಯಾಗಿಬಿಡುತ್ತದೆ. ವೈಜ್ಞಾನಿಕ ಮನೋಭಾವವು ಸಮಗ್ರವಾಗಿರಬೇಕು ಹಾಗೂ ಸಾಮಾಜಿಕ ಆಶಯವಾಗಿ ಅರಳಬೇಕು ಎಂದು ಭಾವಿಸುವ ಡಾ॥ ಜಿ. ರಾಮಕೃಷ್ಣ ಅವರು ವಿಜ್ಞಾನಕ್ಕೆ ವಿರೋಧ ಕೇವಲ ಧಾರ್ಮಿಕವಲ್ಲ ಎನ್ನುತ್ತಾರೆ. ಧರ್ಮಗಳ ಪ್ರಾರಂಭಿಕ ಹಂತದಲ್ಲಿ ಸಾಮಾಜಿಕ ಬದಲಾವಣೆಗೆ ಪೂರಕವಾದ ದೃಷ್ಟಾಂತಗಳು ಇತಿಹಾಸದಲ್ಲಿ ಲಭ್ಯ. ಹಾಗೆಯೇ ವಿಜ್ಞಾನದಲ್ಲಿಯೂ ಸಂಪ್ರದಾಯದ ವಿರೋಧದ ಬಗೆಗೆ ಸಾಕ್ಷಿಗಳು ಲಭ್ಯ. ವೈಜ್ಞಾನಿಕ ಗ್ರೆಗೋರಿಯನ್ ಕ್ಯಾಲೆಂಡರ್ ಜಾರಿಗೆ ತಂದ ಧರ್ಮಗುರುವನ್ನು ವಿರೋಧಿಸಿ ಇದು ಧರ್ಮಗುರುವಿನ ಮೂಢನಂಬಿಕೆ ಎಂದು ಜರೆದ ವಿಪರ್ಯಾಸಗಳು ಇತಿಹಾಸದಲ್ಲಿವೆ. ಈ ಕಾರಣಕ್ಕೆ ಧರ್ಮ ಮತ್ತು ವಿಜ್ಞಾನಗಳೆರಡನ್ನೂ ಸಾಮಾಜಿಕ ಸಂಸ್ಕೃತಿಯ (ಪರಂಪರೆಯ) ಭಾಗ ಎಂದು ನೋಡುವುದು ಅನಿವಾರ್ಯವೂ ಕೂಡ.

### ಧರ್ಮ ಮತ್ತು ಸಾಮಾಜಿಕ ಬದಲಾವಣೆ

ಧರ್ಮ ಮಾನವನ ಸಾಮಾಜಿಕ ಸಂಸ್ಕೃತಿಯ ಒಂದು ಭಾಗ. ಸಾಮಾಜಿಕ ಬದಲಾವಣೆಯ ಸಂದರ್ಭದಲ್ಲಿ ಸಾಂಸ್ಥಿಕ ಧರ್ಮಗಳು ಸ್ಥಾಪಿತ ವ್ಯವಸ್ಥೆಯ ಪರವಾಗಿಯೇ ನಿಂತವು ಎಂಬುದು ನಿರ್ವಿವಾದ. ಬದಲಾವಣೆ ಸಮಾಜದ ಮೂಲಭೂತ ಅಂಶ. ಎಲ್ಲ ಸಮಾಜಗಳು ಬದಲಾಗುತ್ತವೆ, ಬದಲಾಗಿವೆ. ಹಾಗೆಯೇ ಧರ್ಮಗಳು ಸಹ. ಆದರೆ, ಧರ್ಮಗಳ ಅಸ್ತಿತ್ವ ಇರುವುದೇ ಅಂದಿನ ಧಾರ್ಮಿಕ ಸಂಪ್ರದಾಯಗಳನ್ನೂ ಒಳಗೊಂಡು, ಅಂದಿನ ಸಾಮಾಜಿಕ ಸಂಪ್ರದಾಯ ಅಜರಾಮರವಾಗಿ ಅನಾದಿಕಾಲದಿಂದಲೂ ಇರುವುದೆಂತಲೂ ಅಥವಾ ಸರ್ವ ಕಾಲಿಕವಾಗಿ ಶ್ರೇಷ್ಠ ಎಂಬ ನಂಬಿಕೆ ಕಲ್ಪಿಸುವಲ್ಲಿ ಹಾಗೂ ಅವಕ್ಕೆ ಪಾವಿತ್ರ್ಯತೆ ಕೊಡುವಲ್ಲಿ. ಭಾರತೀಯ ಇತಿಹಾಸದ ಉದಾಹರಣೆಯೊಂದನ್ನು ಕೊಡುವುದಾದರೆ, ಜೈನ ಹಾಗೂ ಬೌದ್ಧಧರ್ಮಗಳು ಗೃಹ್ಯ ಸೂತ್ರಗಳು ಪ್ರತಿನಿಧಿಸುವ ಧರ್ಮಕ್ಕೆ ಭಿನ್ನವಾದ ಧರ್ಮದ ಪರಿಕಲ್ಪನೆ ಕೊಡುತ್ತವೆ. ಯಜ್ಞ ಆಚರಣೆಗಳ ಮಹತ್ವವನ್ನು ನಯವಾಗಿ ತಿರಸ್ಕರಿಸುವ ಭಗವದ್ಗೀತೆ, ಸ್ವಆಸಕ್ತಿ ಇಲ್ಲದ ಯಜ್ಞವು ಶ್ರೇಷ್ಠ ಎನ್ನುವ ಮೂಲಕ, ಅಂದಿನ ಸಂಪ್ರದಾಯಸ್ಥ ಯಜ್ಞವೇ ಸರ್ವಸ್ವವಾದ ಧರ್ಮಕ್ಕೆ ಕೊಡಲಿ ಪೆಟ್ಟನ್ನು ಕೊಡುವ ಮೂಲಕ ಇದನ್ನೇ ಮಾಡುತ್ತದೆ. ಕ್ರಿ.ಪೂ. ಮೊದಲನೆಯ ಸಹಸ್ರಮಾನದ ಮಧ್ಯಭಾಗಕ್ಕೆ ಪ್ರಚಾರಕ್ಕೆ ಬಂದ ಈ ಎಲ್ಲಾ ಧರ್ಮಗಳಲ್ಲಿ ಏಕರೂಪಿ ಧಾರ್ಮಿಕ ಪರಿಕಲ್ಪನೆಯ ಬದಲಾವಣೆಗೆ ಕಾರಣವನ್ನು ಧರ್ಮದಲ್ಲಿಯೇ ಹುಡುಕಲು ಸಾಧ್ಯವಾಗುವುದಿಲ್ಲ. ಆ ಕಾಲದ ಸಾಮಾಜಿಕ ಬದಲಾವಣೆಯ ಭಾಗವಾಗಿ ಈ ಬದಲಾವಣೆ ಬಂದಿರಬೇಕೆಂದು ಇತಿಹಾಸಕಾರರು ಸಕಾರಣವಾಗಿಯೇ ಭಾವಿಸುತ್ತಾರೆ. ಆದರೆ, ಧರ್ಮಗಳು 'ಧಾರ್ಮಿಕ' ವಿವರಣೆಗಳ ಮೂಲಕವೇ ಈ ಸಾಮಾಜಿಕ ಬದಲಾವಣೆಗೆ ನ್ಯಾಯಬದ್ಧತೆ ಒದಗಿಸುತ್ತವೆ. ಧರ್ಮದ ಪ್ರಾರಂಭಿಕ ಹಂತದಲ್ಲಿ ಬದಲಾವಣೆಗೆ ಒದಗಿಸುವ ಈ ನ್ಯಾಯ ಬದ್ಧತೆಯೇ ಆ ಧರ್ಮಗಳು ಬೆಳೆಯಲು ಕಾರಣವಾಗಿರಬಹುದು. ಬೌದ್ಧಧರ್ಮ, ಕ್ರೈಸ್ತಧರ್ಮ, ಶರಣ ಧರ್ಮ, ಭಕ್ತಿ ಪಂಥಗಳು, ಸಾಮಾಜಿಕ, ರಾಜಕೀಯ ಅಧಿಕಾರ ವಂಚಿತರಿಗೆ ಧ್ವನಿಯಾದದ್ದು ಒಂದು ಚಾರಿತ್ರಿಕ ಸತ್ಯ. ಇತಿಹಾಸಕಾರರು ಬೌದ್ಧಧರ್ಮ ಕ್ಷತ್ರಿಯ, ಗಹಪತಿಗಳಿಂದ ಹಾಗೂ ಭಕ್ತಿಪಂಥಗಳು (ಮುಖ್ಯವಾಗಿ ದಕ್ಷಿಣ ಭಾರತದಲ್ಲಿ) ಕುಲಕಸುಬುದಾರರಿಂದ ಪಡೆದ ಬೆಂಬಲದ ಬಗೆಗೆ ಗಮನ ಸೆಳೆದಿದ್ದಾರೆ. ಇಂತಹ ಬೆಂಬಲಕ್ಕೆ ಸಾಮಾಜಿಕ ಕಾರಣಗಳನ್ನು ಹುಡುಕುವ ಇತಿಹಾಸಕಾರರು, ಹೆಚ್ಚಿನ ಆರ್ಥಿಕ, ಸಾಮಾಜಿಕ ಸ್ಥಾನಮಾನ ಪಡೆದ ಜಾತಿಗಳಿಗೆ ಹೆಚ್ಚಿನ ಧಾರ್ಮಿಕ ಸ್ಥಾನಮಾನ ಕೊಡಲು ಅಂದಿನ ಧರ್ಮಗಳ ತಿರಸ್ಕರಣೆಯೇ ಪ್ರಮುಖ ಕಾರಣ ಎನ್ನುತ್ತಾರೆ. (ಧರ್ಮದ ಈ ಪ್ರಾರಂಭಿಕ ಹಂತವನ್ನು ಸಾಮಾಜಿಕ, ಧಾರ್ಮಿಕ ಪರಿಕಲ್ಪನೆಗಳನ್ನು ಪುನರ್‌ರಚಿಸುವ ಉದ್ದೇಶ, ಆಶಯ ಹೊಂದಿದ ಚಳುವಳಿಗಳಿಗೆ ಹೋಲಿಸಬಹುದು). ಕಾಲಾಂತರದಲ್ಲಿ ಇವೇ ಧರ್ಮಗಳು ಸಾಂಸ್ಥೀಕರಣಗೊಳ್ಳುತ್ತವೆ ಹಾಗೂ ಅವುಗಳಲ್ಲಿ ಸಂಕೇತಗಳಿಗೆ, ಆಚರಣೆಗಳಿಗೆ ಮಹತ್ವ ಹೆಚ್ಚುತ್ತದೆ. ಇದು, ಆ ಧರ್ಮಗಳು ವ್ಯವಸ್ಥೆಯ ಭಾಗವಾದುದರ ಸೂಚನೆ. ಸಾಂಸ್ಥಿಕ ಧರ್ಮಗಳು ವ್ಯವಸ್ಥೆಯ ಭಾಗವಾಗುವುದರಿಂದಲೇ ಅವು ಸಾಮಾಜಿಕ ಬದಲಾವಣೆಯ ಸಂದರ್ಭದಲ್ಲಿ ವಿರೋಧಿ ಪಾಳಯದ ಸದಸ್ಯರಾಗಿಬಿಡುತ್ತವೆ. ಈ ಕಾರಣಕ್ಕೆ ಇತಿಹಾಸದಲ್ಲಿ ಅವುಗಳ ಪಾತ್ರ ದ್ವಂದ್ವಾತ್ಮಕ ಎಂದು ಪರಿಗಣಿಸಲಾಗಿದೆ. ಒಮ್ಮೆ ಟಾಲೆಮಿಯ ಭೂ ವಿಶ್ವಕೇಂದ್ರವನ್ನು ತಮ್ಮ ದೃಷ್ಟಿಕೋನದ ಭಾಗವಾಗಿಸಿಕೊಂಡು ಅದಕ್ಕೆ ಪಾವಿತ್ರ್ಯತೆಯನ್ನು ಸಹ ಕ್ರೈಸ್ತ ಧಾರ್ಮಿಕ ವ್ಯವಸ್ಥೆ ದಯಪಾಲಿಸಿತು. ದೈವ ಸೃಷ್ಟಿಯೇ ಹೀಗೆಂದು ವ್ಯಾಖ್ಯಾನಿಸಿದಾಗ, ಆ ದೈವ ಸೃಷ್ಟಿಯ ತಿರಸ್ಕರಣೆ ಅದರೊಂದಿಗೆ ಹೆಣೆದುಕೊಂಡ ಧಾರ್ಮಿಕ ಸಂಸ್ಥೆಗಳ ತಿರಸ್ಕರಣೆಯೂ ಆಗಿಬಿಡಬಹುದಲ್ಲವೆ ? ಭಾರತೀಯ ಸಂದರ್ಭದಲ್ಲಿ ಚಾತುರ್ವರ್ಣ್ಯ ಪರಿಕಲ್ಪನೆ ಧರ್ಮದ ಭಾಗವಾದ ಮೇಲೆ, ಅದರ ಉಲ್ಲಂಘನೆ, ತಿರಸ್ಕರಣೆ ಅಧಾರ್ಮಿಕವಾಗಿಬಿಡುತ್ತದೆ. ಇದರಿಂದುಂಟಾಗುವ ಮೇಲು, ಕೀಳು, ಅಶುದ್ಧತೆಯೆಂಬ ಪರಿಕಲ್ಪನೆಗಳನ್ನು ತನ್ನದಾಗಿಸಿಕೊಂಡ ಧಾರ್ಮಿಕ ವ್ಯವಸ್ಥೆ ಆಯುರ್ವೇದದಂತಹ ಅನುಭವಜನ್ಯ ಜ್ಞಾನವನ್ನು ಸಂಪಾದಿಸಿದ ಪಂಡಿತರನ್ನೂ ಕೀಳಾಗಿ ನೋಡಿದೆ. ಅಶುದ್ಧವೆಂಬ ಕಾರಣಕ್ಕೆ ಯಜ್ಞಯಾಗಾದಿಗಳಿಗೆ ಅವರನ್ನು ಆಹ್ವಾನಿಸಬಾರದು ಎಂಬ ಧಾರ್ಮಿಕ ಫರಮಾನನ್ನು ಹೊರಡಿಸಿರುವ ಉಲ್ಲೇಖಗಳೂ ಇವೆ.

### ವಿಜ್ಞಾನ ಮತ್ತು ಪರಂಪರೆ

ವಿಜ್ಞಾನ ಸಂಪ್ರದಾಯದಲ್ಲಿಯೂ ವಿರೋಧದ ಸಂದರ್ಭಗಳು ಕಾಣಬರುತ್ತವೆ. ಕೋಪರ್‌ನಿಕಸ್‌ನ ಸೂರ್ಯಕೇಂದ್ರ ಸಿದ್ಧಾಂತ ಸ್ವೀಕಾರ ಸುಲಭವೇನೂ ಆಗಿರಲಿಲ್ಲ. ಭೂಮಿ ಚಲಿಸುತ್ತದೆ ಎಂದು ಭಾವಿಸುವುದೇ ಅಂದಿನ ಸಾಮಾನ್ಯ ಜ್ಞಾನಕ್ಕೆ ವ್ಯತಿರೇಕವಾಗಿತ್ತು. ಏಳನೆಯ ಶತಮಾನದ ಬ್ರಹ್ಮಗುಪ್ತನ ಭೂಮಿ ಚಲಿಸುತ್ತಿದ್ದಲ್ಲಿ ಪಕ್ಷಿಗಳು ತಮ್ಮ ಗೂಡಿಗೆ ಮರಳುತ್ತಿರಲಿಲ್ಲ ಎಂಬ ವಾದವು ಇದನ್ನೇ ತೋರಿಸುತ್ತದೆ. ಅಷ್ಟೇಕೆ, ಕ್ರಿ.ಶ. ೧೬ನೆಯ ಶತಮಾನದಷ್ಟು ಇತ್ತೀಚಿಗೆ, ತನ್ನ ನಿಖರ ಗ್ರಹಾವಲೋಕನಗಳಿಂದ ಖ್ಯಾತನಾದ ಟೈಕೋ ಬ್ರಾಹೆ ಸಹ ಇತರ ಗ್ರಹಗಳು ಸೂರ್ಯನನ್ನೂ, ಸೂರ್ಯ ಭೂಮಿಯನ್ನೂ ಪರಿಭ್ರಮಿಸುತ್ತಾನೆ ಎಂದೇ ಭಾವಿಸುತ್ತಾನೆ. ಗುರುತ್ವಾಕರ್ಷಣೆಯ ವಿವರಣೆಯಿಲ್ಲದೆ ಭೂಚಲನೆಯ ಪರಿಕಲ್ಪನೆ ಅಷ್ಟು ಅಸಂಗತವಾಗಿತ್ತು. ಡಾರ್ವಿನ್‌ನ ವಿಕಾಸವಾದ ಪ್ರಕಟವಾದಾಗ ಸಿಡಿಮದ್ದಿನ ಉಗ್ರಾಣಕ್ಕೆ ಬೆಂಕಿ ಇಟ್ಟಂತಾದುದು ಕೇವಲ ಧಾರ್ಮಿಕ ವಿರೋಧದ ಕಾರಣಕ್ಕಾಗಿಯೇ ಅಲ್ಲ. ಈ ವಿರೋಧ ವ್ಯಕ್ತಪಡಿಸುವಲ್ಲಿ ಹಲವು ಬುದ್ಧಿಜೀವಿಗಳೂ ಇದ್ದರು. ಅಲ್ಲಿಯವರೆಗಿನ ಲೆಮಾರ್ಕ್ ಮುಂತಾದವರ ವಿಕಾಸವಾದಗಳು ವಿಕಾಸಕ್ಕೆ ಒಂದಲ್ಲ ಒಂದು ಉದ್ದೇಶವನ್ನು ಆರೋಪಿಸುತ್ತಿದ್ದವು. ಡಾರ್ವಿನ್‌ನ

ಸಿದ್ಧಾಂತವು ಅಂದಿನ ಪರಿಸರ ಹಾಗೂ ಅಲ್ಲಿರುವ ಜೀವಿಗಳು ಪರಸ್ಪರ ಪ್ರಕ್ರಿಯಾತ್ಮಕವಾಗಿ, ಯಾವ ಹೊರ ಶಕ್ತಿಗಳ ಪ್ರಭಾವದ ಅಗತ್ಯವಿಲ್ಲದೆ, ಹೆಚ್ಚು ಸಂಕೀರ್ಣ ಜೀವಿಗಳ ವಿಕಾಸಕ್ಕೆ ಹಾದಿ ಮಾಡಿಕೊಡುತ್ತವೆ ಎಂಬ ನಿಲುವು ಹಲವರನ್ನು ಪೇಚಿಗೆ ಸಿಲುಕಿಸಿತ್ತು. ಯಾವುದೇ ಉದ್ದೇಶವಿಲ್ಲದ, ಪ್ರಕೃತಿ ಅಥವಾ ದೇವರ ಪೂರ್ವನಿರ್ಧರಿತ ಯೋಜನೆಯಿಲ್ಲದ 'ಪ್ರಗತಿ', 'ಅಭಿವೃದ್ಧಿ', 'ವಿಕಾಸ' ಎಂಬ ಪದಗಳಿಗೆ ಅರ್ಥವೇನು ? ಎಂಬ ಪ್ರಶ್ನೆಯೇ ಅವರ ಈ ಪೇಚಿಗೆ ಕಾರಣವೆನ್ನಬಹುದು. ಮಾನವನ ಪ್ರತಿಯೊಂದು ಕ್ರಿಯೆಯೂ ಒಂದು ನಿರ್ದಿಷ್ಟ ಉದ್ದೇಶ ಹೊಂದಿರುವುದರಿಂದ ಪ್ರಕೃತಿಯು ಹಾಗೆಯೇ ಇರಬೇಕೆಂದು ಮಾನವ ಭಾವಿಸುತ್ತಾನೆ. ಇಂತಹ ಪರಿಕಲ್ಪನೆಗೆ ಡಾರ್‌ವಿನ್‌ನ ಸಿದ್ಧಾಂತ ಆಘಾತವನ್ನು ನೀಡಿತ್ತು. ಈ ಕಾರಣಕ್ಕೆ ನವ ಚಿಂತನೆಗಳ ವಿರೋಧ ಕೇವಲ ಧರ್ಮಕ್ಕೆ ಮೀಸಲಲ್ಲ. ವಿಜ್ಞಾನ ಪರಂಪರೆಯೊಳಗಿನ ಬದಲಾವಣೆ ಇಂತಹುದೇ ವಿರೋಧವನ್ನು ಒಳಗೊಂಡಿರುತ್ತದೆ. ವಿಜ್ಞಾನ ಪರಂಪರೆಯಲ್ಲಿನ ಚರ್ಚೆಯಲ್ಲಿ ಜನಪ್ರಿಯ ಪ್ರಾಪಂಚಿಕ ಪರಿಕಲ್ಪನೆಗಳನ್ನು ರೂಪಿಸುವ ವಿಜ್ಞಾನ ಚಿಂತನಗಳನ್ನಷ್ಟೇ ಬದಲಾವಣೆ ಎಂದು ಭಾವಿಸಬೇಕಾಗಿಲ್ಲ. ಯುಕ್ಲಿಡಿಯನ್ ರೇಖಾಗಣಿತ ಪದ್ಧತಿಗೆ ಭಿನ್ನವಾದ ಅಯುಕ್ಲಿಡಿಯನ್ ರೇಖಾಗಣಿತ ಸೃಷ್ಟಿಸಿದ ಗಣಿತ ಶಾಸ್ತ್ರಜ್ಞ ಗೌಸ್ ಅದನ್ನು ಪ್ರಕಟಿಸುವ ಧೈರ್ಯ ತೋರದಿದ್ದದ್ದು ಆಗಿನ ಸಂಪ್ರದಾಯ ಹಾಗೂ ನವ ಚಿಂತನಗಳ ಮಧ್ಯದ ಆಯ್ಕೆಯ ಸಮಸ್ಯೆಯನ್ನು ಎತ್ತಿ ತೋರಿಸುತ್ತದೆ. ಇಂತಹ ಹಲವು ಹತ್ತು ವಿಜ್ಞಾನದ ಪರಂಪರೆಯ ಬದಲಾವಣೆಗೆ ವಿಜ್ಞಾನ ಇತಿಹಾಸ ವಿರೋಧ ದಾಖಲಿಸಿದೆ.

ವಿಜ್ಞಾನವನ್ನು ಅದು ಹುಟ್ಟಿದ ಸಮಾಜದಿಂದ ಬೇರ್ಪಡಿಸಿ ನೋಡುವುದು ಅಸಾಧ್ಯ ಎಂಬ ಮೂಲಗ್ರಹಿಕೆಯಿಂದ ವಿಜ್ಞಾನ ಇತಿಹಾಸವನ್ನು ನೋಡುವ ಬರ್ನಾಲ್ ಬಂಡವಾಳಶಾಹಿ ವ್ಯವಸ್ಥೆಯ ಗೆಲವು ಬಹುಕಾಲದ (ಕ್ರಿ.ಶ. ೧೫ ರಿಂದ ೧೭ನೆಯ ಶತಮಾನ) ತೀವ್ರ ರಾಜಕೀಯ, ಸಾಮಾಜಿಕ, ಬೌದ್ಧಿಕ ವೈರುಧ್ಯ, ಘರ್ಷಣೆಗಳ ನಂತರವೇ ಸಾಧ್ಯವಾಯಿತು ಎನ್ನುತ್ತಾರೆ. ಈ ನವ ವ್ಯವಸ್ಥೆಯ ಉದಯ ಪ್ರಯೋಗ ವಿಜ್ಞಾನದ ಸಾಧ್ಯತೆ ಹಾಗೂ ಅವಶ್ಯಕತೆಗೆ ಸೂಕ್ತವಾದ ರಂಗ ಒದಗಿಸಿಕೊಟ್ಟಿತು ಹಾಗೂ ನಂತರದ ಹಂತದಲ್ಲಿ ವಿಜ್ಞಾನ ಮಹತ್ವದ ತಾಂತ್ರಿಕ ಬದಲಾವಣೆಗೆ ತನ್ನ ದೇಣಿಗೆ ಕೊಟ್ಟಿತು ಎನ್ನುತ್ತಾರೆ. ಮಾನವನ ಆರ್ಥಿಕ ವಿಕಾಸದಲ್ಲಿ ಬಂಡವಾಳಶಾಹಿ ವ್ಯವಸ್ಥೆ ಒಂದು ತಾತ್ಕಾಲಿಕ ಹಂತವಾದರೆ, ಅದರ ಆಧುನಿಕ ವಿಜ್ಞಾನ ಮಾನವ ಪೀಳಿಗೆಗೆ ಕೊಟ್ಟ ಶಾಶ್ವತ ಕೊಡುಗೆ ಎನ್ನುವ ಅವರ ನಿಲುವು ಇದೇ ತಾತ್ವಿಕ ನೆಲಗಟ್ಟಿನಿಂದ ಬಂದುದು.

ಪ್ರಕೃತಿಯ ಬಗೆಗೆ ವಸ್ತುನಿಷ್ಠ ಜ್ಞಾನ ಪಡೆಯಲು, ಇಂದಿನ ಸಾಧ್ಯತೆಯ ಮಿತಿಯಲ್ಲಿ, ಮಾನವನ ದೀಕ್ಷಾಬದ್ಧ ಪ್ರಯತ್ನ ಫಲನೀಡಬಲ್ಲದು ಎಂಬುದು ವಿಜ್ಞಾನದ ಮೂಲ ನಂಬಿಕೆ. ಇಂತಹ ಜ್ಞಾನವನ್ನು ಮಾನವನ ಏಳಿಗೆಗೆ ಬಳಸುವ ಮೂಲಕ ಸಮಾಜ ಕಲ್ಯಾಣಕ್ಕೆ ವಿಜ್ಞಾನ ದಾರಿ ಮಾಡಿಕೊಡುತ್ತದೆ ಎಂದು ಫ್ರಾನ್ಸಿಸ್ ಬೇಕನ್ ತನ್ನ ಆಶಯ ವ್ಯಕ್ತಪಡಿಸುತ್ತಾನೆ. ಈ ಆಶಯ ಎಷ್ಟು ಸರಿ ? ಉದಾಹರಣೆಗೆ, ವಿಜ್ಞಾನ ಒಂದು ಹೊಸ ಆವಿಷ್ಕಾರಕ್ಕೆ ಕಾರಣವಾಗ ಬಹುದು. ಆದರೆ, ಅದರ ಬಳಕೆಯ ಸಾಧ್ಯತೆ, ಈ ಹೊಸ ಆವಿಷ್ಕಾರವನ್ನು ನಿಯಂತ್ರಿಸುವ ಸಾಮಾಜಿಕ ಶಕ್ತಿಗಳ ಆಸಕ್ತಿ, ಆಶಯಗಳಿಗೆ ಅನುಗುಣವಾಗಿರುತ್ತದೆ. ನಾವು ವಿಜ್ಞಾನವನ್ನು ಮೂಲ ವಿಜ್ಞಾನ, ಅನ್ವಿತ ವಿಜ್ಞಾನ ಎಂದು ವಿಭಜಿಸುತ್ತೇವೆ. ಇವೆರಡರ ಮಧ್ಯದ ವ್ಯತ್ಯಾಸ, ಅಮೂರ್ತ ಸಾಧ್ಯತೆ ಹಾಗೂ ಮೂರ್ತ ಬಳಕೆಯಲ್ಲಿರುವ ವ್ಯತ್ಯಾಸ.

ವಿಜ್ಞಾನದ ಪ್ರಕೃತಿಯ ಶೋಧ, ಹಿಂದಿನಂತೆ ಮನೆಯ ಹಿತ್ತಲ ಪ್ರಯೋಗಶಾಲೆಯಲ್ಲಿ, ಮನೆಯ ತಾರಸಿಯ ಮೇಲಿನ ವೀಕ್ಷಣಾಲಯದಲ್ಲಿ ಇಂದು ಅಸಾಧ್ಯ. ಬೃಹತ್ ಬಂಡವಾಳ ಅಗತ್ಯವಾಗುವ, ವಿಜ್ಞಾನಿಗಳ ಸಾಂಘಿಕ ಪ್ರಯತ್ನವಾಗಿ ಸಂಶೋಧನೆ ಬೆಳೆದಿದೆ. ಇದರ ಪರಿಣಾಮವನ್ನು ಸಹ ಮನನ ಮಾಡಿಕೊಳ್ಳುವ ಅಗತ್ಯವಿದೆ. ಬಹಳಷ್ಟು ಸಲ ಇಂತಹ ಬಂಡವಾಳ ಹೂಡಿಕೆ ಬಹುರಾಷ್ಟ್ರೀಯ ಕಂಪನಿಗಳೇ ತೊಡಗಿಸುವ ಪರಿಣಾಮ ಏನಾಗಬಹುದು ಎಂಬುದರ ಅಂದಾಜು ಸಹ ಅಗತ್ಯ. ಇಂದು ತೀವ್ರ ಕಾಳಜಿ ವ್ಯಕ್ತಪಡಿಸುತ್ತಿರುವ ಓಝೋನ್ ರಂಧ್ರದಂತಹ ವಿಷಯಗಳಲ್ಲಿ ಅಡಕವಾಗಿರುವ ರಾಜಕೀಯ ಹುನ್ನಾರಗಳ ಬಗೆಗೆ ಚರ್ಚೆ ನಡೆಯುತ್ತಿರುವುದು ಈ ಹಿನ್ನೆಲೆಯಲ್ಲಿಯೇ. ಬಂಡವಾಳದೊಂದಿಗೆ (ಅದರ ಲಾಭದ ಆಶಯದೊಂದಿಗೆ) ಬೆಸೆದುಕೊಂಡ ಮೂಲ ಸಂಶೋಧನೆಗಳ ಬಗೆಗೆ ಇಂತಹುದೇ ಅನುಮಾನಗಳು ವ್ಯಕ್ತವಾಗುತ್ತಿವೆ.

'ಆರ್ಥಿಕ ಉದ್ದೇಶದಿಂದ ಪ್ರಜ್ಞಾಪೂರ್ವಕವಾಗಿ ಎಸಗುವ ವೈಜ್ಞಾನಿಕ ಅನ್ವಯಗಳ ಅನುಶೀಲನೆಯಲ್ಲಿ ವಿಜ್ಞಾನದ ನಿಜ ಮೌಲ್ಯಗಳು ಕಾಣಬಹುದೆಂದು ನಾನಂತೂ ಭಾವಿಸಿಲ್ಲ', ಎನ್ನುತ್ತಾರೆ ವಿಜ್ಞಾನಿ ಎಸ್. ಚಂದ್ರಶೇಖರ್. ಹಾಗಾದರೆ, ಮೂಲ ವಿಜ್ಞಾನದಲ್ಲಿ ವಿಜ್ಞಾನದ ನಿಜ ಮೌಲ್ಯಗಳಿಗೆ ಧಕ್ಕೆ ಇಲ್ಲವೆ ? ವಿಜ್ಞಾನಿಗಳ ಸಂಶೋಧನೆ ವೈಯಕ್ತಿಕ ಆಶಯ ಪ್ರಕೃತಿಯನ್ನು ಅರಿಯುವುದೇ ಆಗಿರಬಹುದು. ಆದರೆ ಸಾಮೂಹಿಕವಾದ ಪ್ರಯತ್ನದ ಸಾಮಾಜಿಕ ಪ್ರೇರಕ ಶಕ್ತಿಗಳ ಪ್ರಭಾವವನ್ನು ಕಡೆಗಣಿಸಲಾಗದು. 'ಅಮೆರಿಕದ ರಕ್ಷಣಾ ಆಸಕ್ತಿ' ಹೇಗೆ ಕೆಲ ಭೌತಶಾಸ್ತ್ರ ಶಾಖೆಗಳ ಮೂಲ ಅಜೆಂಡಾ ನಿರ್ಧರಿಸಿತು ಎಂಬ ಪಾಲ್ ಫೋರಮನ್‌ರ ಅಧ್ಯಯನದೆಡೆ ವಿಜ್ಞಾನ ಇತಿಹಾಸಕಾರರು ಗಮನ ಸೆಳೆದಿದ್ದಾರೆ. ಮಾನವಶಾಸ್ತ್ರಗಳಂತಹ ಸಾಮಾಜಿಕ ಅಧ್ಯಯನಗಳಲ್ಲಿ ಪಾಶ್ಚಿಮಾತ್ಯ ಸಮಾಜಗಳಲ್ಲಿರುವ ಅಭಿಪ್ರಾಯಗಳ ಬಗೆಗೆ ಚರ್ಚಿಸುತ್ತಾ ಶಾಸ್ತ್ರಜ್ಞರೊಬ್ಬರು ಪ್ರಾಚ್ಯಶಾಸ್ತ್ರ ಹಾಗೂ ವರ್ತನಾ ವಿಜ್ಞಾನ ಮಾನವ ಸ್ವಭಾವಸಿದ್ಧವಾಗಿ ಆಕ್ರಮಣಕಾರಿ ಪ್ರವೃತ್ತಿಯವನಲ್ಲ ಎಂದು ಘೋಷಿಸುತ್ತಿರುವಾಗಲೂ ಬಹಳಷ್ಟು ಜನ ಇದನ್ನು ಕೆಲವರ ಅತಿ ಆದರ್ಶದ ಒಣ ನಂಬಿಕೆ ಎಂದು ಭಾವಿಸುತ್ತಾರೆ. ಮಾನವನ ಪೂರ್ವಜರಿಗೆ (ಮಂಗಮಾನವರಿಗೆ) ಆರೋಪಿಸುವ ಈ ಆಕ್ರಮಣಶೀಲತೆ, ಪಾಶ್ಚಿಮಾತ್ಯರು ತಮ್ಮ ಸದ್ಯದ ಆಕ್ರಮಣಶೀಲತೆಗೆ ನೆಪವೊಂದನ್ನು ಹುಡುಕುವ ಪ್ರಯತ್ನವಾಗಿ ಕಾಣುತ್ತದೆ ಎನ್ನುತ್ತಾರೆ. ಇದು ವಿಜ್ಞಾನ ಸಿದ್ಧಾಂತ, ಅಭಿಗೃಹೀತಗಳನ್ನು ರೂಪಿಸುವಲ್ಲಿ ಎಂತಹ ಪರಿಣಾಮ ಮಾಡಬಹುದು ಎಂಬುದರ ಬಗ್ಗೆ ಗಮನಹರಿಸಬೇಕಾಗಿದೆ. ಮಾನವ, ಪ್ರಾರಂಭದಲ್ಲಿ ಬಳಸುವ ಸರಳ ಕಲ್ಲಿನ ಉಪಕರಣಗಳು ಆಯುಧಗಳಾಗಿರಬಹುದು. ಹಾಗೆಂದಮಾತ್ರಕ್ಕೆ ಆ ಆಯುಧಗಳು ಇಂದಿನ ಅಣುಬಾಂಬುಗಳಂತೆ ಎಂದು ತಪ್ಪಾಗಿ ವ್ಯಾಖ್ಯಾನಿಸಿ, ಆಹಾರ ಸಂಪಾದಿಸುವ ಉಪಕರಣಗಳನ್ನು ಮತ್ತು ನಾಶಮಾಡುವ ಉಪಕರಣಗಳನ್ನು ಒಂದೇ ಮಾಡುವ ಸಾಧ್ಯತೆಯೂ ಇದೆ. ವಿಜ್ಞಾನದಲ್ಲಿ, ಇನ್ನೂ ಮುಖ್ಯವಾಗಿ ಸಮಾಜ ವಿಜ್ಞಾನದಲ್ಲಿ, ವಿಜ್ಞಾನದ ಹೆಸರಿನಲ್ಲಿ ಕೊಡುವ ಸಿದ್ಧಾಂತಗಳ, ಮೂಲಗ್ರಹಿಕೆಗಳ ಬಗೆಗೂ ಜಾಗೃತರಾಗಿರಬೇಕಾದ ಅವಶ್ಯಕತೆಯನ್ನು ಇದು ಸೂಚಿಸುತ್ತದೆ.

ಎರಡನೆಯ ಮಹಾಯುದ್ಧದ ನಂತರ ಪಾಶ್ಚಿಮಾತ್ಯ ಸಮಾಜ ವಿಜ್ಞಾನವನ್ನು, ಅದರ ಸಾಮಾಜಿಕ ಸಂಬಂಧಗಳಿಂದ ಕಿತ್ತು, ಒಂದು ವಿಶಿಷ್ಟ ಶಕ್ತಿಯಾಗಿ ಬಿಂಬಿಸುವ ಪ್ರಯತ್ನ ಆರಂಭ ವಾಯಿತು ಎನ್ನುವ ವಿಜ್ಞಾನ ಇತಿಹಾಸಕಾರರು, ಹೀಗೆ ಬಿಂಬಿಸಿದ ವಿಜ್ಞಾನಕ್ಕೂ ಹಾಗೂ ಸಾಮಾಜಿಕ ಪ್ರಗತಿಗೂ ನಂಟು ಕಲ್ಪಿಸಲಾಯಿತು ಎನ್ನುತ್ತಾರೆ. ಇಂದು ಜಾಗತೀಕರಣದ ಅನಿವಾರ್ಯತೆಯನ್ನು ಬಿಂಬಿಸುತ್ತಿರುವುದು ಇದೇ ರೀತಿಯಲ್ಲಿ. ಪಶ್ಚಿಮದ ಸಮಾಜವನ್ನೇ ಆದರ್ಶವಾಗಿಸಿಕೊಂಡು ಅಲ್ಲಿಂದ ಬರುವ ತಂತ್ರಜ್ಞಾನ, ಸರಕು ಸಂಸ್ಕೃತಿ ಮೌಲ್ಯಗಳು ನಮ್ಮ ಎಲ್ಲ ಸಮಸ್ಯೆಗಳಿಗೆ ಉತ್ತರ ಎಂಬ ಗ್ರಹಿಕೆ ಮುಗ್ಧತೆಯಿಂದ ಬಂದುದೇನಲ್ಲ. ಪಶ್ಚಿಮದ ರಾಷ್ಟ್ರಗಳು ಬಿಂಬಿಸಿದ ಈ ವಿಜ್ಞಾನದ ಸ್ವರೂಪ ಹಾಗೂ ಸಾಮಾಜಿಕ ಪ್ರಗತಿಯ ವಿಕಲ್ಪವನ್ನು ಒಪ್ಪಿಕೊಳ್ಳದವರು ವಿಜ್ಞಾನ ವಿರೋಧಿಗಳೇನಲ್ಲ. ಇಂತಹ ಪಾಶ್ಚಿಮಾತ್ಯ ಬಿಂಬಿತ ವಿಜ್ಞಾನದ ಸ್ವರೂಪಕ್ಕೆ ಪ್ರತಿಕ್ರಿಯೆಯಾಗಿ ಹಲವರು ವಿಜ್ಞಾನದ ಬಗೆಗೆ ಸಂಶಯದಿಂದ ನೋಡತೊಡಗಿದ್ದಾರೆ. ಡಿ. ಆರ್. ನಾಗರಾಜ್ 'ವಿಜ್ಞಾನಕ್ಕೆ ಆತ್ಮ ನಿಷೇಧ ಅಗತ್ಯ' ಹಾಗೂ 'ಅದಕ್ಕೆ ನಿಯಂತ್ರಣ ಹೇರುವ' ಅಗತ್ಯವನ್ನು ಹೇಳುವುದು ಪಶ್ಚಿಮದ ಈ ವಿಜ್ಞಾನದ ಬಿಂಬವನ್ನು ವಿಶ್ಲೇಷಿಸದೆ ಸ್ವೀಕರಿಸಿದ್ದ ಕಾರಣಕ್ಕೇ ಎಂದೆನಿಸುತ್ತದೆ. 'ವಿಜ್ಞಾನ, ಆಧುನಿಕತೆಯ ಬಗೆಗೆ ಸಂದೇಹವಾದಿ' ಎಂದು ಡಿ. ಆರ್. ನಾಗರಾಜ್ ಹೇಳಿಕೊಂಡಾಗ್ಯೂ, 'ವಿಜ್ಞಾನದ ಪ್ರಿಯಶ್ರುತಿ ನನ್ನ ಮನಸ್ಸಿನ ಮೂಲೆಯಲ್ಲೊಂದು ಕಡೆ ಮಿಡಿಯುತ್ತಲೇ ಇದೆ', 'ಹಿಂದುಳಿದ ಜಾತಿಗಳು, ದಲಿತರು ಹಾಗೂ ಸ್ತ್ರೀಯರಿಗೆ ಇಂದು ಬಿಡುಗಡೆಯ ಹೆಚ್ಚಿನ ಸಾಧ್ಯತೆಗಳಿರುವುದೇ ಆಧುನಿಕ ನಾಗರೀಕತೆಯಲ್ಲಿ' ಎನ್ನುತ್ತಾರೆ. ವಿಜ್ಞಾನ, ಆಧುನಿಕತೆ, ವೈಚಾರಿಕತೆಯನ್ನು ಸರಕು ಸಂಸ್ಕೃತಿ, ಪಾಶ್ಚಿಮಾತ್ಯ ಸಂಸ್ಕೃತಿಗೆ ಸಮೀಕರಿಸುವ ಮುರಾರಿ ಬಲ್ಲಾಳರ ತೀರ ಸರಳ ಸಮೀಕರಣದ ಬಗೆಗೆ ಹೇಳುತ್ತಾ ಮನು ಚಕ್ರವರ್ತಿಯವರು ಜ್ಞಾನಶಾಖೆಯಾಗಿ ವಿಜ್ಞಾನವನ್ನು ವಿಮರ್ಶಿಸುವಾಗ ಎಚ್ಚರ ಅಗತ್ಯ ಎಂಬ ವಾದ ನಮ್ಮ ಗಮನ ಸೆಳೆಯುವುದು ಈ ಹಿನ್ನೆಲೆಯಲ್ಲಿಯೇ. ಇಂದು ವಿಜ್ಞಾನದ, ಆಧುನಿಕತೆಯ ಹೆಸರಿನಲ್ಲಿ ನಮ್ಮ ಮುಂದಿನ ಆಯ್ಕೆಗಳು ಸರಳವಲ್ಲ. ಕುದುರೆಮುಖದ ಗಣಿಗಾರಿಕೆ, ರಾಷ್ಟ್ರೀಯ ಉದ್ಯಾನವನದ ಯೋಜನೆ ಮುಂತಾದ ಪ್ರಶ್ನೆಗಳಿಗೆ ಉತ್ತರ ಸರಳವಾಗಿಲ್ಲ. ಪ್ರಗತಿಪರರು ಎಂದು ಗುರುತಿಸಿಕೊಂಡವರಲ್ಲಿಯೂ ಸಹ ವಿಜ್ಞಾನ, ಹಾಗೂ ಆಧುನಿಕ ತಂತ್ರಜ್ಞಾನದ ಬಳಕೆಯ ಪರಿಣಾಮಗಳ ಬಗೆಗೆ ಏಕಾಭಿಪ್ರಾಯದ ಕೊರತೆಯನ್ನಿದು ಸೂಚಿಸುತ್ತದೆ.

ವಿಜ್ಞಾನ, ಅದು ರೂಪಗೊಂಡ ಸಾಂಸ್ಕೃತಿಕ ಪರಿಸರದಿಂದ ಪ್ರಭಾವಿತವಾಗದೇ ಇರಲಾರದು ಎಂಬ ಗ್ರಹಿಕೆ, ವಿಜ್ಞಾನ ಕೊಡುವ ಜ್ಞಾನ ಒಂದು ನಿರ್ದಿಷ್ಟ ಸಮಾಜದಲ್ಲಿನ ಮಾನವನ ಸೃಷ್ಟಿ ಎಂಬ ಮೂಲ ಗ್ರಹಿಕೆಯಿಂದ ಬಂದುದು. ಹಾಗಾದರೆ, ಸಂಸ್ಕೃತಿ ವಿಶಿಷ್ಟ ವಿಜ್ಞಾನ ಸಾಧ್ಯವೇ ? ಅಂದರೆ, ಪಾಶ್ಚಿಮಾತ್ಯ ವಿಜ್ಞಾನ, ಹಿಂದೂ ವಿಜ್ಞಾನ, ಮುಸ್ಲಿಂ ವಿಜ್ಞಾನ ಹೀಗೆ ವಿಭಿನ್ನ ವಿಜ್ಞಾನಗಳನ್ನು ಸೃಷ್ಟಿಸಲು ಸಾಧ್ಯವೇ ? ಮಾನವ ಜನಾಂಗದ ಬೇರೆ ಬೇರೆ ಸಾಂಸ್ಕೃತಿಕ ಕವಲುಗಳು ಒಂದೇ ಪ್ರಕೃತಿಯನ್ನು ಭಿನ್ನ ಭಿನ್ನವಾಗಿ, ಒಂದಕ್ಕೊಂದು ಸಂಬಂಧ ವಿಲ್ಲದ ಅಥವಾ ವಿರುದ್ಧ ರೀತಿಯಲ್ಲಿ ಅರ್ಥೈಸಬಲ್ಲವು ಎಂಬ ಸ್ವೀಕೃತಿ ಪ್ರಕೃತಿಯ ಬಗೆಗಿನ ಮಾನವನ ಗ್ರಹಿಕೆಯ ಸಾರ್ವತ್ರಿಕತೆಗೆ ಧಕ್ಕೆಯಾಗುತ್ತದೆ ಎನ್ನುತ್ತಾರೆ ಜೋಸೆಫ್ ನಿಧಾಮ್. ತತ್ವಶಾಸ್ತ್ರ, ಸಾಹಿತ್ಯದಂತೆ ವಿಜ್ಞಾನದ ಜ್ಞಾನ ಸಂಸ್ಕೃತಿಯ ಭಾಗ ಎನ್ನುತ್ತಾರೆ ರೋಮಿಲಾ ಥಾಪರ್. ಇದು ಗಾರ್ಡನ್ ಚೈಲ್ಡ್‌ರ ಮಾನವ ಪ್ರಗತಿ ಎಂದರೆ 'ಸಾಂಸ್ಕೃತಿಕ ಪ್ರಗತಿ' ಎಂಬ ವ್ಯಾಖ್ಯಾನವನ್ನು ನೆನಪಿಗೆ ತರುತ್ತದೆ. ಸಂಸ್ಕೃತಿಯ ಮಹತ್ವ ಅರಿವಾಗಬೇಕಾದಲ್ಲಿ ಮಾನವ ತನ್ನ

ಜೈವಿಕ ಅಗತ್ಯಗಳನ್ನು ಸಂಸ್ಕೃತಿಯ ಮೂಲಕವೇ ಗ್ರಹಿಸುತ್ತಾನೆ ಎಂಬ ಅರಿವು ಮುಖ್ಯ. ಉದಾಹರಣೆಗೆ, ಮಾನವನಿಗೆ ಇತರ ಎಲ್ಲಾ ಜೀವಿಗಳಂತೆ ಆಹಾರ ಅಗತ್ಯ. ಆದರೆ ಏನು ತಿನ್ನಬೇಕು, ಹೇಗೆ ತಿನ್ನಬೇಕು ಎಂಬುದನ್ನು ಅವನ ಸಂಸ್ಕೃತಿ ನಿರ್ಧರಿಸುತ್ತದೆ. ಜೈವಿಕ ಅಗತ್ಯಗಳೊಂದಿಗೆ ಮಾನವ ಸಾಂಸ್ಕೃತಿಕ ಅಗತ್ಯಗಳನ್ನೂ ಸೃಷ್ಟಿಸಿಕೊಂಡಿದ್ದಾನೆ. ಇತರ ಸಾಂಸ್ಕೃತಿಕ ಅಗತ್ಯಗಳಂತೆ ಸಾಹಿತ್ಯ ವಿಜ್ಞಾನಗಳೆರಡೂ ಮಾನವ ಸಮಾಜದ ಭಾಗವಾಗಿ ಒಂದನ್ನೊಂದು ಪ್ರಭಾವಿಸುತ್ತವೆ, ಆದರೆ ಒಂದರ ಬದಲು ಇನ್ನೊಂದಲ್ಲ. ಇಂತಹ ಗ್ರಹಿಕೆಯಲ್ಲಿ ಡಿ. ಆರ್. ನಾಗರಾಜ್ ಅವರು ಇದೆಯೆಂದು ಭಾವಿಸಿದ 'ವಿಜ್ಞಾನದ ಎಪಿಸ್ಟಮಿ' ಮತ್ತು 'ಸಾಹಿತ್ಯದ ಪ್ರತಿಮೆಯ' ಮಧ್ಯ ವೈರುಧ್ಯಮಯವಾಗುತ್ತದೆ ಎಂದೆನಿಸುತ್ತದೆ.

ಧರ್ಮವನ್ನು ಇಂದು ಇತಿಹಾಸದ ಸೇಡಿನ ಆಯುಧವಾಗಿ ಬಳಸುವ ಫ್ಯಾಸಿಸ್ಟ್ ಧೋರಣೆ ಬಲವಾಗುತ್ತಿರುವ ಸಂದರ್ಭದಲ್ಲಿ ಧರ್ಮ, ವಿಜ್ಞಾನಗಳ ಬಗೆಗೆ ನಮ್ಮ ನಿಲುವು ಏನಾಗಬೇಕು? ಸಾಮಾಜಿಕ ವಿಕಾಸದ ಭಾಗವಾದ ಬೌದ್ಧಿಕ ವಿಕಾಸದ ಹಂತಗಳು ಪ್ರಾರಂಭಿಕ ಮಾಂತ್ರಿಕತೆ, ನಂತರದ ಧರ್ಮ ಹಾಗೂ ಇಂದಿನ ವಿಜ್ಞಾನ ಎನ್ನುವ ದೇವಿಪ್ರಸಾದ ಚಟ್ಟೋಪಾಧ್ಯಾಯ ಈ ಬಗೆಗೆ ಚರ್ಚಿಸಿದ್ದಾರೆ. ಮಾಂತ್ರಿಕತೆ, ವಿಜ್ಞಾನಗಳೆರಡೂ ಪ್ರಕೃತಿಯು ಮನಸೋ ಇಚ್ಛೆ ವರ್ತಿಸುವುದಿಲ್ಲ, ಬದಲಾಗದ ನಿಯಮಗಳು ಅದನ್ನು ನಿರ್ದೇಶಿಸುತ್ತಿವೆ ಎಂದು ಭಾವಿಸುತ್ತವೆ. ಈ ನಿಯಮಗಳನ್ನು ಅರಿಯುವ ಮೂಲಕ ಪ್ರಕೃತಿಯನ್ನು ಅರ್ಥೈಸಿ ಬಳಸಿಕೊಳ್ಳುವ ಆಶಯ ಪ್ರಕಟಿಸುತ್ತವೆ. ಇದಕ್ಕೆ ವಿರುದ್ಧವಾಗಿ ಧರ್ಮ 'ಪ್ರಪಂಚವು ಸಚೇತನ ಶಕ್ತಿಯಿಂದ ನಿರ್ದೇಶಿಸಲ್ಪಡುತ್ತದೆ' ಎಂದು, ಆ ನಿರ್ದೇಶಕ ಶಕ್ತಿಗಳನ್ನು ಅವುಗಳ ಉದ್ದೇಶಿತ ಮಾರ್ಗದಿಂದ ಬೇರೆ ಕಡೆ ತಿರುಗುವಂತೆ ಮಾಡಲು ಸಾಧ್ಯವೆಂದೂ ನಂಬುತ್ತದೆ. ತಾತ್ವಿಕ ನೆಲೆಗಟ್ಟನ್ನು ಒದಗಿಸಬಹುದಾದ ಇಂತಹ ನಿಲುವುಗಳ ಬಗೆಗೆ ಚರ್ಚಿಸುವಾಗ ಮಾನವೀಯತೆ ಆಧಾರದ ಸಮಾಜ ನಿರ್ಮಿಸುವ ಆಶಯ ಹೊಂದಿದವರ ಮಧ್ಯ ವಿಭಜನೆಗೆ ಈ ಚರ್ಚೆ ದಾರಿಯಾಗಬಾರದಷ್ಟೆ.

**ಬಿ. ಎಂ. ಪ್ರದೀಪ್ ಕುಮಾರ್**
ಪ್ಲಾಟ್ ನಂ. ೫೨, ಸತ್ಯನಾರಾಯಣಪೇಟೆ, ಗಂಗಾವತಿ - ೫೮೩ ೨೨೭, ಕೊಪ್ಪಳ ಜಿಲ್ಲೆ

# ಮಹಾದಾನ



ಬಿಂಬಿಸಾರ ಆಳುತಿಹ ಮಗಧ; ರಾಜಗೃಹ ರಾಜಧಾನಿ,
ಪುರದ ಹೊರಗೆ ವೇಣುವನ; ಬಂದು ತಂಗಿರಲು ಬುದ್ಧ ಜ್ಞಾನಿ
ಸಹಜ ಸೌಮ್ಯ ರಮ್ಯತೆಯು ಮಲರಿ ನೆಲೆಸಿತ್ತು ಮೈಯ ಚೆಲ್ವಿ;
ಆರ್ಯನಾಗಮನದ ಶುಭವಾರ್ತೆ ಘಮಘಮಿಸಿ ನಗರದಲ್ಲಿ
ಅಂದು ಸಂಜೆ ಇಳಿಹೊತ್ತಿನಲ್ಲಿ ಧರ್ಮಸಭೆ ನೆರೆದುದಲ್ಲಿ,
ಸರ್ವವರ್ಗ ಜಾತಿಮತ ಪಂಥದವರಿಹರು – ಭೇದವೆಲ್ಲಿ?
ಅರಳಿಕಟ್ಟೆ ಪದ್ಮಾಸನಸ್ಥ ಗೌತಮಗೆ ವ್ಯಾಸಪೀಠ,
ಹಳದಿ ಚೀವರದ ಉಡುಗೆ, ಸುರುಳಿ ಕರಿಕುರುಳ ಜಟಾಜೂಟ,
ಶಾಂತಿರಸವೆ ನಿಧಿಗೊಂಡ ಅವನ ದುಂಡುಮೊಗ – ಚಂದ್ರಬಿಂಬ,
ಮಾಗಿ ಹಣ್ಣುಹಣ್ಣಾದ ಬಣ್ಣ ಪಡುವಣದ ಬಾನ ತುಂಬ;
ಬಿಂಬಿಸಾರ ಸಾಮ್ರಾಟ ಬಂದ ಸಕಲ ಪರಿಜನರ ಜೊತೆಗೆ –
ಮುತ್ತು ಹವಳ ನವರತ್ನವಿರುವ ತಟ್ಟೆಗಳು ಕೈಗಳೊಳಗೆ!
ಸಾಕ್ಯಮುನಿಯ ಪದತಲದೊಳಿರಿಸುತವನೆಲ್ಲ ಭಕ್ತಿಯಿಂದ
ಕುಳಿತ ಕೆಲದಿ ತಾನಸಮ ದಾನಿ ಎಂಬ ಕಡು ಹಮ್ಮಿನಿಂದ.

ಬಡವನೊಬ್ಬ ಅನಿತರೊಳೆ ಬಂದ, ಚಿಂದಿಯದು ತೊಟ್ಟ ಬಟ್ಟೆ,
ಅವನ ಕೈಯೊಳಿದೆ ಮಣ್ಣತಟ್ಟೆ, ಅದರೊಳಗೆ ಅರ್ಧರೊಟ್ಟಿ,
ಗುರುವಿನಡಿಯೊಳಿರಿಸುತ್ತ ಅವನು ಶರಣೆಂದ ಹಣೆಯನಿಟ್ಟು,
(ಅರ್ಪಿಸಿಹನೊ ಎಂಬಂತೆ ಎದೆಯ ಬಟ್ಟಲೊಳು ತನ್ನನಿಟ್ಟು!)
ರೊಟ್ಟಿ ಕಂಡು ಮುದವಾಯ್ತು ಮುನಿಗೆ ಸವಿಜೇನೆ ಸಿಕ್ಕ ತೆರದಿ,
ತಲೆಯ ತೂಗಿ ತನ್ನ ಕಪ್ಪರದೊಳಿರಿಸಿದನು ಕೊಂಡು ಭರದಿ.

ಇದನು ಕಂಡು ಕನಲಿದನು ಮನದಿ ಸಾಮ್ರಾಟ ಕೇಣಗೊಂಡು –
''ಬುದ್ಧದೇವ ಮಾಡುವುದೆ ಇಂಥ ಅನ್ಯಾಯ ಕಂಡು ಕಂಡು!
ಮಗಧಕೆಲ್ಲ ನಾ ಸಾರ್ವಭೌಮ – ಇವನೋಡೆ ದಲಿತ-ದೀನ!
ಸಹಿಸಲೆಂತು-ಒಣತುಣುಕು ರೊಟ್ಟಿ ಕಳೆಯಿತಿದೊ ನನ್ನ ಮಾನ –
ಎದುರಿನಲ್ಲೆ ನೂರೊಂದು ತಟ್ಟೆ ಸಂಪತ್ತು - ನೋಡಲೊಲ್ಲ!
ಇಷ್ಟೆಯೆಂದು ಯಾರಿವಕೆ ನಿಖರ ಬೆಲೆಗಟ್ಟಿ ಹೇಳಬಲ್ಲ?
ಕೊಟ್ಟುದೆಲ್ಲ ವ್ಯರ್ಥವಿದು-ಅಲ್ಲದಿರೆ ನಾನು ಪರಮಭಕ್ತ;''
ಕುದಿಯುತಿಹುದು ವಂದಿ ಮಾಗಧಕೆ ಹಸಿದಿರುವ ಕ್ಷಾತ್ರ ರಕ್ತ!
ಅರಸು ಮನದ ತಳಮಳವ ಓದಿ ತಿಳಿಯುತ್ತ ದಿವ್ಯಜ್ಞಾನಿ
ಬುದ್ಧ ನುಡಿದ – ''ಎಲೆ ಅರಸ, ಅಲ್ಲ ನೀನು ಅಪ್ರತಿಮ ದಾನಿ,
ಬೆವರ ಹರಿಸಿ ಬಡವನಿವ ದುಡಿದ ರೊಟ್ಟಿಯೊಳಗರ್ಧವನ್ನೆ
ಭಿಕ್ಷೆಯಿತ್ತ – ಕಡೆಗಣಿಸುತಿಂತು ತನ್ನದೇ ಹಸಿವೆಯನ್ನೆ!
ತೋರಿಕೊಂಬ ಹೊರ ಮೆರೆತಕಿಹುದು ಅಹಮಿಕೆಯ ಕೊಳಕಿನಂಟು,
ಸರ್ವದಲ್ಲು ಸಮಭಾವ, ಹೃದಯ ಸಂಪ್ರೀತಿ ನಿಜದ ನಂಟು –
ಹಸಿದ ಹೊಟ್ಟೆ-ನೆತ್ತಿಗುಣಪಡಿಪ ಕರ್ತವ್ಯ ಧರ್ಮದೋಜ,
ಇವನೆ ಕುಲಜ, ಶೀಲ ಸತ್ಕುಲಜ, ಈ ರಮಕ ದಿಟಕು ರಾಜ!
ರಾಜನಾದರೇನಂತೆ ಲೌಕಿಕದ ಹುಸಿಗೆ ದಾಸ ನೀನು,
ದುಃಖ ತರುವ ಕಾಮನೆಗೆ ಬೆನ್ನ ತಿರುಗಿಸಿಹ ತ್ಯಾಗಿ ಇವನು;
ನೊಣೆದು ನೆರೆಯ ನಾಡುಗಳ ಸುಖಿಪ ರಣಉಗ್ರ ಕ್ರೂರಿ ನೀನು,
ತಿಂದು ಮುತ್ತು ರತ್ನಗಳ ತಣಿಸಲಹುದೇನು ಹಸಿವೆಯನ್ನು?
ಭಿಕ್ಷುಗಣಕೆ ಸಂತೃಪ್ತಿ - ದಿನದ ಭಿಕ್ಷಾನ್ನ ದೊರೆತರಾಯ್ತು
ದೀನ ಜನರ ಕಂಬನಿಯನೊರೆಸೆ ನರಜನ್ಮ ಧನ್ಯವಾಯ್ತು,
ಬಂಧು ಕೇಳು, ಹುಟ್ಟಲ್ಲ ನಿಜಕು ಮಾನವತೆಗಳತೆಗೋಲು –
ವ್ಯಕ್ತಿ ತಾನೆ ಸಾಧಿಸುತ ಪಡೆದ ಒಳಸತ್ವ ಬಾಳ ತಿರುಳು,
ಮೇಲು-ಕೀಳುಗಳನಳಿಸಿ, ಅರಿವನೆಚ್ಚರಿಸಿ ಸರ್ವರಲ್ಲಿ
ಧರ್ಮದರ್ಶಿ ಅರಸ ನೀನಾಗು ಸಂಪದದ ಗಳಿಕೆಯಲ್ಲಿ...''

ನಾಲ್ಕು ಆರ್ಯ ಸತ್ಯಗಳ ತಿಳಿಸೆ ಮೈದಡವಿ ಬುದ್ಧದೇವ
ಹಮ್ಮು ಬಿಮ್ಮುಗಳು ಕರಗಿ ರಾಜನೊಳು ಸ್ಫುರಿಸಿ ದೈನ್ಯಭಾವ
ಕಂಡುಕೊಂಡ ಎಲ್ಲರೊಳು ತನ್ನ ತಾ ಕಾಂಬ ಬಟ್ಟೆಯನ್ನು –
ಜೀವ ಸಂಕುಲವೆ ತನ್ನೊಳಿಂಬುಗೊಂಡಿರುವ ಸತ್ಯವನ್ನು.

ಇಂತು ಭಂತೆ ಕೃಪೆಯಿಂದ ಪಡೆದು ಹೊಸಹುಟ್ಟು ಬಿಂಬಿಸಾರ
ಶರಣು ಮೂರನಾಶ್ರಯಿಸಿ ಗೈದ ಆದರ್ಶ ರಾಜ್ಯಭಾರ.

**ಮುದೇನೂರ ಸಂಗಣ್ಣ**
ಚಿಗಟೇರಿ-೫೮೩ ೧೨೭, ಹರಪನಹಳ್ಳಿ ತಾಲೂಕು

# 'ರೇವಣಸಿದ್ಧರ್'

ರೇವಣಸಿದ್ಧರ್ ಯಾರು ? ಅವರು ಎಲ್ಲಿಯವರು ? ವೀರಶೈವ ಸಾಹಿತ್ಯಕ್ಕೆ ಅವರ ಕೊಡುಗೆಯೇನು ? ಮುಂತಾದ ವಿಚಾರಗಳನ್ನು ಮುಂದಿಟ್ಟುಕೊಂಡು ತಕ್ಕಮಟ್ಟಿನ ಸತ್ಯಾಸತ್ಯತೆಗಳನ್ನು ಕಂಡುಕೊಳ್ಳಬೇಕಾಗಿದೆ.

ತಮಿಳುನಾಡಿನ ವೀರಶೈವ ಸಾಹಿತ್ಯದಲ್ಲಿ ರೇವಣಸಿದ್ಧರ್ ಹೆಸರು ಕಂಡುಬರುತ್ತದೆ. ಅವರು ಹದಿನಾರನೆಯ ಶತಮಾನದಲ್ಲಿ ಇದ್ದವರೆಂದು ತಿಳಿದುಬರುತ್ತದೆ. ಹಾಗೂ ಪಂಚಾಚಾರ್ಯರಲ್ಲಿ ರೇಣುಕಾಚಾರ್ಯರೂ ಒಬ್ಬರು. ಈ ರೀತಿ ಕಂಡುಬರುವ ರೇವಣಸಿದ್ಧರ್ ಹಾಗೂ ರೇಣುಕಾಚಾರ್ಯ ಎಂಬ ನಾಮ ನಿರ್ದೇಶನಗಳು ಒಬ್ಬಾತನವೇ, ಅಥವಾ ಬೇರೆ ಬೇರೆ ವ್ಯಕ್ತಿನಾಮಗಳೇ ಎಂಬ ಸಂಶಯ ಉಂಟಾಗುತ್ತದೆ. ಈತನ ಬಗೆಗೆ ಕನ್ನಡ ಸಾಹಿತ್ಯದಲ್ಲಿ ಕಂಡುಬರುವ ಕೃತಿಗಳೆಂದರೆ – 'ಆದಯ್ಯನ ವಚನಗಳು', ಹರಿಹರನ 'ರೇವಣಸಿದ್ಧೇಶ್ವರ ರಗಳೆ', ಮಲ್ಲಣ್ಣ ಕವಿಯ 'ರೇವಣಸಿದ್ಧೇಶ್ವರ ಕಾವ್ಯ' ಚತುರ್ಮುಖ ಬೊಮ್ಮರಸನ 'ರೇವಣಸಿದ್ಧೇಶ್ವರ ಪುರಾಣ', ಮುಂತಾದ ಇಪ್ಪತ್ತೈದು ಕೃತಿಗಳಲ್ಲಿ ರೇವಣಸಿದ್ಧನ ವಿಚಾರವಾಗಿ ಉಲ್ಲೇಖವಿದೆ. ಹಾಗೂ ಕನ್ನಡ ಸಾಹಿತ್ಯ ವಿದ್ವಾಂಸರು ರೇವಣಸಿದ್ಧನನ್ನು ಈ ರೀತಿ ಗುರ್ತಿಸಿದ್ದಾರೆ.

ಬಸವಾದಿಗಳ ಸಮಕಾಲೀನರಾಗಿದ್ದು ಧರ್ಮಗುರುವೆನಿಸಿದ್ದ ರೇವಣಸಿದ್ಧರೇ ಈ ರೇವಣಸಿದ್ಧ. ಕಲ್ಯಾಣದ ಸಮೀಪದಲ್ಲಿ ಸಿದ್ಧಗಿರಿಯೆಂದು ಹೆಸರಾದ ತಾಣವೆ ಈ ರೇವಣಸಿದ್ಧರ ತಪೋಭೂಮಿಯೆಂದು ವಿದ್ವಾಂಸರು ಗುರ್ತಿಸಿದ್ದಾರೆ.

ರೇವಣಾರಾಧ್ಯ, ಮರುಳಾರಾಧ್ಯ, ಏಕೋರಾಮರಾಧ್ಯ, ಪಂಡಿತಾರಾಧ್ಯ ಮತ್ತು ವಿಶ್ವಾರಾಧ್ಯ ಎಂಬ ಐದು ಜನ ಆಚಾರ್ಯರಿಂದ ಬಹಳ ಹಿಂದೆ ವೀರಶೈವ ಧರ್ಮ ಸ್ಥಾಪಿತವಾಯಿತೆಂಬ ಐತಿಹ್ಯವಿದೆ. ಈ ಆಚಾರ್ಯರು ಮೈಸೂರಿನ ಸಮೀಪದ ಬಾಳೆಹಳ್ಳಿ, ಬಳ್ಳಾರಿ ಹತ್ತಿರದ ಉಜ್ಜನಿ, ಹಿಮಾಲಯದ ಕೇದಾರ, ಕಾಶಿ ಮತ್ತು ಮದ್ರಾಸು ರಾಜ್ಯದ ಶ್ರೀಶೈಲ – ಈ ಸ್ಥಳಗಳಲ್ಲಿರುವ ಲಿಂಗಗಳಿಂದ ಯುಗ ಯುಗಗಳಲ್ಲಿಯೂ ಬೇರೆ ಬೇರೆ ಹೆಸರುಗಳಿಂದ ಹುಟ್ಟಿದರೆಂಬುದು ಇನ್ನೊಂದು ಐತಿಹ್ಯ.

ರೇವಣಸಿದ್ಧನ ಹುಟ್ಟೂರು ಕೊಲ್ಲಿಪಾಕಿಯೊ ಅಥವಾ ಮತ್ತಾವುದೋ ಎಂಬುದು ಅಸ್ಪಷ್ಟವಾಗಿದೆ. ಆದರೂ ಅವರ ಹುಟ್ಟೂರು ಕೊಲ್ಲಿಪಾಕಿಯೆ. ಆದರೆ, ಆತ ಕನ್ನಡಿಗನೇ ಹೊರತು ತೆಲುಗನಲ್ಲ. ಏಕೆಂದರೆ ಕೊಲ್ಲಿಪಾಕಿ ಅಥವಾ ಕೊಳ್ಳಿಪಾಕೆ ಎಂಬುದು ಈಗ ಕುಲ್ಪಾಕ, ಕುಲಪಾಕ ಎಂದಾಗಿದೆ. ಇದು ಕರ್ನಾಟಕ ಚಕ್ರವರ್ತಿಯಾಗಿದ್ದ ಎರಡನೆಯ ಜಯಸಿಂಹನ (ಕ್ರಿ.ಶ. ೧೦೧೫-೧೦೪೨) ರಾಜಧಾನಿಗಳಲ್ಲಿ ಒಂದಾಗಿತ್ತು. ಇದರಿಂದ ರೇವಣಸಿದ್ಧರು ಕನ್ನಡದವರೆಂದು ಸ್ಪಷ್ಟವಾಗುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ ಸಿದ್ಧರೇವಣ, ರೇವಣಸಿದ್ಧ, ರೇಣುಕಾಚಾರ್ಯ, ರೇಣುಕಾರಾಧ್ಯ, ರೇವಣಾಧ್ಯಾರ, ರೇವಣರಾಧ್ಯರ್, ರೇವಣಸಿದ್ಧರ್ ಎಂಬ ಹೆಸರುಗಳು ಕನ್ನಡ ಮತ್ತು ತಮಿಳು ವೀರಶೈವ ಸಾಹಿತ್ಯ ಕ್ಷೇತ್ರದಲ್ಲಿ ಗೋಚರಿಸುತ್ತವೆ. ಇವೆಲ್ಲಾ ಒಬ್ಬಾತನ ಹೆಸರುಗಳೆ ಎಂಬ ಸಂಶಯ ಉಂಟಾಗುವುದು ಸಹಜವೇ. ಏಕೆಂದರೆ ಈತ ವೀರಶೈವ ಧರ್ಮ ಸಂಸ್ಥಾಪಕರೆಂದು, ಬಸವಾದಿ ಪ್ರಮಥರ ಸಮಕಾಲೀನರೆಂದೂ ಹಾಗೂ ಹದಿನಾರನೆಯ ಶತಮಾನದ ತಮಿಳುನಾಡಿನ ವೀರಶೈವ ಧರ್ಮದ ಪ್ರಚಾರಕರೆಂದೂ ಗುರ್ತಿಸಲ್ಪಡುತ್ತಾರೆ. ಇಂತಹ ಅನೇಕ ಅಂಶಗಳು ಈತನು ಬದುಕಿದ್ದ ಕಾಲದ ವಿಚಾರದಲ್ಲಿ ಸಂಶೋಧಕನಿಗೆ ಗೊಂದಲವನ್ನು ಸೃಷ್ಟಿಸಿವೆ.

ತಮಿಳು ವೀರಶೈವ ಸಾಹಿತ್ಯದಲ್ಲಿ ರೇವಣಸಿದ್ಧರ್ ಬಗೆಗೆ ಕಂಡುಬರುವ ವಿಚಾರಗಳನ್ನು ನಾವು ಈ ರೀತಿ ನೋಡಬಹುದು.

''ಪುಲಿಯೂರ್ ಚಿದಂಬರ ರೇವಣಸಿದ್ಧರ್''
''ತೊಂಡೈನನ್ನಡು ದೊಲಂಗಿಯ ಪುಲಿಯೂರ್
ಎಂಡುರುಙ ಚಿದಂಬರ ರೇವಣ್ಣುರೈತ್ತ''
''ತಂದರ ಪುಲಿಯೂರ್ ಚಿದಂಬರ ಚಿದಂಬರ
ರೇವಣನ್''

ಈ ಸಾಲುಗಳಲ್ಲಿ ''ಪುಲಿಯೂರು ಚಿದಂಬರ ರೇವಣಸಿದ್ಧರ್'' ಎಂದು ಉಲ್ಲೇಖ ಗೊಂಡಿರುವುದರಿಂದ ರೇವಣಸಿದ್ಧರು ತಮಿಳು ನಾಡಿನ ಚಿದಂಬರದವರೆಂದು ಅನೇಕ ವಿದ್ವಾಂಸರು ಗ್ರಹಿಸಿದ್ದುಂಟು. ಆದರೆ ರೇವಣಸಿದ್ಧರ ಊರು ಪುಲಿಯೂರ್, ಇವರ ತಂದೆಯ ಹೆಸರೇ ಚಿದಂಬರ. ತಾಯಿಯ ಹೆಸರು ಎಲ್ಲೂ ಕಂಡುಬರುವುದಿಲ್ಲ. ಇವರು ಶೈವ ಧರ್ಮಕ್ಕೆ ಸಂಬಂಧಿಸಿದವರೆಂದು ತದನಂತರ ವೀರಶೈವಕ್ಕೆ ಸೇರಿದರೆಂದು ತಿಳಿದುಬರುತ್ತದೆ. ಇದಕ್ಕೆ ಅವರು ಬರೆದ ವೀರಶೈವ ಕೃತಿಗಳೆ ಸಾಕ್ಷಿಯಾಗಿವೆ.

ತಿರುಪ್ಪಟ್ಟೀಚ್ಚು ಪುರಾಣಮ್, ತಿರುವಲಂಚುಳಿ ಪುರಾಣಮ್, ತಿರುಮೆರ್ರಳ್ಳಿ ಪುರಾಣಮ್, ಅಕಾರಾದಿ ನಿಘಂಟು, ಶಿವಜ್ಞಾನ ಧೀಪಂ, ಬ್ರಹ್ಮ ರಹಸ್ಯ ಷಟ್‌ಸ್ಥಲಮ್, ವಿರಾಗಮ ಷಟ್‌ಸ್ಥಲಮ್-ಮುಂತಾದವುಗಳಲ್ಲಿ ಪುರಾಣ ಕೃತಿಗಳು ದೊರತಿಲ್ಲ. ಇನ್ನುಳಿದ ನಾಲ್ಕು ಕೃತಿಗಳು ಅಧ್ಯಯನಕ್ಕೆ ಲಭ್ಯವಿವೆ. ಅವುಗಳಲ್ಲಿ ಅಕಾರಾದಿ ನಿಘಂಟು 'ಚೊತ್ತಿರ ಅಕರಾದಿ' ಹಾಗೂ 'ರೇವಣಸಿದ್ಧಿಯರ್ ಚೊತ್ತಿರ' ಎಂಬ ಹೆಸರಿನಿಂದ ಪ್ರಸಿದ್ಧಿ ಹೊಂದಿದೆ. ಈ ಕೃತಿಯು ಕ್ರಿ.ಶ.೧೫೫೪ರಲ್ಲಿ ರಚಿಸಲ್ಪಟ್ಟಿದೆ. ತಮಿಳು ಸಾಹಿತ್ಯದಲ್ಲಿ 'ಅಕಾರಾದಿ' ಎನ್ನುವ ಪದವನ್ನು ಮೊದಲು ಪರಿಚಯಿಸಿದವರು ರೇವಣಸಿದ್ಧರ್.

ತಮಿಳಿನಲ್ಲಿ ಯಾವುದೆ ಅಕಾರಾದಿ ಪ್ರಕಟವಾದರೂ ಮುನ್ನುಡಿಯಲ್ಲಿ ರೇವಣಸಿದ್ಧರ ಅಕಾರಾದಿಯನ್ನು ಸ್ಮರಿಸಿ ಮುನ್ನಡೆಯುತ್ತಾರೆ. ಈ ನಿಘಂಟಿನಲ್ಲಿ ೩೩೬೮ ಪದಾರ್ಥಗಳಿಂದ ಕೂಡಿದೆ. ತಮಿಳಿನ ನಿಘಂಟು ಸಾಹಿತ್ಯದಲ್ಲಿ ಈ ಕೃತಿ ವಿಶೇಷ ಮನ್ನಣೆಯನ್ನು ಪಡೆದುಕೊಂಡಿದೆ.

'ಶಿವಜ್ಞಾನ ಧೀಪಮ್' ಎಂಬ ಕೃತಿಯಲ್ಲಿ ಶಿವನನ್ನು ಕುರಿತು ಹೇಳಲ್ಪಟ್ಟಿದೆ. ಹಾಗೂ ಬ್ರಹ್ಮ ರಹಸ್ಯ ಷಟ್‌ಸ್ಥಲ ಹಾಗೂ ವಿರಾಗಮ ಷಟ್‌ಸ್ಥಲ ಎಂಬ ಕೃತಿಗಳು ವೀರಶೈವ ಧರ್ಮದ ಮಹತ್ವವನ್ನು ತಿಳಿಸುವಂತಹ ಕೃತಿಗಳಾಗಿವೆ. ಇವುಗಳಲ್ಲಿ ಬ್ರಹ್ಮ ರಹಸ್ಯ ಷಟ್‌ಸ್ಥಲಮ್ ಎಂಬ ಕೃತಿಯು ೭೪ ಪದ್ಯಗಳನ್ನೂ ಹಾಗೂ ವಿರಾಗಮ ಷಟ್‌ಸ್ಥಲಮ್ ಕೃತಿಯು ೧೯೯ ಪದ್ಯಗಳಿಂದ ಕೂಡಿದ್ದು ವೃತ್ತಂ ಛಂದಸ್ಸಿನಿಂದ ರಚಿಸಲ್ಪಟ್ಟಿದೆ.

ಈ ಎಲ್ಲಾ ಅಂಶಗಳನ್ನು ಅವಲೋಕಿಸಿದಾಗ ವೀರಶೈವ ಧರ್ಮ ಸಂಸ್ಥಾಪಕನೆಂದೂ, ಬಸವಾದಿ ಪ್ರಮಥರ ಸಮಕಾಲೀನನೆಂದೂ ಹಾಗೂ ಹದಿನಾರನೆಯ ಶತಮಾನದ ತಮಿಳು ನಾಡಿನ ವೀರಶೈವ ಧರ್ಮದ ಪ್ರಚಾರಕನೆಂದೂ ಕಂಡುಬರುವ ವ್ಯಕ್ತಿ ರೇವಣಸಿದ್ಧನೇ ಅಥವಾ ರೇಣುಕಾಚಾರ್ಯನೇ ಎಂಬುದನ್ನು ಗುರ್ತಿಸಬೇಕಾಗಿದೆ. ಈ ರೀತಿ ಬೇರೆ ಬೇರೆ ನಾಮ ನಿರ್ದೇಶನಗಳು ಕಂಡುಬರುವುದರಿಂದ ವ್ಯಕ್ತಿ ಒಬ್ಬನೆ ಅಥವಾ ಇಬ್ಬರೆ ಎಂಬ ಸಂಶಯ ಉಂಟಾಗುತ್ತದೆ.

ವಚನ ಸಾಹಿತ್ಯದಲ್ಲಿ ರೇವಣಸಿದ್ಧನನ್ನು ಪುರಾಣ ಪುರುಷನೆಂದು ಗುರ್ತಿಸಿದರೆ, ಈತ ತಮಿಳು ವೀರಶೈವ ಸಾಹಿತ್ಯದಲ್ಲಿ ಒಬ್ಬ ಐತಿಹಾಸಿಕ ವ್ಯಕ್ತಿಯಾಗಿ ಕಂಡುಬರುತ್ತಾನೆ. ಈ ರೀತಿ ವಿಭಿನ್ನ ಅಂಶಗಳು ಕಂಡುಬರುವುದರಿಂದ ಈತನ ಕಾಲ ವಿಚಾರದ ಬಗೆಗೆ ನಿರ್ದಿಷ್ಟ ರೂಪಗಳು ಕಂಡುಬರುವುದಿಲ್ಲ.

ಈ ಹಿನ್ನಲೆಯಲ್ಲಿ ಆತನ ವೈಯಕ್ತಿಕ ವಿಚಾರಗಳಲ್ಲಿಯೂ ಕೂಡಾ ದ್ವಂದ್ವ ಏರ್ಪಡುವುದರಿಂದ ಈತ ಕನ್ನಡಿಗನೇ, ಅಥವಾ ತಮಿಳನೇ ಇಲ್ಲವೆ, ತೆಲುಗನೇ ಎಂಬುದನ್ನು ಗುರ್ತಿಸುವುದು ಕಷ್ಟಕರ.

ಒಟ್ಟಿನಲ್ಲಿ ಈತ ಯಾರೆ ಆಗಿದ್ದರೂ ವೀರಶೈವನೆಂದು ಹೇಳುವಲ್ಲಿ ಎರಡು ಮಾತಿಲ್ಲ. ರೇವಣಸಿದ್ಧನ ವಿಚಾರವಾಗಿ ಸಂಶೋಧಕರು ಅಧ್ಯಯನ ನಡೆಸಿ ಮಹತ್ವದ ಅಂಶಗಳನ್ನು ಬೆಳಕಿಗೆ ತರಬೇಕಾಗಿದೆ. ಕಾಲಗರ್ಭದಲ್ಲಿ ಅಡಗಿದ ಈತನ ವೈಯಕ್ತಿಕ ವಿಚಾರಗಳನ್ನು ಹೊರತೆಗೆದು ಕೂಲಂಕುಷವಾಗಿ ಅಧ್ಯಯನ ನಡೆಸಬೇಕಾಗಿದೆ. ಈ ನಿಟ್ಟಿನಲ್ಲಿ ಸಂಶೋಧಕರಿಗೆ ತಾಳ್ಮೆ, ಸಮಯ ಹಾಗೂ ಅಧ್ಯಯನಶೀಲತೆ ಅವಶ್ಯವಾಗಿದೆ.

**ಪ್ರೊ॥ ಎಸ್. ಎಂ. ಸಜ್ಜನ**
ಕೇರಾಫ್ ಎ. ಎಸ್. ಸಜ್ಜನ, ಸರಕಾರಿ ಆಸ್ಪತ್ರೆ,
ಬಾದಾಮಿ-೫೮೭ ೨೦೧, ಬಾಗಲಕೋಟೆ ಜಿಲ್ಲೆ

### ಹೊಸತು ಓದಿಸುವವರು !

'ಹೊಸತು' ಹೆಚ್ಚು ಸಂಖ್ಯೆಯ ಓದುಗರಿಗೆ ತಲುಪಬೇಕು ಎಂಬ ಸದುದ್ದೇಶದಿಂದ ಯಾವ ಫಲಾಪೇಕ್ಷೆಯೂ ಇಲ್ಲದೆ ತಾವಿರುವ ಕಡೆ ಚಂದಾದಾರರನ್ನು ನೋಂದಾಯಿಸಿ ಸಹಕರಿಸುತ್ತಿರುವ ಕಡೂರಿನ **ಶ್ರೀ ಎ. ಎಸ್. ಶೇಷಗಿರಿ ಮಾಸ್ತರರ** ಪರಿಚಯ ನಮ್ಮ ಓದುಗರಿಗಿದೆ. ಈ ಪಟ್ಟಿಯಲ್ಲಿ ಕಾರ್ಕಳದ **ಶ್ರೀ ಅರವಿಂದ ಚೊಕ್ಕಾಡಿ**, ಹರಪನಹಳ್ಳಿಯ **ಶ್ರೀ ಮುದೇನೂರ ಸಂಗಣ್ಣ** ಬೆಂಗಳೂರಿನ **ಶ್ರೀ ರಂಗಪ್ಪ ಮಾಸ್ತರರು** ಹಾಗೂ **ಶ್ರೀ ಎಂ. ನಾರಾಯಣ** ಮತ್ತು ಭಾನಾಪುರದ (ಕೊಪ್ಪಳ) **ಶ್ರೀ ಶಂಕರ ಕೆ. ಪತ್ತಾರ** - ಇವರು ಸೇರುತ್ತಾರೆ.

ಈ ಮಿತ್ರರಿಗೆ ಅಭಿನಂದನೆಗಳು ಸಲ್ಲುತ್ತವೆ.
ಈ ನಿಟ್ಟಿನಲ್ಲಿ ನೀವೂ ಸಹಕರಿಸಬಹುದಲ್ಲವೆ ?

**- ವ್ಯವಸ್ಥಾಪಕ, ಹೊಸತು**

# ಬುಧಗ್ರಹ ನೋಡುವ ಅವಕಾಶ



ಬೇಸಿಗೆಯ ಧಗೆ ಆರಂಭವಾಗಿಬಿಟ್ಟಿದೆ. ಸೂರ್ಯ ಮರೆಯಾದೊಡನೆ ತಣ್ಣಗಿನ ಹೊರಗಿನ ಗಾಳಿಯನ್ನು ಸೇವಿಸೋಣ ಎನ್ನಿಸುತ್ತದೆ. ಹಾಗೆ ಸಂಜೆ ಹೊರಬಂದಾಗ ಪಶ್ಚಿಮಕ್ಕೆ ಕಣ್ಣು ಹಾಯಿಸಿ. ಸಂಜೆಗೆಂಪಿನಲ್ಲಿ ಮಂಕಾಗಿ ಕಾಣುವ ಚುಕ್ಕೆ ಅಲ್ಲದೆ, ದಿಗಂತದ ಅಂಚಿನಲ್ಲಿ ಆಚೀಚೆ ಯಾವುದೇ ನಕ್ಷತ್ರ ಇಲ್ಲ. ಹೀಗೆ ಏಕಾಂಗಿಯಾಗಿ ವಿರಾಜಿಸುವ ಈ ಚುಕ್ಕೆಯೇ ಬುಧ. ಅನೇಕ ಖಗೋಳಾಸಕ್ತರು ಇದನ್ನು ಹುಡುಕಲು ಪ್ರಯತ್ನಿಸಿ ಸೋತಿದ್ದಾರೆ. ಏಪ್ರಿಲ್ ೪ರಂದು ಇದರ ಪ್ರಕಾಶ ಗರಿಷ್ಠ. ಏಪ್ರಿಲ್ ೨-೩ರಂದು ಬಾಲಚಂದ್ರದ ಪಕ್ಕದಲ್ಲಿಯೇ ಕಾಣುವ ಇದರ ಸ್ಥಾನವನ್ನು ಮನನ ಮಾಡಿಕೊಳ್ಳಿ. ಮುಂದಿನ ದಿನಗಳಲ್ಲಿ ಚಂದ್ರ ಮುಂದಕ್ಕೆ ಓಡಿ ಹೋದರೂ ಇದನ್ನು ಗುರುತಿಸುವುದು ಕಷ್ಟವಾಗಲಾರದು. ೧೬ರಂದು ಗರಿಷ್ಠಕೋನ ಅಂದರೆ ಸುಮಾರು ೨೦ ಡಿಗ್ರಿ ಎತ್ತರದಲ್ಲಿ ಕಾಣುವುದು. ಅಂದರೆ ಸೂರ್ಯಾಸ್ತವಾದ ಮೇಲೆ ಒಂದು ತಾಸು ನೋಡಲು ಸಿಗುತ್ತದೆ. (ಹಿಂದೊಮ್ಮೆ ಇದೇ ಸಂದರ್ಭದಲ್ಲಿ ಗಂಟೆ ಎಂಬ ಶಬ್ದ ಬಳಸಿದ್ದು ಕೆಲವರು ಅಪರಾತ್ರಿ ಒಂದು ಗಂಟೆಯವರೆಗೂ ಕಾಣುತ್ತದೆ ಎಂದು ಅಪಾರ್ಥ ಮಾಡಿಕೊಂಡುಬಿಟ್ಟಿದ್ದರು!)

ದೂರದರ್ಶಕದ ಅನುಕೂಲ ಇರುವವರು ತಿಂಗಳುದ್ದಕ್ಕೂ ಬುಧವನ್ನು ಗಮನಿಸುತ್ತಾ ಬಂದರೆ ಕ್ರಮೇಣ ಅರ್ಧಚಂದ್ರದ ಆಕಾರದಿಂದ ಬಾಲಚಂದ್ರಕ್ಕೆ ಬದಲಾಗುವುದನ್ನು ಕಾಣಬಹುದು.




ಸಂಜೆಯಲ್ಲಿ ಕಾಣುವ ಇನ್ನೆರಡು ಗ್ರಹಗಳು ಶನಿ ಮತ್ತು ಗುರು. ದೂರದರ್ಶಕದಿಂದ ಶನಿಗ್ರಹವನ್ನು ಕಂಡಿರಾದರೆ, ಅದು ನಿಮಗಾಗಿ ಉಂಗುರಗಳನ್ನು ತೆರೆ ದಿಟ್ಟಿದೆಯೋ ಎನಿಸುವುದು. ಸೂರ್ಯನಿಂದ ಕನಿಷ್ಠದೂರದ ಬಿಂದು ಪುರರವಿಯನ್ನು ಅದು ಜುಲೈನಲ್ಲಿ ಹಾದು ಹೋಗುವುದರಿಂದ ಪ್ರಕಾಶವೂ ಗರಿಷ್ಠವಾಗಬಹುದಿತ್ತು. ಆದರೆ ಹಾಗೆ ಆಗುವುದಿಲ್ಲ ಏಕೆಂದರೆ ಭೂಮಿ ಅದರಿಂದ ದೂರ ಸರಿಯುತ್ತಿದೆ. ಮಿಥುನ ಮತ್ತು ವೃಷಭ ರಾಶಿಗಳ ನಡುವೆ ಇರುವ ಇದು ಹತ್ತರಂದು ಕ್ರಾಬ್‌ನೆಬ್ಯುಲದ ಸಮೀಪ (೨೦ ಆರ್ಕ್‌ಮಿನಿಟ್) ಕಾಣುತ್ತದೆ. ೭ ರಂದು ಚಂದ್ರ ಇದರ ಪಕ್ಕ ಹಾದುಹೋಗುವುದು. ತಿಂಗಳ ಆರಂಭದಲ್ಲಿ ರಾತ್ರಿ ೧೧ ಗಂಟೆಗೆ ಕಂತುವ ಇದು, ಮುಕ್ತಾಯದಲ್ಲಿ ೯.೩೦ಕ್ಕೇ ಕಂತುವುದು.

ಈಚಿನ ತಿಂಗಳುಗಳಲ್ಲಿ ದೂರದರ್ಶಕವಿರುವವರಿಗೆ ಗುರುಗ್ರಹ ಒಳ್ಳೆಯ ನೋಟ ಒದಗಿಸುತ್ತಿದೆ. ಆರು ವರ್ಷಗಳಿಗೊಮ್ಮೆ ಭೂಮಿ ಅದರ ಕಕ್ಷಾತಲವನ್ನು ಹಾಯುವ ಸಂದರ್ಭ ಇದು. ಸಿರಿಯಸ್ ನಕ್ಷತ್ರಕ್ಕಿಂತ ಪ್ರಕಾಶಮಾನವಾಗಿರುವ ಇದರ ನಾಲ್ಕು ಗೆಲಿಲಿಯನ್ ಉಪಗ್ರಹಗಳು ಅಯೋ, ಗಾನಿಮಿಡ್, ಕೆಲಿಸ್ಟೋ ಮತ್ತು ಯುರೋಪಾ ಕಣ್ಣು ಮುಚ್ಚಾಲೆ ಆಡುತ್ತಿವೆ. ಪ್ರತಿದಿನವೂ ಒಂದಲ್ಲ ಒಂದು ಗ್ರಹಣ, ಆಚ್ಛಾದನೆ ನಡೆಯುತ್ತಲೇ ಇದೆ. ಇವುಗಳ ನೆರಳು ಗುರುಗ್ರಹದ ಮೇಲೆ ಬೀಳುವುದನ್ನು ದೂರದರ್ಶಕದಿಂದ ಕಾಣಬಹುದು. ಉದಾಹರಣೆಗೆ ೧೦, ೧೧ರಂದು ಗಮನಿಸಿದಿರಾದರೆ ಕೆಲಿಸ್ಟೋ ಮತ್ತು ಅಯೋ ಇವುಗಳ ನೆರಳು ಗುರುಗ್ರಹದ ಮೇಲೆ ಕಾಣುವುದು. ಈ ಬಗೆಯ ದೃಶ್ಯಗಳು ಗೆಲಿಲಿಯೋಗೆ ರೋಮಾಂಚನವನ್ನೇ ಉಂಟುಮಾಡಿದ್ದವಲ್ಲವೇ? ಅದೇ ಅನುಭವ ನಿಮಗೂ ದೊರೆಯುವುದು.

ಧನುರಾಶಿಯಿಂದ ಮಕರಕ್ಕೆ ಹೊರಡುವ ಮಂಗಳಗ್ರಹ ಬೆಳಿಗ್ಗೆ ಸುಮಾರು ೩ ಗಂಟೆಗೆ ಉದಯಿಸುವುದು. ೨೩ರಂದು ಅರ್ಧಚಂದ್ರದ ಪಕ್ಕವೇ ಕಾಣುವುದು. ದೂರದರ್ಶಕದಿಂದ ಗಮನಿಸಿದಾಗ ಕ್ರಮೇಣ ಅದರ ಗಾತ್ರ ಹೆಚ್ಚುತ್ತಿದೆ, ಅಂದರೆ ನಮ್ಮಿಂದ ಅದರ ದೂರ ಕಡಿಮೆಯಾಗುತ್ತಿದೆ ಎಂದು ತಿಳಿಯಬಹುದು.

ಕಳೆದ ಕೆಲವು ತಿಂಗಳುಗಳಿಂದ ಬೆಳಗಿನ ಜಾವ ಪೂರ್ವದಲ್ಲಿ ಮಿಂಚುತ್ತಿದ್ದ ಬೆಳ್ಳಿ, ಈಗ ನಿಧಾನವಾಗಿ ಕೆಳಗಿಳಿದಂತೆ ಕಾಣುವುದು. ತಿಂಗಳ ಮೊದಲಲ್ಲಿ ಸೂರ್ಯೋದಯಕ್ಕೆ ಎರಡು ಗಂಟೆಗೂ ಮೊದಲೇ ಉದಯಿಸುತ್ತಿದ್ದ ಇದು ತಿಂಗಳ ಕೊನೆಗೆ ಸ್ವಲ್ಪ ತಡವಾಗಿ ಉದಯಿಸುವುದು.

ನಕ್ಷೆಯಲ್ಲಿ ಸಂಜೆಯ ಆಕಾಶದ ಚಿತ್ರಣವಿದೆ. ಸ್ಫುಟವಾಗಿ ಕಾಣುವ ವೃಷಭ (ಟಾರಸ್), ಮಹಾವ್ಯಾಧ (ಒರೈಯನ್), ಮಹಾಶ್ವಾನ (ಕ್ಯಾನಿಸ್ ಮೇಜರ್), ಮಿಥುನ (ಜೆಮಿನಿ), ವಿಜಯಸಾರಥಿ (ಆರಿಗಾ) ಇವುಗಳನ್ನು ಸುಲಭವಾಗಿ ಗುರುತಿಸಬಹುದು. ಉತ್ತರದಲ್ಲಿ ಸಪ್ತರ್ಷಿ ಮಂಡಲ, ಪೂರ್ವದಲ್ಲಿ ಹಸ್ತಾ (ಕಾರ್ವಸ್) ಸ್ಫುಟವಾಗಿ ಕಾಣುವುವು. ಹಸ್ತಾದ ಪಕ್ಕದಲ್ಲಿರುವ ನೀಲಿ ನಕ್ಷತ್ರ ಚಿತ್ರಾ. ಇನ್ನೊಂದು ಕೆಂಪು ನಕ್ಷತ್ರ ಸ್ವಾತಿ. ಇದು ಸಹದೇವ (ಬೂಟಿಸ್) ಪುಂಜಕ್ಕೆ ಸೇರಿದೆ.

ಹದಿನಾರರ ಹುಣ್ಣಿಮೆಯಂದು ಚಂದ್ರ ಚಿತ್ರಾ ನಕ್ಷತ್ರದ ಪಕ್ಕವೇ ಕಾಣುವುದು. ಆದ್ದರಿಂದ ಈ ತಿಂಗಳು ಚೈತ್ರಮಾಸ ಎಂದು ಕರೆಯಿಸಿ ಕೊಂಡಿದೆ. ಏಪ್ರಿಲ್ ೧೭ರಂದು ಚಂದ್ರ ಪುರರವಿಯಲ್ಲಿ ಅಂದರೆ ಭೂಮಿಗೆ ಕನಿಷ್ಠ ದೂರದಲ್ಲಿ ಇರುತ್ತದೆ. ಆದ್ದರಿಂದ ಯಾವುದೇ ಹುಣ್ಣಿಮೆಗಿಂತ ಈ ಹುಣ್ಣಿಮೆಯ ಪ್ರಕಾಶ ಹೆಚ್ಚು. ಈ ವ್ಯತ್ಯಾಸವನ್ನು ಬರಿಗಣ್ಣು ಗುರುತಿಸಲಾರದು. ಆದರೆ ಕಡಲತೀರದ ಬೆಸ್ತರು ಈ ಹುಣ್ಣಿಮೆಯ ಭರತ 'ಜೋರು' ಇದೆ ಎಂದು ಕಂಡುಕೊಳ್ಳಬಲ್ಲರು.

ಲಿರಿಡ್ ಎಂಬ ಹೆಸರಿನ ಉಲ್ಕಾವೃಷ್ಟಿ ೨೨ರಂದು ಗರಿಷ್ಠ ಚಟುವಟಿಕೆ ಪಡೆಯುತ್ತದೆ. ಬೆಳಗಿನ ಜಾವ ಗಂಟೆಗೆ ಹತ್ತಿಪ್ಪತ್ತು ಉಲ್ಕೆಗಳನ್ನು ಕಾಣಬಹುದು.

## ದಿನಚರಿ

೨ ಅಮಾವಾಸ್ಯೆ ಬೆಳಗಿನ ೦೦.೪೯ಕ್ಕೆ
೩ ಬಾಲಚಂದ್ರದ ಪಕ್ಕದಲ್ಲಿ ಬುಧ
೪ ಚಂದ್ರ ಅಪರವಿ ಬಿಂದುವಿನಲ್ಲಿ(೪೦೬,೨೯೯ ಕಿ. ಮೀ. ದೂರ)
ಬುಧ ಗ್ರಹದ ಗರಿಷ್ಠ ಪ್ರಕಾಶ
೭ ಚಂದ್ರ ಮತ್ತು ಶನಿ ನಡುವೆ ಕನಿಷ್ಠ ಕೋನ (೩ ಡಿಗ್ರಿ)
೯ ಚಾಂದ್ರಮಾಸದ ಮೊದಲ ಪಾದ
ಚಂದ್ರಾಸ್ತ ಮಧ್ಯರಾತ್ರಿಗೆ
೧೦ ಶನಿಗ್ರಹದ ಸಮೀಪ ಕ್ರಾಬ್‌ನೆಬ್ಯುಲ
ಚಂದ್ರ ಮತ್ತು ಗುರು ನಡುವೆ ಕನಿಷ್ಠ ಕೋನ (೪ ಡಿಗ್ರಿ)
೧೬ ಬುಧ ಗ್ರಹದ ಗರಿಷ್ಠ ಕೋನೋನ್ನತಿ (೨೦ ಡಿಗ್ರಿ)
೧೭ ಹುಣ್ಣಿಮೆ ಬೆಳಗಿನ ೦೧.೧೬ ಕ್ಕೆ
ಚಿತ್ರಾ ನಕ್ಷತ್ರದ ಪಕ್ಕ ಚಂದ್ರ
ಚಂದ್ರ ಪುರರವಿ ಬಿಂದುವಿನಲ್ಲಿ(೩೫೬,೧೫೬ ಕಿ. ಮೀ. ದೂರ)
೨೨ ಲಿರಿಡ್ ಉಲ್ಕಾ ವೃಷ್ಟಿ
೨೩ ಚಾಂದ್ರಮಾಸದ ಕೊನೆಯ ಪಾದ
(ಚಂದ್ರೋದಯ ಮಧ್ಯರಾತ್ರಿಯಲ್ಲಿ)
ಚಂದ್ರ ಮತ್ತು ಮಂಗಳದ ನಡುವೆ ಕನಿಷ್ಠ ಕೋನ (೩ ಡಿಗ್ರಿ)
೨೮ ಚಂದ್ರ ಮತ್ತು ಶುಕ್ರದ ನಡುವೆ ಕನಿಷ್ಠ ಕೋನ (೨ ಡಿಗ್ರಿ)

ಡಾ|| ಬಿ. ಎಸ್. ಶೈಲಜಾ
ಜವಹರಲಾಲ ನೆಹರೂ ತಾರಾಲಯ
ಬೆಂಗಳೂರು-೫೬೦ ೦೦೧




**ಬೇ**ರೆಲ್ಲ ಪ್ರಶ್ನೆಗಳ ವಿಷಯದಲ್ಲಿ ತೀವ್ರವಾದ ಭಿನ್ನಾಭಿಪ್ರಾಯಗಳಿದ್ದಾಗ್ಯೂ ವಿದೇಶೀ ನೀತಿಯ ವಿಚಾರದಲ್ಲಿ ದೇಶದ ವಿವಿಧ ರಾಜಕೀಯ ಪಕ್ಷಗಳ ಮಧ್ಯೆ ಹೆಚ್ಚು ಕಡಿಮೆ ಏಕಾಭಿಪ್ರಾಯವಿತ್ತು. ದೇಶ ಅನುಸರಿಸುತ್ತಿದ್ದ ನೀತಿಗೆ ಅನುಮೋದನೆ ಇತ್ತು. ಭಾರತ ಸರಕಾರ ಸ್ವಾತಂತ್ರ್ಯಾನಂತರ ದೃಢವಾಗಿ ಪಾಲಿಸಿಕೊಂಡು ಬಂದ ಅಲಿಪ್ತ ನೀತಿಯ ಬಗ್ಗೆ ದೇಶದ ಜನತೆಯ ವ್ಯಾಪಕ ಬೆಂಬಲವೂ ಇತ್ತು. ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಮನ್ನಣೆಯೂ ಇತ್ತು, ಗೌರವವೂ ಇತ್ತು. ಶೀತಯುದ್ಧದ ಕ್ಲಿಷ್ಟ ಸನ್ನಿವೇಶದಲ್ಲಿ, ಸಾಮ್ರಾಜ್ಯಶಾಹಿ ಶಕ್ತಿಗಳು ತಾವು ನಿರ್ಮಿಸುತ್ತಿದ್ದ ಮಿಲಿಟರಿ ಕೂಟಗಳಲ್ಲಿ ಹೊಸದಾಗಿ ಸ್ವತಂತ್ರಗೊಂಡ ದೇಶಗಳನ್ನು ಎಳೆದುಕೊಳ್ಳುವುದಕ್ಕೆ ಪ್ರಯತ್ನಿಸುತ್ತಿದ್ದ ಕಾಲದಲ್ಲಿ ಭಾರತ ದಿಟ್ಟತನದಿಂದ ಕೂಟ ರಾಜಕೀಯವನ್ನು ಧಿಕ್ಕರಿಸಿ ಅಲಿಪ್ತ ಧೋರಣೆ ತಳೆದದ್ದು, ವಸಾಹತುಶಾಹಿ ನೊಗವನ್ನು ಕಳಚಿಕೊಂಡು ಸ್ವತಂತ್ರವಾಗಿ ಉದಯಗೊಂಡಿದ್ದ ಏಶಿಯ, ಆಫ್ರಿಕ ಖಂಡದ ದೇಶಗಳಿಗೆ ಮಾರ್ಗಸೂಚಿಯಾಯಿತು. ಅಲಿಪ್ತ ನೀತಿ ಎಂದರೆ ಪ್ರಮುಖ ಅಂತರರಾಷ್ಟ್ರೀಯ ಪ್ರಶ್ನೆಗಳಿಗೆ ಸಂಬಂಧಪಟ್ಟಂತೆ ತಟಸ್ಥವಾಗಿದ್ದು ನಿಷ್ಕ್ರಿಯತೆಯಿಂದಿರುವುದಲ್ಲ ಆದರೆ ಪರಿಣಾಮಕಾರಿಯಾಗಿ ಮಧ್ಯೆ ಪ್ರವೇಶಿಸಿ, ತಾತ್ವಿಕವಾದ ಸ್ಪಷ್ಟ ನಿಲುವನ್ನು ತಳೆಯುವುದಾಗಿತ್ತು. ನೂರಕ್ಕೂ ಹೆಚ್ಚು ರಾಷ್ಟ್ರಗಳು ಅನುಸರಿಸಿದ ಈ ಅಲಿಪ್ತನೀತಿ, ಚಳವಳಿಯ ರೂಪ ತಳೆದು ಪರಿಣಾಮಕಾರಿಯಾಗಿ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಕಾರ್ಯವೆಸಗಿದ್ದು ಸ್ಮರಣೀಯ. ಅದು ದಕ್ಷಿಣ ಆಫ್ರಿಕಾದ ಹೀನಾಯ ಕುಲವಾದಿ ವಿರೋಧಿ ಹೋರಾಟಕ್ಕೆ ಬೆಂಬಲವಾಗಿರಲಿ, ವಿಯೆಟ್ನಾಮ್ ಯುದ್ಧಕ್ಕೆ ವಿರೋಧವಾಗಿರಲಿ, ರಾಷ್ಟ್ರೀಯ ವಿಮೋಚನಾ ಸಮರಗಳಿಗೆ ಬೆಂಬಲವಾಗಿರಲಿ, ಪ್ಯಾಲಸ್ಟೈನರ ಸ್ವಾತಂತ್ರ್ಯ ಹೋರಾಟಕ್ಕೆ ಒತ್ತಾಸೆಯಾಗಿರಲಿ, ನಿರಾಯುಧೀಕರಣ ಹಾಗೂ ಎಲ್ಲ ನ್ಯೂಕ್ಲಿಯರ್ ಅಸ್ತ್ರಗಳ ಸಂಪೂರ್ಣ ನಿಷೇಧ, ನಿರ್ನಾಮದ ಪ್ರಶ್ನೆಯಾಗಿರಲಿ, ಜಗತ್ತನ್ನು ಬಾಧಿಸುವ ಯಾವುದೇ ಪ್ರಮುಖ ಪ್ರಶ್ನೆಗಳಾಗಿರಲಿ ಅಲಿಪ್ತ ಚಳವಳಿ ಸ್ಪಷ್ಟವಾದ ನಿಲುವು ತಳೆಯುತ್ತಿತ್ತು. ಅಂತೆಯೇ ಸಾಮ್ರಾಜ್ಯಶಾಹಿಗಳ ಕುತಂತ್ರಗಳನ್ನು ತಡೆಯುವುದರಲ್ಲಿ ಅದು ಸಾಕಷ್ಟು ಸಫಲವೂ ಆಗಿತ್ತು. ಅದರಿಂದಾಗಿಯೇ ಸಾಮ್ರಾಜ್ಯಶಾಹಿ ದೇಶಗಳು, ಮುಖ್ಯವಾಗಿ ಅಮೆರಿಕ ಅಲಿಪ್ತ ನೀತಿಯನ್ನು ಮೂದಲಿಸುತ್ತಿದ್ದುವು. ಅಮೆರಿಕ ಅಲಿಪ್ತ ನೀತಿಯನ್ನು ಅನೀತಿ ಎಂದು ಲೇವಡಿ ಮಾಡಿತ್ತು. ಭಾರತ ಈ ಅಲಿಪ್ತ ಚಲವಳಿಯ ಅಗ್ರ ಪಂಕ್ತಿಯಲ್ಲಿದ್ದು ಗೌರವಾದರಗಳಿಗೆ ಪಾತ್ರವಾಗಿತ್ತು.

ಅವೆಲ್ಲ ಈಗ ಇತಿಹಾಸ. ಅಮೆರಿಕದ ಪ್ರಭೃತಿಗಳನ್ನು ಓಲೈಸುವುದೇ ಈಗ ನಮ್ಮ ಸರಕಾರದ ಮುಖ್ಯ ಗುರಿಯಾಗಿಬಿಟ್ಟಿದೆ ವಿದೇಶೀ ನೀತಿಯನ್ನು ಒಳಗೊಂಡಂತೆ ಎಲ್ಲ ಕ್ಷೇತ್ರಗಳಲ್ಲೂ. ನಮ್ಮ ಸ್ವಾತಂತ್ರ್ಯ, ಸಾರ್ವಭೌಮತ್ವಗಳನ್ನು ಎತ್ತಿ ಹಿಡಿಯುವಂಥ, ಗೌರವಯುತವಾದ ನಿಲುವು ತಳೆಯುವುದನ್ನೂ ವಾಜಪೇಯಿ ನೇತೃತ್ವದಲ್ಲಿರುವ, ಭಾಜಪ ಹೊಸೆದಿರುವ ಎನ್‌ಡಿಎ ಸರಕಾರ ಕೈಬಿಟ್ಟಿದೆ. ಅಮೆರಿಕದ ವರಿಷ್ಠರ ಮರ್ಜಿ ಅನುಸರಿಸುವುದೇ ಗುರಿಯಾಗಿರುವಂತೆ ತೋರುತ್ತಿದೆ. ಇರಾಕಿನ ಮೇಲೆ ಅಮೆರಿಕ ಸಾರಿರುವ ರಣಕಹಳೆಯ ಬಗ್ಗೆ ವಾಜಪೇಯಿ ಸರಕಾರ ತಳೆದಿರುವ ಧೋರಣೆ ಅದನ್ನು ಸ್ಪಷ್ಟವಾಗಿ ಬಯಲುಗೊಳಿಸಿದೆ. ಅಲಿಪ್ತ ನೀತಿಯನ್ನು ದೃಢವಾಗಿ ಪಾಲಿಸುತ್ತಿದ್ದ ಕಾಲದಲ್ಲಿ ಸಂದಿಗ್ಧ ಪರಿಸ್ಥಿತಿಗಳಲ್ಲಿ ಸರಕಾರ ತಳೆದ ನಿಲುವುಗಳಲ್ಲಿ ಚಂಚಲತೆ ಇರಲಿಲ್ಲವೆಂದೇನಲ್ಲ. ಆದರೆ ಅದು ಇಂದಿನಂತೆ ಸಾಮ್ರಾಜ್ಯಶಾಹಿಗಳ ಬೆನ್ನು ಹತ್ತಿಹೋಗುವ ನಗ್ನ ಸ್ವರೂಪದ್ದಾಗಿರಲಿಲ್ಲ. ಅಂದಿನ ದಿನಗಳಲ್ಲಿ ವಿರೋಧ ಪಕ್ಷದಲ್ಲಿದ್ದ ವಾಜಪೇಯಿ ಅಂಡ್ ಕಂಪೆನಿಯ ಜನಸಂಘ ಪಕ್ಷ ಅಲಿಪ್ತ ನೀತಿಗೆ ತೋರಿಕೆಯ ಬೆಂಬಲ ನೀಡಿದರೂ ಅಮೆರಿಕದೊಂದಿಗೆ ಮೈತ್ರಿ ವರ್ಧನೆಗೆ ಹೆಚ್ಚು ಒತ್ತು ಕೊಡುತ್ತಿತ್ತು. ಆಗ ಪಾರ್ಲಿಮೆಂಟಿನಲ್ಲಿ ಅಲ್ಪ ಸಂಖ್ಯೆಯಲ್ಲಿದ್ದ ಅವರಿಗೆ ಅಮೆರಿಕ ಪರ ನಿಲುವು ತಳೆಯುವಂತೆ ಸರಕಾರದ ಮೇಲೆ ಪ್ರಭಾವ ಬೀರಲು ಸಾಧ್ಯವಾಗಲಿಲ್ಲ ಹೆಚ್ಚಿನಮಟ್ಟಿಗೆ.

ಆದರೆ ಈಗ ಅಧಿಕಾರಾರೂಢವಾಗಿರುವ ವಾಜಪೇಯ ಸರಕಾರ ಎಲ್ಲ ಪೊರೆಯನ್ನೂ ಕಳಚಿ ಅಮೆರಿಕದ ತಾಳಕ್ಕೆ ತಕ್ಕಂತೆ ಕುಣಿಯತೊಡಗಿದೆ. ಅಲಿಪ್ತ ನಿತಿಯನ್ನು ಬಿಟ್ಟು ಕೈತೊಳೆದುಕೊಂಡಿರುವ ಸರಕಾರ ಎಲ್ಲ ಬಗೆಯಲ್ಲೂ ಅಮೆರಿಕದ ಜಾಡನ್ನೇ ಅನುಸರಿಸುತ್ತಿದೆ. ಏಕ ಶಕ್ತಿ ಕೇಂದ್ರೀಯವಾದ ಇಂದಿನ ಜಗತ್ತಿನಲ್ಲಿ ಅಲಿಪ್ತ ಚಳವಳಿಯನ್ನು ಬಲಗೊಳಿಸುವ ಅಗತ್ಯ ಎಂದಿಗಿಂತಲೂ ಹೆಚ್ಚು ಅವಶ್ಯಕವಾಗಿರುವಾಗ ವಾಜಪೇಯಿ ಸರಕಾರ ಅದರಿಂದ ದೂರಸರಿದು ಅಮೆರಿಕವನ್ನು ಹಿಂಬಾಲಿಸುತ್ತಿದೆ. ಕೌಲಾಲಂಪೂರ್‌ನಲ್ಲಿ ಇತ್ತೀಚೆಗೆ ಜರುಗಿದ ಅಲಿಪ್ತ ರಾಷ್ಟ್ರಗಳ ಸಮಾವೇಶದಲ್ಲಿ ಭಾರತ ವಹಿಸಿದ ಪಾತ್ರದಿಂದ ಅದು ಸ್ಪಷ್ಟವಾಗುತ್ತದೆ. ಪ್ರಧಾನಿ ವಾಜಪೇಯಿ ಅದರಲ್ಲಿ ಭಾಗವಹಿಸಿದ್ದೊಂದೇ ದೊಡ್ಡ ವಿಷಯವಾಯಿತೇ ಹೊರತು ಅವರು ಚಳವಳಿಯ ಪುನರುಜ್ಜೀವನಕ್ಕೆ ಸಲ್ಲಿಸಿದ ಕಾಣಿಕೆ ಸೊನ್ನೆ. ಸಮಾವೇಶದಲ್ಲಿ ಭಾರತದ ಪಾತ್ರ ಔಪಚಾರಿಕವಾಗಿದ್ದುದು ನಿಜಕ್ಕೂ ಶೋಚನೀಯ.

ವಿಶ್ವಸಂಸ್ಥೆಯ ಭದ್ರತಾ ಮಂಡಲಿಯನ್ನು, ಪ್ರಪಂಚದ ಬಹುತೇಕ ರಾಷ್ಟ್ರಗಳ ವಿರೋಧವನ್ನು ಧಿಕ್ಕರಿಸಿ, ತಾನು ಮಾಡುತ್ತಿರುವುದೇ ಸರಿ ಎನ್ನುವ ಅಹಮಿಕೆಯಿಂದ ಇರಾಕಿನ ಮೇಲೆ ಯುದ್ಧ ಸಾರಿರುವ ಅಮೆರಿಕದ ಅಧ್ಯಕ್ಷ ಜಾರ್ಜ್ ಬುಷ್‌ರವರ ನೀತಿಯನ್ನು ಕುರಿತು ಪ್ರಧಾನಿ ವಾಜಪೇಯಿ ಪಾರ್ಲಿಮೆಂಟಿನ ಉಭಯ ಸದನಗಳಲ್ಲೂ ನೀಡಿದ ಹೇಳಿಕೆ ಭಾರತಕ್ಕೆ ಯಾವ ಬಗೆಯಲ್ಲೂ ಗೌರವ ತರುವಂಥದ್ದಲ್ಲ. ಅಡ್ಡಗೋಡೆಯ ಮೇಲೆ ದೀಪ ಇರಿಸುವಂಥ ಇತ್ತಲೂ ಇಲ್ಲದ ಅತ್ತಲೂ ಇಲ್ಲದ ವಾಜಪೇಯಿ ಸರಕಾರದ ನಿಲುವಿನಿಂದ ಪ್ರತಿಯೊಬ್ಬ ಭಾರತೀಯನೂ ತಲೆ ತಗ್ಗಿಸುವಂತಾಗಿದೆ. ಸದ್ಯ ಸ್ಪೇನ್, ಬ್ರಿಟನ್‌ಗಳಂತೆ ಅಮೆರಿಕದ ಬಾಲ ಹಿಡಿದು ಬುಷ್ ನೀತಿಗೆ ಬೆಂಬಲ ನೀಡದಿದ್ದುದು ಸಮಾಧಾನದ ಸಂಗತಿ. ಪ್ರಪಂಚದಾದ್ಯಂತ ಎಲ್ಲೆಡೆಗಳಲ್ಲೂ ಜನ ಕೋಟಿ ಅಮೆರಿಕದ ಇರಾಕ್ ನೀತಿಯನ್ನು ವಿರೋಧಿಸಿ ಪ್ರದರ್ಶನ ನಡೆಸಿದ್ದಾರೆ. ಬಹುತೇಕ ರಾಷ್ಟ್ರಗಳು ಅಮೆರಿಕದ ಯುದ್ಧ ನೀತಿಯನ್ನು ವಿರೋಧಿಸಿವೆ. ಅಮೆರಿಕದ ಮಿತ್ರರಾಷ್ಟ್ರವಾಗಿದ್ದು ನ್ಯಾಟೋ ಸದಸ್ಯ ರಾಷ್ಟ್ರವಾಗಿರುವ ಫ್ರಾನ್ಸ್‌ನಂಥ ದೇಶ ಅಮೆರಿಕದ ಇರಾಕ್ ನೀತಿಯನ್ನು ವಿರೋಧಿಸಿ, ವಿಶ್ವಸಂಸ್ಥೆಯ ಭದ್ರತಾ ಮಂಡಲಿಯಲ್ಲಿ ಅಮೆರಿಕದ ನಿರ್ಣಯದ ವಿರುದ್ಧ ವೀಟೋ ಚಲಾಯಿಸುವುದಾಗಿ ಧೈರ್ಯದಿಂದ ಘೋಷಿಸಿತು. ಆದರೆ ಅಮೆರಿಕದ ನಾಯಕರನ್ನು ಎದುರು ಹಾಕಿಕೊಳ್ಳಲು ಬಯಸದ ಪ್ರಧಾನಿ ವಾಜಪೇಯಿ ನೇತೃತ್ವದ ಎನ್‌ಡಿಎ ಸರಕಾರ ಇರಾಕಿನ ಮೇಲೆ ಅಮೆರಿಕದ ದುರಾಕ್ರಮಣ ನೀತಿಯ ವಿಚಾರದಲ್ಲಿ ಶಿಖಂಡಿತನದಿಂದ 'ಮಧ್ಯಮಾರ್ಗ' ತಳೆದಿರುವುದು ಖಂಡನೀಯವಷ್ಟೇ ಅಲ್ಲ, ಭಾರತದ ಪರಂಪರೆಗೇ ಅಪಮಾನಕರ. ಪ್ರಧಾನಿ ವಾಜಪೇಯಿ ಹೇಳಿಕೆಯಲ್ಲಿ ಉಪದೇಶಗಳ ಸರಮಾಲೆ ಇವೆಯೇ ಹೊರತು ನಗ್ನ ದುರಾಕ್ರಮಣ ನೀತಿಯನ್ನು ವಿರೋಧಿಸುವ, ಖಂಡಿಸುವ ಸೊಲ್ಲೇ ಇಲ್ಲ. ವಿರೋಧ ಪಕ್ಷಗಳು, ಕೆಲವು ಎನ್‌ಡಿಎ ಮಿತ್ರ ಪಕ್ಷಗಳು ಪ್ರಧಾನಿಯವರ ಹೇಳಿಕೆ ಬಗ್ಗೆ ಅತೃಪ್ತಿ ವ್ಯಕ್ತಗೊಳಿಸಿವೆ. ಯಥಾರ್ಥವಾಗಿಯೇ ಎಡಪಕ್ಷಗಳು ಅಮೆರಿಕದ ದುರಾಕ್ರಮಣ ನೀತಿಯನ್ನು ಖಂಡಿಸಲು ವಿಫಲವಾದ ಪ್ರಧಾನಿ ಹೇಳಿಕೆಯನ್ನು ಖಂಡಿಸಿವೆ.

ಪ್ರಧಾನಿ ವಾಜಪೇಯಿ ಇರಾಕ್ ಕುರಿತು ಅಮೆರಿಕದ ಆಕ್ರಮಣಕಾರಿ ನೀತಿಯ ವಿಚಾರದಲ್ಲಿ ನೀಡಿದ ಹೇಳಿಕೆ ಸಂಪೂರ್ಣವಾಗಿ ಭಾಜಪ ನೇತೃತ್ವದ ಸರಕಾರದ ದಿವಾಳಿ ಕೋರತನವನ್ನು ಹೊರಗೆಡಹುತ್ತದೆ. ಭಾರತದ ವಿದೇಶಾಂಗ ನೀತಿ ನಿರೂಪಿತ ವಾಗುತ್ತಿರುವುದು ದೆಹಲಿಯಲ್ಲೋ, ವಾಷಿಂಗ್ಟನ್ನಿನಲ್ಲೋ ಎನ್ನುವ ಅನುಮಾನ ಬರುತ್ತಿದೆ. ವಾಜಪೇಯಿ ಸರಕಾರದ ಈಚಿನ ನೀತಿಗಳನ್ನು ಗಮನಿಸಿದರೆ ನಮ್ಮ ನಿಲುವೆಲ್ಲ ವಾಷಿಂಗ್ಟನ್ ಪ್ರೇರಿತವೇ ಎನಿಸುವುದರಲ್ಲಿ ತಪ್ಪೇನಿಲ್ಲ. ಅಮೆರಿಕ ಇರಾಕಿನ ಬಿಕ್ಕಟ್ಟು ಸೃಷ್ಟಿಸಿದಾಗಿನಿಂದ ಭಾಜಪ ನಾಯಕರು ಜಾರಿಕೊಳ್ಳುವ ಹೇಳಿಕೆಗಳನ್ನೇ ನೀಡುತ್ತ ಬಂದಿದ್ದಾರೆ. ಸರಕಾರ ಸ್ಪಷ್ಟವಾದ ನಿಲುವನ್ನು ಪ್ರಕಟಿಸದೆ ಹಿಂಜರಿಯುತ್ತಿತ್ತು. ಪ್ರಧಾನಿ ವಾಜಪೇಯಿ ಹೇಳಿಕೆ ಬಂದದ್ದೂ ಕೂಡ ವಿರೋಧ ಪಕ್ಷಗಳ ಒತ್ತಾಯದ ಮೇಲೆಯೇ. ಅದೂ ಕೂಡ ಸರ್ವಪಕ್ಷ ಸಭೆಯ ನಂತರ. ಪ್ರಧಾನಿ ಹೇಳಿಕೆ ನೀಡಿದ ಕೆಲವೇ ದಿನಗಳ ಮುಂಚೆ.

ಅಮೆರಿಕದ ಅಧ್ಯಕ್ಷ ಜಾರ್ಜ್ ಬುಷ್ ವಾಜಪೇಯಿಯವರನ್ನು ದೂರವಾಣಿಯಲ್ಲಿ ಸಂಪರ್ಕಿಸಿ ಮಾತನಾಡಿದ್ದರು. ಪ್ರಧಾನಿ ವಾಜಪೇಯಿ ಈ ಮಾತುಕತೆಯ ವಿವರವನ್ನು ಹೊರಗೆಡಹಲು ನಿರಾಕರಿಸಿದರು. ಒತ್ತಾಯ ತರುವುದರಲ್ಲಿ, ಆಮಿಷಗಳನ್ನು ಒಡ್ಡುವುದರಲ್ಲಿ, ಬೆದರಿಕೆ ಹಾಕುವುದರಲ್ಲಿ ಅಮೆರಿಕದ ಪ್ರಭೃತಿಗಳು ನಿಸ್ಸೀಮರು ಎನ್ನುವುದನ್ನು ಇಲ್ಲಿ ಗಮನಿಸಬೇಕು. ವಾಜಪೇಯಿ ಪಾರ್ಲಿಮೆಂಟಿನಲ್ಲಿ ಹೇಳಿಕೆ ನೀಡಿದ ಮರುದಿನವೇ ಅಮೆರಿಕದ ರಾಯಭಾರಿ ಕಚೇರಿಯ ವಕ್ತಾರರು ಇರಾಕಿನ ವಿಚಾರದಲ್ಲಿ ವಾಜಪೇಯಿ ನಿಲುವನ್ನು ಸ್ವಾಗತಿಸಿದರಷ್ಟೇ ಅಲ್ಲದೆ, ಭಾರತದ ನಿಲುವು ಅಮೆರಿಕದ ನಿಲುವು ಈ ವಿಷಯದಲ್ಲಿ ಒಂದೇ ಆಗಿದೆ ಎಂದು ಪತ್ರಿಕಾ ವರದಿಗಾರರಿಗೆ ತಿಳಿಸಿದ್ದು ಅರ್ಥಗರ್ಭಿತವಾಗಿದೆ. ■

# ಗುಜರಾತ್ ಮತ್ತು ಮೌಲಿಕ ಶಿಕ್ಷಣ

ಅರುಣರಾಯ್ ಮತ್ತಿತರರು ಇತ್ತೀಚೆಗೆ ಹೂಡಿದ ಸಾರ್ವಜನಿಕ ಹಿತಾಸಕ್ತಿ ದಾವೆಗೆ ಪ್ರತಿಕ್ರಯಿಸುತ್ತಾ ನೀಡಿದ ತೀರ್ಪಿನಲ್ಲಿ ಸರ್ವೋಚ್ಚ ನ್ಯಾಯಾಲಯವು ಕೇಂದ್ರ ಸರ್ಕಾರದ ಶಾಲಾ ಪಠ್ಯಪುಸ್ತಕಗಳ ಪರಿಷ್ಕರಣೆಯಲ್ಲಿ ಸಂವಿಧಾನದ ಜಾತ್ಯತೀತ ಸ್ವರೂಪದ ಉಲ್ಲಂಘನೆಯಾಗಿಲ್ಲವೆಂದು ಸಾರಿದೆ. ಆದರೆ ಈ ವಿಷಯದಲ್ಲಿ ನ್ಯಾಯಾಲಯವು ಸೀಮಿತ ಪರಿಧಿಯಲ್ಲಿ ತೀರ್ಪನ್ನು ನೀಡಿದೆಯೆಂಬುದನ್ನು ಗಮನಿಸಬೇಕು. ಹಾಗೂ ನ್ಯಾಯಾಧೀಶರು ಕೇಂದ್ರ ಸರ್ಕಾರದ ಈ ಶೈಕ್ಷಣಿಕ ಕ್ರಮದಡಿ ಸಕಲ ಧರ್ಮಗಳಲ್ಲಿ ಸಮಾನ ಗೌರವ ಮೂಡಿಸಬೇಕೆಂಬ ಎಚ್ಚರಿಕೆಯ ಮಾತನ್ನೂ ಹೇಳಿದ್ದಾರೆ. ಕೇಂದ್ರ ಸರ್ಕಾರದ ಮೌಲಿಕ ಶಿಕ್ಷಣ ಪ್ರಸಾರದ ವಿಧಾನ ಧಾರ್ಮಿಕವಾಗಿ ವಿಭಜನಾತ್ಮಕ ಪರಿಣಾಮ ಬೀರುವ ಅಪಾಯವನ್ನು ತಳ್ಳಿಹಾಕುವಂತಿಲ್ಲ.

ಗುಜರಾತ್ ರಾಜ್ಯದ ಬೆಳವಣಿಗೆಗಳು ಜಾತ್ಯತೀತ ಧೋರಣೆಗೆ ಗಂಭೀರ ಸವಾಲನ್ನೊಡ್ಡಿವೆ. ಬೌದ್ಧಿಕ ಮಟ್ಟದಲ್ಲಿ ಜನರ ಪೂರ್ವಾಗ್ರಹ ಪೀಡಿತ ದೃಷ್ಟಿಕೋನಗಳನ್ನು ಬದಲಾಯಿಸುವುದರ ಮೂಲಕ ಸವಾಲನ್ನು ಸಮರ್ಥವಾಗಿ ಎದುರಿಸಬೇಕಾಗಿದೆ. ಎಲ್ಲ ಧರ್ಮಗಳೂ ಸಮಾನವೆಂದು ವಿದ್ಯಾರ್ಥಿಗಳಿಗೆ ಹೇಳಿದರಷ್ಟೇ ಸಾಲದು. ಕೇವಲ ವಿವಿಧ ಧರ್ಮಗಳ ಮೇಲ್ಮೈ ಪರಿಚಯ ಏನೂ ಪ್ರಯೋಜನವಾಗಲಾರದು. ನಮ್ಮ ಧಾರ್ಮಿಕ ಪರಂಪರೆಯ ಶ್ರೇಷ್ಠ ವ್ಯಕ್ತಿಗಳಾದ ಬುದ್ಧ, ಕಬೀರ, ಗುರುನಾನಕ್, ತುಳಸಿ, ಮೀರಾ ಮತ್ತು ಗಾಂಧಿಯಂತಹವರ ಪರಿಚಯ ಈಗಾಗಲೇ ಶಾಲಾ ಪಠ್ಯ ಪುಸ್ತಕಗಳಲ್ಲಿ ಅಡಕವಾಗಿದೆ.

ಹಲವು ಪ್ರಭೇದಗಳ ಧಾರ್ಮಿಕ ಆಚರಣೆ ಕೌಟುಂಬಿಕವಾಗಿ ಹಾಗೂ ದೇವಾಲಯಗಳಲ್ಲಿ ಮತ್ತು ದೃಶ್ಯ ಮಾಧ್ಯಮಗಳಲ್ಲಿ ಹೇರಳವಾಗಿ ಪ್ರತಿಬಿಂಬಿಸಲಾಗುತ್ತಿದೆ. ಧಾರ್ಮಿಕ ಪ್ರವಚನಗಳು ವ್ಯಾಪಕವಾಗಿವೆ. ನಮ್ಮ ಚಿಂತನಾಕ್ರಮಗಳ ಮೇಲೆ ಇವೆಲ್ಲವೂ ಪರಿಣಾಮ ಬೀರಿವೆ. ಈ ವಿಷಯಗಳಿಗೆ ಮತ್ತೆ ಮಹತ್ವ ನೀಡುವುದು ಅನಗತ್ಯ.

ಈಗಾಗಲೇ ಪಸರಿಸಿರುವ ಕೋಮುವಾದ ಕೆಲವರನ್ನು ಪರಕೀಯರೆಂದು ಗುರುತಿಸಿ, ಜನಗಳ ನೆಮ್ಮದಿಯ ಬದುಕಿನ ಹಕ್ಕನ್ನು ಕಸಿದುಕೊಂಡಿದೆ. ಸಾರ್ವಜನಿಕ ಗ್ರಹಣಶಕ್ತಿ ಎಷ್ಟು ವಿಕೃತಗೊಂಡಿದೆಯೆಂದರೆ ವಿದ್ಯಾವಂತರು ಕೂಡ ಕೆಲವು ಘಟನೆಗಳಿಂದ ಪ್ರಚೋದಿತರಾಗಿ ಇಡೀ ಕೋಮಿನ ಸಮೂಹವನ್ನು ಪ್ರತೀಕಾರದ ಗುರಿಯನ್ನಾಗಿ ಮಾಡುತ್ತಾರೆ. 'ಬಾಬರ್ ಸಂತತಿಗೆ ಪ್ರತೀಕಾರದ ರುಚಿಯನ್ನು ತೋರಿಸೋಣ' ಎಂಬ ಘೋಷಣೆ ರಾಮ ಮಂದಿರದ ಚಳುವಳಿ ಸಂದರ್ಭದಲ್ಲಿ ಬಹಳ ಪ್ರಭಾವಶಾಲಿಯಾಗಿತ್ತು. ಆದರೆ ಈ ಘೋಷಣೆಯನ್ನು ಕೂಗಿದ ಜನ ಈಗಿನ ಮುಸ್ಲಿಮರ ಪೂರ್ವಜರು ಬಾಬರನ ಆಳ್ವಿಕೆಯಲ್ಲಿ ಶೋಷಿತ ಕಾರ್ಮಿಕರಾಗಿದ್ದರೆಂಬುದನ್ನು ಮನಗಾಣಲಿಲ್ಲ. ಇತ್ತೀಚೆಗೆ ಗುಜರಾತ್‌ನಲ್ಲಿ ಮುಸ್ಲಿಮರ ಮೇಲೆ ವ್ಯವಸ್ಥಿತವಾಗಿ ಹಲ್ಲೆ ನಡೆಯುತ್ತಿದ್ದಾಗಲೂ ವಿಶ್ವ ಹಿಂದೂ ಪರಿಷತ್‌ನ ಪ್ರವೀಣ್ ತೊಗಾಡಿಯ ಹಿಂದೂಗಳು ಹಿಂಸೆಯನ್ನು ಬೆಂಬಲಿಸುವುದಿಲ್ಲವೆಂದರು! ಕೊಲ್ಲುವುದು ಹಿಂಸೆಯಲ್ಲವೆಂಬ ಮೀಮಾಂಸೆ ಆತನ ವಿಶಿಷ್ಟ ಕೊಡುಗೆ.

ವಿದ್ಯಾರ್ಥಿಗಳಿಗೆ ಈ ಸಂದರ್ಭದಲ್ಲಿ ಅಗತ್ಯವಾಗಿ ನೀಡಬೇಕಾದುದೆಂದರೆ ಧಾರ್ಮಿಕ ಬೆಳವಣಿಗೆಗಳ ಬಗೆಗಿನ ಒಂದು ವಿಮರ್ಶಾತ್ಮಕ ನೋಟ. ಅಧ್ಯಾಪಕರು ವಿದ್ಯಾರ್ಥಿಗಳಲ್ಲಿ ಈ ನಿಟ್ಟಿನಲ್ಲಿ ವೈಚಾರಿಕತೆಯನ್ನು ಮತ್ತು ಮಾನವೀಯ ಸಂಕಷ್ಟಗಳ ಬಗೆಗಿನ ಸಂವೇದನಾ ಶೀಲತೆಯನ್ನು ಬೆಳಸಬೇಕಾಗಿದೆ.

ಧಾರ್ಮಿಕ ಶಿಕ್ಷಣದ ಪ್ರತಿಪಾದಕರು ಧಾರ್ಮಿಕ ಮೌಢ್ಯಗಳ ಬಗ್ಗೆ ಗಮನ ಹರಿಸುವುದಿಲ್ಲ. ನಮ್ಮ ಸನಾತನ ಸಂಸ್ಕೃತಿ ಇತರ ಸಂಸ್ಕೃತಿಗಳಿಗಿಂತಲೂ ಶ್ರೇಷ್ಠ ಮತ್ತು ಎಲ್ಲರೂ ಈ ಜಡ್ಡು ಅಭಿಪ್ರಾಯವನ್ನು ಹೆಮ್ಮೆಯಿಂದ ಮೆರೆಸಬೇಕೆಂಬುದೇ ಅವರ ಆದ್ಯತೆ. ಎನ್‌ಸಿಎಆರ್‌ಟಿ ಸಂಸ್ಥೆಯು ಮಾಡಿರುವ ಸಮಾಜಶಾಸ್ತ್ರಗಳ ಪಠ್ಯಕ್ರಮಗಳಲ್ಲಿನ ಬದಲಾವಣೆಗಳಿಗೆ ಈ ಧೋರಣೆಯೇ ಮೂಲ.

ಆದರೆ ಅಂಧಾಭಿಮಾನ ವಿವೇಚನಾ ಶಕ್ತಿಯನ್ನು ಚಿವುಟಿಹಾಕುವುದೆಂಬುದನ್ನು ಮನಗಾಣಬೇಕು. ಈ ದೇಶದ ಜನಸಂಖ್ಯೆಯ ಶೇಕಡ ೪೦ಕ್ಕಿಂತಲೂ ಹೆಚ್ಚು ಜನ ಬಡತನ ರೇಖೆಯ ಕೆಳಗೆ ಬಳಲುತ್ತಿರುವುದು ಹೆಮ್ಮೆಯ ವಿಷಯವಲ್ಲ. ಬಡಕುಟುಂಬಗಳು ಅವರ ಧರ್ಮದ ಉತ್ಕೃಷ್ಟತೆಯ ಬಗ್ಗೆ ಹೆಮ್ಮೆಪಡುವ ಸ್ಥಿತಿಯಲ್ಲಿರುವುದಿಲ್ಲ. ಹೆಮ್ಮೆಯ ಮನೋಭಾವ ಆತ್ಮವಿಮರ್ಶೆಯಿಂದ ಹೊರಹೊಮ್ಮಬೇಕು.

ಇತ್ತೀಚಿನ ಇತಿಹಾಸದ ವಿವಾದವನ್ನು ಗಮನಿಸೋಣ. ಚರಿತ್ರೆಯ ಅಧ್ಯಯನಕ್ಕೆ ಎರಡು ಉದ್ದೇಶಗಳಿವೆ. ಅವೆಂದರೆ ಮೊದಲನೆಯದಾಗಿ, ರಾಜಕೀಯ ಹಾಗೂ ಸಾಮಾಜಿಕ ಪ್ರಕ್ರಿಯೆಗಳಿಗೆ ಚಾಲನೆ ನೀಡುವ ಶಕ್ತಿಗಳ ಮೂಲ ಸ್ವರೂಪದ ಬಗ್ಗೆ ಪಕ್ಷಪಾತರಹಿತ ಅರಿವನ್ನು ಬೆಳೆಸುವುದು. ಎರಡನೆಯದಾಗಿ, ಆಳುವ ಮತ್ತು ಆಳ್ವಿಕೆಗೊಳಪಟ್ಟಿರುವ ವರ್ಗಗಳ ನಡುವಿನ ಮೂಲಭೂತ ವೈರುಧ್ಯವನ್ನು ಗ್ರಹಿಸುವುದು. ಹಾಗಾದಲ್ಲಿ ಚರಿತ್ರೆಯ ಅಧ್ಯಯನ ಹಲವಾರು ಪೂರ್ವಾಗ್ರಹ ಪೀಡಿತ ಧೋರಣೆಗಳನ್ನು, ಮಿಥ್ಯೆಗಳನ್ನು ಎದುರಿಸುವಲ್ಲಿ ಸಫಲವಾಗುತ್ತದೆ. ನೂತನ ಪಠ್ಯಕ್ರಮದ ಚರಿತ್ರೆಯ ಪುಸ್ತಕ ಸನಾತನ ಹಾಗೂ ಮಧ್ಯಯುಗದ ಭಾರತದ ಕಾಲದಲ್ಲಿನ ಜೀವನವನ್ನ ವೈಭವೀಕರಿಸಿ ಕೆಲವು ವಾಸ್ತವಾಂಶಗಳನ್ನು ಮರೆಮಾಚಿದೆ.

ನಮ್ಮ ಸಮಾಜದ ಪ್ರಧಾನ ಅಂಶವಾದ ಜಾತಿ ವ್ಯವಸ್ಥೆಯು ಪಠ್ಯಕ್ರಮದಲ್ಲಿ ಗೌಣವಾಗಿ ಅಡಕಗೊಂಡಿದೆ. ವೇದಕಾಲದ ಸಂಸ್ಕೃತಿ ಮತ್ತು ಉಪನಿಷತ್ತುಗಳಿಗೆ ವಿಶೇಷವಾದ ಗಮನವನ್ನು ಪಠ್ಯಕ್ರಮ ನೀಡಿದೆ. ಸೂಫಿ ಸಂತರ ಸಾಂಸ್ಕೃತಿಕ ಕೊಡುಗೆಯನ್ನು ಕಡೆಗಾಣಿಸಿದೆ. ಪ್ರಸ್ತಾವನೆಯಲ್ಲಿ ಮಧ್ಯಯುಗದ ರಾಜಮನೆತನಗಳಿಗೆ ಪ್ರಾಮುಖ್ಯತೆ ನೀಡಿಲ್ಲವೆಂದು ಹೇಳಿದ್ದರೂ ಇಡೀ ಅಧ್ಯಾಯ ಮುಸ್ಲಿಮರ, ಅರಬ್ ಹಾಗೂ ಟರ್ಕಿ ದೊರೆಗಳ ಆಕ್ರಮಣಗಳನ್ನು ಸವಿಸ್ತಾರವಾಗಿ ಬಣ್ಣಿಸಿದೆ. ಆಗಿನ ಕಾಲದ ಮುಸ್ಲಿಮ್ ಕುಶಲಕರ್ಮಿಗಳ ಬಗ್ಗೆಯಾಗಲೀ, ಫಕೀರ ಸಂತರ ಬಗ್ಗೆಯಾಗಲೀ ಪ್ರಸ್ತಾಪವಿಲ್ಲ. ಒಟ್ಟಾರೆ, ಮುಸ್ಲಿಮರು ಆಕ್ರಮಣಕಾರೀ ಪರಕೀಯರೆಂಬ ಚಿತ್ರಣವನ್ನು ಮೂಡಿಸಲಾಗಿದೆ.

ನೂತನ ಪಠ್ಯಕ್ರಮದ ಕೊರತೆಯೆಂದರೆ ವಿದ್ಯಾರ್ಥಿಗಳ ಯಥಾರ್ಥವಾದ ಶೈಕ್ಷಣಿಕ ಅಗತ್ಯಗಳನ್ನು ಕಡೆಗಾಣಿಸಿರುವುದು. ಪ್ರಾಥಮಿಕ ಹಾಗೂ ಮಾಧ್ಯಮಿಕ ಹಂತಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಗಣನೀಯವಾಗಿ ಕ್ಷೀಣಿಸಿದೆ. ಅವರಲ್ಲಿ ಬಹಳಷ್ಟು ಮಂದಿ ಎಂಟನೇ ತರಗತಿಯನ್ನು ದಾಟಿ ಶಿಕ್ಷಣವನ್ನು ಮುಂದುವರಿಸುತ್ತಿಲ್ಲ. ಈ ದಿಕ್ಕಿನಲ್ಲಿ ಶಿಕ್ಷಣ ತಜ್ಞರು ಹೆಚ್ಚು ಗಮನವನ್ನು ಹರಿಸಬೇಕಾಗಿದೆ. ಶಿಕ್ಷಣ ಸಚಿವಾಲಯದ ಗಮನ ಶೈಕ್ಷಣಿಕ ಕ್ಷೇತ್ರದ ಗಂಭೀರ ಪರಿಸ್ಥಿತಿಯ ಬಗ್ಗೆ ಹರಿಯಬೇಕಾಗಿದೆ.

**ಶಂಕರ ನಾರಾಯಣ್**
ನಂ. ೫೪/೧೧೪, ಕೆನರಾ ಬ್ಯಾಂಕ್ ಕಾಲೋನಿ, ಚಿಕ್ಕಲಸಂದ್ರ ಬೆಂಗಳೂರು - ೫೬೦ ೦೬೧




ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ

*ಮುದಿಕುರುಡಿ ಹೊಂಗೆಯನು 'ಬಾದಾಮಿ ಕೋ' ಎನುತೆ*
*ಪದುಳದಿಂ ಮೊಮ್ಮಂಗೆ ಕೊಡಲು ಸಿಹಿಯಹುದೆ?*
*ಹೃದಯವೊಳಿತಾದೊಡೇಂ ? ತಿಳಿವಿಹುದೆ ಜಾಣ್ಮೆಹುದೆ?*
*ಸುಧೆ ಬಂತೆ ಸುಲಭದಲಿ ? - ಮಂಕುತಿಮ್ಮ ॥*

*(ಡಿ.ವಿ.ಜಿ. ೮೬೩)*

– ಕುರುಡು ಮುದುಕಿಗೆ ಮೊಮ್ಮಗನ ಮೇಲೆ ತುಂಬ ಪ್ರೀತಿಯಿದೆ; ಆದರೆ ತನ್ನ ಕೈಲಿರುವುದು ಹೊಂಗೆಯ ಬೀಜವೆಂಬ ಅರಿವಿಲ್ಲ, ಆದ್ದರಿಂದಲೆ 'ಬಾದಾಮಿ ಕೋ' ಎಂದು ಅಕ್ಕರೆಯಿಂದ ನೀಡುತ್ತಾಳೆ. ಪರಿಣಾಮ ವಿಪರ್ಯಾಸ. ಇದು ಜ್ಞಾನವಿಲ್ಲದ ಪ್ರೀತಿಯ ಒಂದು ನಿದರ್ಶನ. ಪ್ರೀತಿಯಿಲ್ಲದ ಜ್ಞಾನದಿಂದ ಇನ್ನೊಂದು ಬಗೆಯ ದುರಂತ ಸಂಭವಿಸುತ್ತದೆ. ಆಧುನಿಕ ಕಾಲದಲ್ಲಿ ಸಮೂಹನಾಶಕ ಮಾರಕಾಸ್ತ್ರಗಳನ್ನು ತಯಾರಿಸುವ, ಅವುಗಳನ್ನು ಜನಸಮುದಾಯಗಳ ಮೇಲೆ ಪ್ರಯೋಗಿಸಲು ಹೊಂಚು ಹಾಕುವ 'ಬುದ್ಧಿವಂತ'ರಲ್ಲಿ ನಾವಿದನ್ನು ಕಾಣುತ್ತೇವೆ. ಇವರಿಗೆ ಜೀವ ಪ್ರೀತಿ ಯೆಂಬುದೇ ಇಲ್ಲ. ಅಂದರೆ, ಸಾರ್ಥಕ ಬದುಕಿಗೆ ಪ್ರೀತಿಯ ಪ್ರೇರಣೆ, ಜ್ಞಾನದ ಮಾರ್ಗದರ್ಶನಗಳೆರಡೂ ಅವಶ್ಯ.

ಪ್ರೀತಿ ಮತ್ತು ಜ್ಞಾನಗಳೆರಡೂ ನಿರಂತರವಾಗಿ ಹಿಗ್ಗಬಲ್ಲಂಥವು. ಇಲ್ಲಿ ಪರಿಪೂರ್ಣತೆಯೆಂಬುದಿಲ್ಲ. ತಮ್ಮ ಬದುಕು ಎಷ್ಟೇ ಉತ್ತಮವೆಂದು ಭಾವಿಸಿ ರುವವರು ಕೂಡ ಪ್ರೀತಿ ಮತ್ತು ಜ್ಞಾನ ಗಳಿಂದ ಅದನ್ನು ಮತ್ತಷ್ಟು ಉತ್ತಮಪಡಿಸಿ ಕೊಳ್ಳುವುದು ಸಾಧ್ಯ. ಜ್ಞಾನವಿಲ್ಲದ ಪ್ರೀತಿ ಯಿಂದ ಒಳ್ಳೆಯ ಕೆಲಸ ಮಾಡಲೂ ಬಹುತೇಕ ಅಸಾಧ್ಯ. ಹಿಂದಿನ ಕಾಲದ ಜನ – ಕೆಲವು ಜನರು ಆಧುನಿಕ ವಿದ್ಯಾವಂತರು ಕೂಡ – ಪ್ಲೇಗ್, ಕಾಲರಾ ಮೊದಲಾದ ಸಾಂಕ್ರಾಮಿಕ ರೋಗಗಳು ಹರಡತೊಡಗಿದಾಗ, ಜನರು ದೈವಸನ್ನಿಧಿಗಳಲ್ಲಿ ಗುಂಪುಗೂಡಿ ಜಾತ್ರೆಯನ್ನೋ, ಹಬ್ಬವನ್ನೋ, ಮೇಳವನ್ನೋ ಆಚರಿಸುವಂತೆ ಸೂಚಿಸುವುದುಂಟು. ಪರಿಣಾಮ ವೇನೆಂದರೆ ಜನರು ಗುಂಪುಗೂಡಿ ಉಂಡು ತಿಂದು ಮಲಗುವುದರಿಂದ ಅಂಟು ರೋಗಗಳು ಕ್ಷಿಪ್ರವಾಗಿ ವ್ಯಾಪಿಸಿ ಜನರನ್ನು ಬಲಿ ತೆಗೆದುಕೊಳ್ಳುತ್ತವೆ. ಇದು ಆರೋಗ್ಯಶಾಸ್ತ್ರ ವಿಚಾರದಲ್ಲಿ ಅಜ್ಞಾನದ, ಮೂಢನಂಬಿಕೆಯ ಪರಿಣಾಮ.

ಇಷ್ಟಾದ ಮೇಲೆ, ಉತ್ತಮ ಬದುಕಿಗೆ ಪ್ರೀತಿ ಜ್ಞಾನಗಳೆರಡೂ ಅಗತ್ಯವೆಂದು ಒಪ್ಪ ಬಹುದಾದರೂ, ಒಂದು ರೀತಿಯಲ್ಲಿ ಜ್ಞಾನಕ್ಕಿಂತ ಪ್ರೀತಿಗೆ ಸ್ವಲ್ಪ ಹೆಚ್ಚಿನ ಮಹತ್ವವಿರು ವಂತೆ ತೋರುತ್ತದೆ. ಏಕೆಂದರೆ, ತಮ್ಮ ಪ್ರೀತಿ ಪಾತ್ರರು ಕಾಯಿಲೆ ಮಲಗಿದಾಗ, ಅವರ ಕ್ಷೇಮ ಚಿಂತನೆಯಲ್ಲಿ ಕಾಳಜಿಯುಳ್ಳವರು ಸಮರ್ಥನಾದ ವೈದ್ಯನ ಸಹಾಯ ಪಡೆದು ಔಷಧೋಪಚಾರಗಳನ್ನು ಮಾಡುವುದು ಸಾಧ್ಯ. ವೈದ್ಯಶಾಸ್ತ್ರ ಮತ್ತು ಔಷಧ ವಿಜ್ಞಾನ ಗಳಲ್ಲಿ ಹೊಸ ಸಂಶೋಧನೆಗಳು ನಡೆದು ಅನೇಕ ಅನುಕೂಲಗಳು ಲಭ್ಯವಿವೆ. ಹೀಗೆ ಸಂಗ್ರಹವಾದ ಜ್ಞಾನದ ಫಲವು ಕೇವಲ ಬಲಾಢ್ಯ ಶ್ರೀಮಂತರಿಗೆ ಮಾತ್ರವಲ್ಲದೆ ಸಾಮಾನ್ಯ ಬಡಜನರಿಗೂ ತಲುಪುವಂತಾಗಲು ಉಳ್ಳವರಿಗೆ ಇಲ್ಲದವರ ಮೇಲೆ ಪ್ರೀತಿ ಇರಬೇಕಷ್ಟೆ. ಇಂತಹ ಔದಾರ್ಯವು ಪ್ರೀತಿಯ ಇನ್ನೊಂದು ಮುಖ. ಈ ಪ್ರೀತಿಯು, ಈ ಕಳಕಳಿಯು ಬಡಜನರನ್ನೂ ಧೂಳು ತುಂಬಿದ ಬೀದಿಗಳಲ್ಲಿ ಕೂರಿಸಿ ಅನ್ನಸಂತರ್ಪಣೆ ಮಾಡುವ ದೈವಭಕ್ತರ ಔದಾರ್ಯಕ್ಕಿಂತ ಭಿನ್ನವಾದುದೆಂಬುದನ್ನು ಮಾತ್ರ ನಾವು ನೆನೆದಿರಬೇಕು.

ಪ್ರೀತಿಯೆಂಬುದು ಹಲವು ಬಗೆಯ ಭಾವನೆಗಳನ್ನು ಧ್ವನಿಸುವಂತಹ ಮಾತು. ಆದರೆ ಪ್ರೀತಿಯ ಅಮೂರ್ತರೂಪವನ್ನು ಕುರಿತು, 'ದಾರ್ಶನಿಕ ಪ್ರೀತಿ' (platonic love)ಯನ್ನು ಕುರಿತು ಇಲ್ಲಿ ಹೇಳುವಂತಹದೇನಿಲ್ಲ. ಸಾಮಾನ್ಯ ಅನುಭವದಿಂದ ವೇದ್ಯವಾಗುವಂತೆ ತಮ್ಮ ಪ್ರಿಯ ವಸ್ತುವಿನ ಧ್ಯಾನ (contemplation)ದಲ್ಲಿಯೆ ಆನಂದವನ್ನು ಕಾಣುವುದು ಒಂದು ಬಗೆ. ಒಂದು ಪ್ರಾಕೃತಿಕ ದೃಶ್ಯ, ಜುಳುಜುಳು ಹರಿಯುವ ನದಿ, ನಳನಳಿಸುವ ಗುಲಾಬಿ, ಒಂದು ಸುಂದರವಾದ ಚಿತ್ರ, ಮೂರ್ತಿಶಿಲ್ಪ ಇವುಗಳ ನೋಟದಲ್ಲಿ, ಧ್ಯಾನದಲ್ಲಿ 'ರಸಾನುಭವ'' ಪಡೆಯುವುದು ಒಂದು ರೀತಿ. ಇಂತಹ 'ನಿಸರ್ಗ ಪ್ರೇಮ'ವನ್ನು, ಕಲಾ ವಸ್ತುವಿನ ಪ್ರೀತಿಯನ್ನು ವರ್ಡ್ಸ್‌ವರ್ತ್, ಶೆಲ್ಲಿ, ಕುವೆಂಪು, ಬೇಂದ್ರೆ ಮೊದಲಾದ ಕವಿಗಳು ಮನೋಹರವಾಗಿ ವರ್ಣಿಸಿದ್ದಾರೆ. ''ಜಡವಸ್ತು''ಗಳನ್ನು ಕುರಿತ ಈ ಬಗೆಯ ಪ್ರೀತಿಯಲ್ಲಿ ಅದನ್ನೂ ಸ್ವಂತಕ್ಕೆ ಪಡೆದುಕೊಳ್ಳುವ ಆಸಕ್ತಿಯಾಗಲಿ, ಉಪಕಾರ ಮಾಡುವ ಭಾವನೆಯಾಗಲಿ ಪ್ರವರ್ತಿಸುವಂತಿಲ್ಲ. ಪ್ರೀತಿಯ ಇನ್ನೊಂದು ಮುಖ 'ಕರುಣೆ', ಉಪಕಾರ ಬುದ್ಧಿ. ಅನಾಥ ಮಕ್ಕಳ ಬಗೆಗೆ ಕುಷ್ಠರೋಗಿಗಳ ಬಗೆಗೆ ಅಪಾರ ಪ್ರೀತಿ ತೋರಿದ ಮಾತೆ ತೆರೆಸಾರಂತಹ ಮಹಾನುಭಾವರಿದ್ದಾರೆ. ತಮ್ಮ ಆಶ್ರಯಕ್ಕೆ ಬಂದ ಅಸಹಾಯಕರ ಸೇವೆ ಮಾಡುವುದರಲ್ಲಿ ಇವರು ಅನುಭವಿಸಿರಬಹುದಾದ ಸಂತೋಷಕ್ಕೆ ಸೌಂದರ್ಯದ ಪ್ರೇರಣೆಯೇನೂ ಇಲ್ಲ. ಮಕ್ಕಳ ಬಗೆಗೆ ತಾಯಿತಂದೆಯರು ತೋರುವ ಪ್ರೀತಿಯಲ್ಲಿ ಸೌಂದರ್ಯಾನುಭವ ಮತ್ತು ಕರುಣೆಗಳೆರಡೂ ಮಿಳಿತವಾಗಿರುವಂತೆ ತೋರುತ್ತದೆ.

*ಅಳುವ ಕಂದನ ಬಾಯಿ ಹವಳಾದ ಕುಡಿಯಂತೆ*
*ಕುಡಿ ಹುಬ್ಬು ಬೇವಿನ ಎಸಳಂತೆ ॥*
*ಕಂಗಳ ಧಾಮ*
*ಶಿವನ ಕೈ ಅಲಗು ಹೊಳೆದಂತೆ ॥*

ಎಂದು ವರ್ಣಿಸುತ್ತಲೇ ಅಳುವ ಕಂದ ನನ್ನು ಸಂತೈಸುವ ತಾಯಿಯ ಆನಂದ ತನಗೇ ವಿಶಿಷ್ಟವಾದುದು. ಆದರೆ, ಮಕ್ಕಳ ಮೇಲಿನ ಪ್ರೀತಿಗೆ ಅವುಗಳ 'ಚೆಂದಗಾಣೆ'ಯೂ ಅನಿವಾರ್ಯವಲ್ಲ. ವಾಸ್ತವವಾಗಿ ಇಂತಹ ಸೌಂದರ್ಯದ ಅಭಾವದಲ್ಲಿ ತಾಯಿ ತಂದೆಯರ ಪ್ರೀತಿ ಮತ್ತಷ್ಟು ತೀವ್ರವಾಗುತ್ತದೆ. ತನ್ನ ಮಕ್ಕಳ ಪೈಕಿ ಸೌಂದರ್ಯವಂತರೂ, ಆರೋಗ್ಯ ವಂತರೂ ಆದವರಲ್ಲಿ ತೋರುವುದಕ್ಕಿಂತ ಹೆಚ್ಚಿನ ಪ್ರೀತಿಯನ್ನು ತಾಯಂದಿರು ಅಂಗ ವಿಕಲರೋ, ರೋಗಿಷ್ಠರೋ ಆದವರಲ್ಲಿ ತೋರುವುದನ್ನು ಕಂಡಿದ್ದೇನೆ. ಕಾಯಿಲೆ ಮಲಗಿದ ಮಗುವಿನ ಬಗೆಗೆ ತಾಯಿ ವಹಿಸುವ ಕಾಳಜಿಯನ್ನು 'ಕರುಣೆ' ಎನ್ನುವುದು ಸರಿಯಾಗಲಾರದು. ಆ ಶಬ್ದ ಒಂದು ರೀತಿಯಲ್ಲಿ ಬೋಳು, ಬೋಳು; ಅಲ್ಲದೆ, 'ಕರುಣೆ'ಯಲ್ಲಿ ಒಂದು ಬಗೆಯ ಪ್ರದರ್ಶನ, ಬೂಟಾಟಿಕೆಯ ಸೂಚನೆಯಿರುವಂತೆ ಭಾಸವಾಗುತ್ತದೆ. ಪುತಿನ ಅವರ ಕವಿತೆಯೊಂದರಲ್ಲಿ (ನನ್ನ ನಾಯಿ) ಒಂದು ನಾಯಿಮರಿಯ ಪ್ರಸಂಗ ಬರುತ್ತದೆ –

ಚಳಿರಾತ್ರಿಯಲ್ಲಿ ಕೊಳದ ದಡದಲ್ಲಿ ಕಂಡ ನಾಯಿಮರಿಯನ್ನು ಕವಿತೆಯ ನಾಯಕ ಮನೆಗೆ ತಂದು ಹಾಲು ಅನ್ನವನುಣಿಸಿ ಸಾಕುತ್ತಾನೆ. ಉತ್ತಮವಾದ ತಿಂಡಿ ತೀರ್ಥಗಳನ್ನೆಲ್ಲ ಕೊಡುತ್ತಿದ್ದರೂ, ತಮ್ಮ ಮೇಲುಜಾತಿಯ ಹೆಮ್ಮೆಯಿಂದಾಗಿ ಅದು ಹೊಸಿಲದಾಟಿ ಒಳಗೆ ಬರಲು ಅವಕಾಶಕೊಡುವುದಿಲ್ಲ. ತಾವೂ ಅದರ ಮೈಮುಟ್ಟುವುದಿಲ್ಲ, ಮಡದಿ ಮಕ್ಕಳೂ ಮುಟ್ಟಲು ಬಿಡುವುದಿಲ್ಲ. ಹೀಗಿರುವಾಗ ಒಂದು ರಾತ್ರಿ ಕುರುಬ ಗೌಡನೊಬ್ಬನು ಇವರ ಮನೆಯ ಜಗಲಿಯ ಮೇಲೆ ಮಲಗಲು ಕಂಬಳಿ ಹಾಸಿ ಚಳಿಗೆ ನಡುಗುವ ಮರಿಯನ್ನು ಜೊತೆಯಲ್ಲಿ ಮಲಗಿಸಿಕೊಳ್ಳುತ್ತಾನೆ. ಬೆಳಗಾಗ ಆ ಕುರುಬನೊಡನೆ ಮರಿಯೂ ಹೊರಟು ಹೋಗಿತ್ತು. ಮೂರು ದಿನಗಳು ಹುಡುಕಿ ಕೊನೆಗೂ ಮರಿಯನ್ನು ಕಾಣುತ್ತಾರೆ. ಅದನ್ನು ಕದ್ದು ತಂದದ್ದಕ್ಕಾಗಿ ಕುರುಬ ಗೌಡನನ್ನು ಗದರುತ್ತಾರೆ... ಮರಿಯನ್ನು ಮನೆಗೆ ಕೊಂಡೊಯ್ಯುವ ಸಲುವಾಗಿ ಅದರ ಕೊರಳಿಗೆ ಹಗ್ಗ ಹಾಕಿ ಎಳೆಯುತ್ತಾರೆ. ಮರಿ ಬರುವುದಿಲ್ಲ; ಇವರ ಸವಿ ಮಾತುಗಳಿಗೆ ಅದು ಜಗ್ಗುವುದಿಲ್ಲ. ಕಡೆಗೆ ಹಗ್ಗ ಸಡಿಲಿಸಿ ಬಿಟ್ಟ ಮರಿಯನ್ನು ಕುರುಬ ತಬ್ಬಿಕೊಳ್ಳುತ್ತಾನೆ. ಕವಿ ಕೇಳುತ್ತಾರೆ : ''ಕರುಣೆ ಒಲುಮೆಗೆ ಸಾಟಿಯೆ ?'' ಎಂದು. ಮರಿಯ ಬಗೆಗೆ ಆ ಮನೆಯವರು ತೋರಿದ್ದು 'ಕರುಣೆಯ

ಬಿಂಕ', ಕುರುಬ ತೋರಿದ್ದು ಒಲುಮೆ.

ಕರುಣೆ, ದಯೆ, ಪರೋಪಕಾರಗಳ ಅಭಿವ್ಯಕ್ತಿ ಒಮ್ಮೊಮ್ಮೆ 'ಸ್ವಾಭಿಮಾನದ ಬಿಂಕ'ವೂ ಆಗುವುದುಂಟು. ಮಹಾಕವಿ ಕುವೆಂಪು ಅವರ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದ ಒಂದು ಸಂದರ್ಭ; ರಾವಣ ವಧೆಯ ಅನಂತರ ಸೀತೆಯನ್ನು ಪರಿಗ್ರಹಿಸುವ ಮುನ್ನ ಅವಳ ಶೀಲವನ್ನು ಶಂಕಿಸಿದ ಶ್ರೀರಾಮ ಹೇಳುತ್ತಾನೆ –

*''ನೀಂ ಸ್ಫುರದ್ರೂಪಿಣಿಯೆ ದಲ್! ದಶಾನನನ್ ಅವಶಿ;*
*ದಶರಥಾತ್ಮಜನಲ್ತು! ತಿಳಿಯುವೊಡೆ ತಿಳಿ, ಸುಜ್ಞೆ,*
*ಪೇಳ್ದ ವ್ಯಾಕ್ಯಾರ್ಥಮಂ. ಇಲ್ಲದಿರೆ ತೊಲಗು ನಡೆ,*
*ಮೂರ್ಖೆ........''*

*(ರಯ್‌ಣೆ ಕರೆದೊಯ್ ಓ ಅಗ್ನಿ)*

ರಾಮನು ದಯಾಳುವೆಂಬುದು ನಿಜ. ಆದರೆ ತನ್ನೊಡನೆ ಹೋಲಿಸಿಕೊಂಡು ರಾವಣನನ್ನೂ, ಸೀತೆಯನ್ನೂ ಹಂಗಿಸುವುದರಲ್ಲಿ ವ್ಯಕ್ತವಾಗಿರುವುದು 'ಸಂಭಾವಿತನ ಅಹಂಕಾರ' !

ಇಷ್ಟಾದರೂ, ಸಹಜೀವಿಗಳ ಕ್ಷೇಮ ಚಿಂತನೆಯನ್ನು ವ್ಯಕ್ತಪಡಿಸುವುದಕ್ಕೆ ಕರುಣೆ, ದಯೆ, ಮರುಕ - ಈ ಶಬ್ದಗಳನ್ನು ಬಿಟ್ಟರೆ ಬೇರೆ ಹೊಳೆಯುತ್ತಿಲ್ಲ. 'ಸಹಾನುಭೂತಿ', 'ಅನುಕಂಪ' ಪದಗಳೂ ಇವೆ; ಆದರೆ ಅವು ಕ್ರಿಯಾಪ್ರೇರಕವಾಗಿವೆಯೆನಿಸುವುದಿಲ್ಲ. ಹೀಗಾಗಿ 'ಕರುಣೆ'ಗೆ ಶರಣುಹೋಗಿದ್ದಾಗಿದೆ.

ಪ್ರೀತಿ ಎಂಬುದು ಆನಂದಾನುಭವ, ಕ್ಷೇಮ ಚಿಂತನೆಗಳೆರಡನ್ನೂ ಒಳಗೊಳ್ಳುವ ಮಾತು. ಅತ್ಯುತ್ತಮ ಸ್ಥಿತಿಯಲ್ಲಿ ಗಂಡು ಹೆಣ್ಣಿನ ಪ್ರೀತಿ ಕೂಡ ಇಂತಹದೇ. ಲೈಂಗಿಕ ಪ್ರೀತಿ (sexlore) ಅಥವಾ ಕಾಮದಲ್ಲಿ ಅನುಭೋಗ ಮತ್ತು ಪರಸ್ಪರ ಹಿತಚಿಂತನೆಗಳೆರಡೂ ಇರಬೇಕು. ಯಾವುದಾದರೊಂದು ಲೋಪವಾದರೆ ಮಾತ್ಸರ್ಯ ಇಲ್ಲವೆ ಕ್ರೌರ್ಯಕ್ಕೆ ಎಡೆಯಾಗುತ್ತದೆ. ಪರಸ್ಪರ ಹಿತಚಿಂತನೆಯಿಲ್ಲದ ಭೋಗವು ಕ್ರೂರವಾದದ್ದು; ಅದರಲ್ಲಿ ಆನಂದವೇನೂ ಇಲ್ಲ. ಹಾಗೆಯೇ ಅನುಭೋಗದಲ್ಲಿ ಆಸಕ್ತಿಯಿಲ್ಲದ ಗಂಡು ಹೆಣ್ಣಿನ ಪ್ರೀತಿಯು ಬೇಗನೆ ಕಾವಿಳಿದು ತಣ್ಣಗಾಗಿಬಿಡುತ್ತದೆ. ಅನುಭೋಗದ ಆನಂದವಿಲ್ಲದ ಪ್ರೀತಿಯಲ್ಲಿ 'ಇನ್ನೊಬ್ಬರಿಗೆ ಸಹಾಯಮಾಡುತ್ತಿದ್ದೇನೆ' ಎಂಬಂಥ ಹಿರಿತನದ ಭಾವನೆ ಸೇರಿಕೊಳ್ಳುವುದೂ ಸಾಧ್ಯ. ಶೈಶವದ ಪರಾವಲಂಬನೆ, ವೃದ್ಧಾಪ್ಯದ ಅಸಹಾಯಕತೆಗಳ ಸಂದರ್ಭಗಳನ್ನು ಹೊರತುಪಡಿಸಿದರೆ 'ಪ್ರೀತಿಪಾತ್ರ'ರಾಗ ಬಯಸುವ ವ್ಯಕ್ತಿಗಳು ಅನುಭೋಗದ ಆನಂದ ಮತ್ತು ಪರಸ್ಪರ ಕ್ಷೇಮ ಚಿಂತನೆಗಳೆರಡನ್ನೂ ನಿರೀಕ್ಷಿಸುತ್ತಾರೆನ್ನಬಹುದು. ಕೈಲಾಗದ ಅಸಹಾಯಕತೆಯ ಸಂದರ್ಭದಲ್ಲಿ ಕರುಣೆಯನ್ನು ಮಾತ್ರ ನಿರೀಕ್ಷಿಸಿ, ಪಡೆಯಬಹುದೇನೋ. ಇದಕ್ಕೆ ವಿರುದ್ಧವಾಗಿ ಶಾರೀರಿಕ, ಆರ್ಥಿಕ, ಸಾಮಾಜಿಕ ವಿಚಾರಗಳಲ್ಲಿ ತಾವು ಅತ್ಯಂತ ಶ್ರೇಷ್ಠರೆಂದು ತಿಳಿದಿರುವವರು ಪ್ರಶಂಸೆಯನ್ನು ಮಾತ್ರ ನಿರೀಕ್ಷಿಸುತ್ತಾರೆ. ಬಲಿಷ್ಠರಾದ ರಾಜಮಹಾರಾಜರು, 'ಸೌಂದರ್ಯರಾಣಿ'ಯರ ಮನೋಭಾವ ಇಂತಹದಿರಬಹುದು. ಭಯ ಮತ್ತು ಕಷ್ಟದಲ್ಲಿ ಸಿಲುಕಿದಾಗ ಸ್ನೇಹಿತರನ್ನು, ಬೇರೊಬ್ಬರ ಸಹಾಯವನ್ನು ನಿರೀಕ್ಷಿಸುವುದು ಒಂದು ಸಹಜ ಜೈವಿಕ ಪ್ರವೃತ್ತಿ ಎನ್ನಬಹುದು. ಇಷ್ಟು ಮಾತ್ರವೇ ಅಲ್ಲ; ಬದುಕಿನ ಒಂಟಿತನವನ್ನು ನಿವಾರಿಸಿಕೊಳ್ಳುವ ಸಲುವಾಗಿಯೂ ಮನುಷ್ಯರು ಸ್ನೇಹ ಪ್ರೀತಿಗಳನ್ನು ಬಯಸುತ್ತಾರೆ. ಆಗಾಗ ಹೇಳುವಂತೆ ಪ್ರತಿಯೊಬ್ಬ ವ್ಯಕ್ತಿಗೂ ತನ್ನನ್ನ ಅರ್ಥಮಾಡಿಕೊಳ್ಳುವ ಇನ್ನೊಂದು ವ್ಯಕ್ತಿ ಬೇಕು. ಇದು ಒಂದು ರೀತಿಯಲ್ಲಿ ಸಾಹಚರ್ಯ, ಸಹಾನುಭೂತಿಗಳ ವಿಚಾರ; ಕೇವಲ ಉಪಕಾರದ ಪ್ರಶ್ನೆಯಲ್ಲ.

ಯಾವ ವ್ಯಕ್ತಿಗಳಲ್ಲಿ ಪರಸ್ಪರ ಒಲವಿದೆಯೋ ಅವರಲ್ಲಿ ಒಬ್ಬರು ಮತ್ತೊಬ್ಬರ ಒಳಿತನ್ನೂ ಬಯಸುತ್ತಾರೆನ್ನುವುದು ಮಾತ್ರವಲ್ಲ ಅದರಲ್ಲಿಯೆ ಆನಂದವನ್ನು ಕಾಣುತ್ತಾರೆ. ಬಾಯಿಬಿಟ್ಟು ಹೇಳದಿದ್ದರೂ ಒಬ್ಬರ ಇಷ್ಟಾನಿಷ್ಟಗಳನ್ನು ಅರಿತುಕೊಳ್ಳುವುದನ್ನು 'ಪರೇಂಗಿತ ಜ್ಞಾನ' ಎನ್ನುತ್ತಾರೆ. ಒಲಿದವರಂತೂ ಹಾಗೆಯೇ ಭಾವಿಸುತ್ತಾರೆ –

''ಏನು ಮೆಚ್ಚಿಕೆ ನನಗೆ ಅದನೆ ನಲ್ಲೆ ಎಸಗುವಳೆಂಬನು
ಏನನೆಸಗುವಳವಳು ಅದೆ ಅದೆ ಮೆಚ್ಚು ತನಗೆಂದರಿಯನು''

*(ಭಾರತೀಯ ಕಾವ್ಯಮೀಮಾಂಸೆ – ತೀನಂಶ್ರೀ)*

ಈ ಒಲವು ಉತ್ತಮ ದಾಂಪತ್ಯದ ಒಂದು ಸಂಗತಿ.

ಆದರ್ಶ ಮಾನವ ಸಮುದಾಯದಲ್ಲಿ ಪ್ರತಿಯೊಬ್ಬ ಸಂವೇದನಾಶಾಲಿಯೂ ತನ್ನ ಸಹಚರರೊಡನೆ ಪ್ರೀತಿವಿಶ್ವಾಸಗಳಿಂದ ನಡೆದುಕೊಳ್ಳಬಹುದೇನೋ! ಆದರೆ

# ಹೆದ್ದಾರಿಯಾದೀತು

ಕೃಷ್ಣನಿಗೆ ಭಾಷೆ ಬಾರದಿದ್ದರೇನಂತೆ ?
ಅವನನ್ನು ನಾವು ಕರಿಯ ಎನ್ನುವ
ದನ ಕಾಯುವವ ಎನ್ನುವ
ಸಾವಿರಾರು ಹೆಂಡಿರ ಗಂಡ ಎನ್ನುವ
ನಮ್ಮ ಜರಿಯುವಿಕೆಗಾದರೂ ಆತ ಜಗ್ಗಲಾರನೆ ?॥೧॥

ಅಲ್ಲಾನಿಗೆ ಭಾಷೆ ಬಾರದಿದ್ದರೇನಂತೆ ?
ಅವನನ್ನು ನಾವು ಸೊನ್ನೆ ಎನ್ನುವ
ಕೈಲಾಗದವ ಎನ್ನುವ
ಅಡಗಿ ಕುಳಿತ ಅದೃಶ್ಯ ಎನ್ನುವ
ನಮ್ಮ ಜಿಗುಪ್ಸೆಗಾದರೂ ಆತ ಜಗ್ಗಲಾರನೆ ?॥೨॥



ಏಸುವಿಗೆ ಭಾಷೆ ಬಾರದಿದ್ದರೇನಂತೆ ?
ಅವನನ್ನು ನಾವು ಶಿಲುಬೆಗೇರಿಸುವ
ಮೊಳೆ ಹೊಡೆಯುವ
ಎಳೆತಂದು ಕೊಟ್ಟಿಗೆಯಲ್ಲಿ ಹೂಳುವ
ನಮ್ಮ ಕೃತ್ಯಕ್ಕಾದರೂ ಆತ ಜಗ್ಗಲಾರನೆ ? ॥೩॥

ಬುದ್ಧನಿಗೆ ಭಾಷೆ ಬಾರದಿದ್ದರೇನಂತೆ ?
ಅವನನ್ನು ನಾವು ಜಡ ಎನ್ನುವ
ನಿದ್ದೆಬುರುಕ ಎನ್ನುವ
ನಿಲುಕದ ಅವಿವೇಕಿ ಅನ್ನುವ
ನಮ್ಮ ಬಹಿಷ್ಕಾರಕ್ಕಾದರೂ ಆತ ಜಗ್ಗಲಾರನೆ । ॥೪॥

ಇರಲಿ ಬಿಡು ಗೆಳೆಯ, ಇವರೆಲ್ಲ ಆಗಿಹೋದವರು.
ಹಿಂಸೆ ಇವರಿಗೆ.. ಸಾಮಾನ್ಯ.. ಹೆಚ್ಚೆಂದರೆ ''ನಗುತ್ತಾರೆ''.
ನಗುವವರನ್ನು ನಂಬುವುದರಲ್ಲಿ ಅರ್ಥವಿಲ್ಲ.
ನಾವೇ ಬೇರೊಂದು ದಾರಿ ಹಿಡಿಯೋಣ, ಅದೇ
ಹೆದ್ದಾರಿಯಾದೀತು...!
ಗುಂಡಿಗೆ ಇದ್ದವರೆಲ್ಲಾ ನಮ್ಮೊಂದಿಗೆ ಜೊತೆಯಾದಾರು...

**ಪೂರ್ಣಪ್ರಜ್ಞ ಬೇಳೂರು**
ಅಂಚೆ : ಬೇಳೂರು ೫೭೭೪೦೧, ಸಾಗರ-ಶಿವಮೊಗ್ಗ

ಇದೊಂದು ಆದರ್ಶ ಮಾತ್ರ. ವಾಸ್ತವಲೋಕದಲ್ಲಿ ಯಾವ ವ್ಯಕ್ತಿಯೂ ತನ್ನ ಸಂಪರ್ಕಕ್ಕೆ ಬರುವ ಎಲ್ಲರನ್ನೂ ಪ್ರೀತಿಸುವುದು, ಎಲ್ಲರೊಡನೆ ಒಂದೇ ಬಗೆಯ ಭಾವನೆ ಹೊಂದಿರುವುದು, ಒಂದೇ ರೀತಿ ವರ್ತಿಸುವುದು ಪ್ರಾಯಶಃ ಅಸಾಧ್ಯ. ಇಂತಹ ಸಂದರ್ಭಗಳಲ್ಲಿ ಪ್ರೀತಿಯೆಂಬುದು ಆಯ್ಕೆಯ ವಿಷಯವಾಗುತ್ತದೆ.

ಲೋಕ ಜೀವನದಲ್ಲಿ ಒಬ್ಬರನ್ನೊಬ್ಬರು ಪ್ರೀತಿಸಲಾರದ, ಸಂತೋಷಗೊಳಿಸಲಾರದ, ಸಂದರ್ಭಗಳು ಇದ್ದೇ ಇರುತ್ತವೆ. ಈ ಜಗತ್ತಿನಲ್ಲಿ ಮಾನವರು ಮಾತ್ರವಲ್ಲದೆ ಅಸಂಖ್ಯಾತ ಬಗೆಯ ಜೀವ ಜಂತುಗಳಿವೆ. ದುಷ್ಟ, ಕ್ರೂರ, ಅಪಾಯಕಾರಿಯಾದ ಪ್ರಾಣಿಗಳಿವೆ. ಎಲ್ಲವನ್ನೂ ಒಂದೇ ರೀತಿ ಪ್ರೀತಿಸಬೇಕೆಂದರೆ ಅದು ಅತಿರೇಕವಾಗುತ್ತದೆ. ಪ್ರಾಣಿಗಳ ಬಗೆಗೆ ಅದರಲ್ಲೂ ದುಷ್ಟ ಜಂತುಗಳ ಬಗೆಗೆ ಹೆಚ್ಚೆಂದರೆ ಕರುಣೆ ತೋರಬಹುದು, ಅಷ್ಟೆ. ಜಿರಲೆ, ಹಲ್ಲಿ, ನೊಣ, ಸೊಳ್ಳೆಗಳು ಅಸಹ್ಯವನ್ನುಂಟು ಮಾಡುತ್ತವೆ. ಜಿಗುಪ್ಸೆ ತರಿಸುತ್ತವೆ. ಕೆಲವು ಸಾಧು ಸಂತರು, ಕ್ಷುದ್ರ ಕ್ರಿಮಿ ಕೀಟಾದಿಗಳು 'ದೇವರಿಗೆ ಹತ್ತಿರವಾದವು' ಎಂದಿರುವುದುಂಟು. ಆದರೆ ಹಾಗೆ ಹೇಳುವಲ್ಲಿ ಅವರಿಗೆ ತಾವೆಷ್ಟು ಕರುಣಾಮಯರು ಎಂದು ಸಾರುವ ಹಂಬಲವಿರಬಹುದೇನೋ ಎಂಬ ಅನುಮಾನ ಬರುತ್ತದೆ. ಸಾಧು ಸಂತರು, ಜೀವನ್ಮುಕ್ತರ ದೃಷ್ಟಿಯಲ್ಲಿ ಹೇಗಾದರೂ ಇರಲಿ; ಲೌಕಿಕರಾದ ನಮ್ಮ ದೈನಂದಿನ ವ್ಯವಹಾರ ಜಗತ್ತಿನಲ್ಲಿ ಕೆಲವರು ನಮಗೆ ಬೇಕಾದವರು; ಇವರಿಗೆ ಸಂತೋಷವಾದರೆ ನಮಗೂ ಸಂತೋಷ; ಇವರಿಗೆ ದುಃಖವೊದಗಿದರೆ ನಮಗೂ ದುಃಖ. ಮತ್ತೆ ಕೆಲವರು ನಮಗೆ ಸೇರದವರು; ಇವರ ದುಃಖದಲ್ಲಿ ನಾವು ಸುಖಿಸದಿದ್ದರೂ ಇವರ ಸುಖದಲ್ಲಿ ಆನಂದಪರವಶರಾಗುವುದಿಲ್ಲ. ಮತ್ತೆ ಕೆಲವರ ಬಗೆಗೆ ನಮಗೆ ಔದಾಸೀನ್ಯ. ಹೀಗೆ ಪ್ರೀತಿಗೆ ಕೂಡ ತನ್ನದೇ ಆದ ಇತಿಮಿತಿಗಳಿವೆ.

ಇನ್ನೂ ಒಂದು ಬಗೆಯ ಪರಿಮಿತಿಯನ್ನು ನಾವು ಗಮನಿಸಬೇಕು. ಪ್ರೀತಿಯ ಒಂದಂಶವಾದ ಪರೋಪಕಾರವು ಕೆಲಮಟ್ಟಿಗಾದರೂ ಸ್ವಾರ್ಥ ತ್ಯಾಗವನ್ನು ನಿರೀಕ್ಷಿಸುವ ಸಂದರ್ಭಗಳುಂಟು. ಉದಾ: ಒಬ್ಬ ವ್ಯಕ್ತಿಯು ಹೆಣ್ಣೊಬ್ಬಳನ್ನು ಪ್ರೀತಿಸಿ, ತನ್ನವಳಾಗಿಸಿಕೊಳ್ಳಲು ಇಷ್ಟ ಪಟ್ಟಿದ್ದನೆನ್ನೋಣ. ಅದೇ ಹೆಣ್ಣನ್ನು ಬೇರೊಬ್ಬನು ಇಷ್ಟಪಡುತ್ತಾನೆನ್ನುವ ಕಾರಣದಿಂದ ಅವಳನ್ನು ಅವನಿಗೆ ಬಿಟ್ಟುಕೊಟ್ಟು 'ಸ್ವಾರ್ಥತ್ಯಾಗ'ವನ್ನು ಮೆರೆಯಬೇಕಾಗಿಲ್ಲ. ಇದು ನೇರವಾಗಿ ಸ್ಪರ್ಧೆಯ ಕ್ಷೇತ್ರ, ಸ್ಪರ್ಧೆಯಲ್ಲಿ ಸೋಲುಗೆಲವುಗಳ ವಿಚಾರ ಬೇರೆ. ಹೀಗಾಗಿ, ಉತ್ತಮ ಬದುಕನ್ನು ವ್ಯಾಖ್ಯಾನಿಸುವಾಗ ಜೀವ ಸಹಜವಾದ, ಒಂದು ಮಟ್ಟಿನ ಸ್ವಾರ್ಥವನ್ನು ಒಪ್ಪಿಕೊಳ್ಳಲೇಬೇಕಾಗುತ್ತದೆ. ಅನುಭೋಗದ ಆಸಕ್ತಿ, ಅದಕ್ಕೆ ಅಗತ್ಯವಾದಷ್ಟು ಸ್ವಹಿತ ರಕ್ಷಣೆಯ ಪ್ರಯತ್ನಗಳಿಲ್ಲದಿದ್ದಾಗ ಬದುಕು ನಿಸ್ಸಾರ, ನಿರರ್ಥಕ ಎನಿಸಿಬಿಡಬಹುದು (ಸಪ್ಪೆ ಬಾಳುವೆಗಿಂತ ಉಪ್ಪು ನೀರು ಲೇಸು – ಎನ್ನುತ್ತಾರೆ ಬೇಂದ್ರೆ). ನಾಗರೀಕತೆ, ಸಭ್ಯತೆ, ಸಂಸ್ಕೃತಿ ಮೊದಲಾದವು ಜೀವ




ಪ್ರೀತಿಗೆ, ಜೀವನೋತ್ಸಾಹಕ್ಕೆ ಪೂರಕವಾಗಬೇಕೇ ಹೊರತು ಮಾರಕವಾಗಬಾರದು. ಸನ್ಯಾಸಿಗಳು, ವಿರಕ್ತರು (ವಿರಕ್ತರು ಎಂದರೆ ರಕ್ತಹೀನರು ಎನ್ನುತ್ತಾರೆ ಡಾ|| ಶಿವರಾಮ ಕಾರಂತ) ಮೊದಲಾದವರಲ್ಲಿ ಜೀವನೋತ್ಸಾಹ ಭಾವಗಳೇ ಇಲ್ಲವೆಂದಾದರೆ ಅವರು ಅರೆ ಮಾನವರೆನಿಸುತ್ತಾರೆಯೆ ಹೊರತು ಪೂರ್ಣ ಜೀವಿಗಳೆನಿಸುವುದಿಲ್ಲ. ಇಂಥವರಲ್ಲಿ ಕೆಲವರು ಸಮುದಾಯಗಳಿಗಾಗಿ ತ್ಯಾಗ ಮಾಡಿದ್ದಾರೆ. ಸಮಾಜ ಸೇವೆ ಮಾಡಿದ್ದಾರೆಂಬುದು ನಿಜವಿರಬಹುದು. ಆದರೆ, ವಿರಕ್ತರು, ಸಾಧು ಸಂನ್ಯಾಸಿಗಳಿಂದಲೆ ತುಂಬಿದ ಸಮುದಾಯ ಬಂಜರು ಭೂಮಿಯಾಗುವುದು ಅನಿವಾರ್ಯ. ಸ್ವಂತದ ಸುಖ ಸಂತೋಷ ಮತ್ತು ತ್ಯಾಗಗಳ ನಡುವೆ ಸಂದಿಗ್ಧ ತಲೆದೋರಿದಾಗ ಮಧ್ಯ ಮಾರ್ಗವೊಂದನ್ನು ಕಂಡುಕೊಳ್ಳಬೇಕಾಗುತ್ತದೆಯೆ ಹೊರತು ಯಾವುದನ್ನೂ ಸಂಪೂರ್ಣವಾಗಿ ಬಿಟ್ಟುಕೊಡುವುದಾಗುವುದಿಲ್ಲ. –

''ಸೊಡರೆಣ್ಣೆ ತೀರಿದರೆ ಕೊಡನೆತ್ತಿ ಎರೆವರೆ
ಕೊಡಬೇಡ ಕೊಡದೆ ಇರಬೇಡ|| ಧರ್ಮವನು
ಬಿಡಬೇಡ...''ವೆಂದಿದ್ದಾನೆ ಸರ್ವಜ್ಞ ಕವಿ.

-ಜೀವ ಸಹಜ ಪ್ರವೃತ್ತಿಗಳಿಗೆ ಬದುಕಿನಲ್ಲಿ ತಮ್ಮದೇ ಆದ ಪ್ರಾಮುಖ್ಯವೂ, ಸಾರ್ಥಕತೆಯೂ ಇದೆ. ಒಂದು ಮಿತಿಯನ್ನು ಮೀರಿ ಅವುಗಳನ್ನು ಹತ್ತಿಕ್ಕ ಹೋದರೆ ಅದು ಕ್ರೌರ್ಯವಾಗುತ್ತದೆ. ಪ್ರವೃತ್ತಿಗಳು ಬಂಡಾಯವೇಳುತ್ತವೆ. ಆದ್ದರಿಂದ ಉತ್ತಮ ಬದುಕನ್ನು ವ್ಯಾಖ್ಯಾನಿಸುವಾಗ ಸಾಮಾನ್ಯ ಮನುಷ್ಯನ ಇತಿಮಿತಿಗಳನ್ನೂ, ಸಾಧ್ಯಾಸಾಧ್ಯತೆಗಳನ್ನೂ ಅರಿತಿರಬೇಕಾಗುತ್ತದೆ. ಇದೇ ವಸ್ತುಸ್ಥಿತಿ ಜ್ಞಾನ. ಈಗ ನಾವು ಪುನಃ ಜ್ಞಾನದ ಕ್ಷೇತ್ರಕ್ಕೆ ಕಾಲಿರಿಸುತ್ತೇವೆ.

ಭೌತವಾದಿ ದೃಷ್ಟಿಯಲ್ಲಿ 'ಜ್ಞಾನ'ವೆಂದರೇನು – ಎಂಬುದನ್ನು ನಾವು ಮೊದಲು ಪರಿಷ್ಕಾರ ಮಾಡಿಕೊಳ್ಳಬೇಕು. ಅಧ್ಯಾತ್ಮವಾದಿಗಳು ವೇದಾಂತಿಗಳು ಭೌತ ಪ್ರಪಂಚವೆಲ್ಲ ಮಾಯೆ; ಆದ್ದರಿಂದ ಭೌತ ವಸ್ತುಗಳನ್ನು ಕುರಿತ ತಿಳಿವಳಿಕೆಯೇನಿದ್ದರೂ 'ಮಿಥ್ಯಾಜ್ಞಾನ' ಅಥವಾ ಭ್ರಮೆ ಎನ್ನುತ್ತಾರೆ. ಇವರ ಪ್ರಕಾರ 'ಪರಮಾತ್ಮ ಜ್ಞಾನ'ವೊಂದೇ ನಿಜವಾದ ಜ್ಞಾನ. ವೇದಾಂತಿಗಳ ದೃಷ್ಟಿಯಲ್ಲಿ ಹೇಗಾದರೂ ಇರಲಿ; ಲೌಕಿಕರಾದವರಿಗೇನೋ ದಿನ ಬಳಕೆಯ ಈ ಪ್ರಪಂಚವು ವಾಸ್ತವಿಕವೆಂದೇ ತೋರುವುದು ಖಚಿತ. ಇಲ್ಲಿಯ ಮಾನವರೊಂದಿಗೆ ವೈಯಕ್ತಿಕ ಸಂಬಂಧಗಳನ್ನು ಬೆಳೆಸಿಕೊಳ್ಳುತ್ತೇವೆ. ಇಲ್ಲಿ ಕೆಲವರು ನಮಗೆ ಬೇಕಾದವರು, ಮತ್ತೆ ಕೆಲವರು ಬೇಡವಾದವರು ಅಥವಾ ಬಹುಮಂದಿ ಉದಾಸೀನರು. ಇಲ್ಲಿನ ವಸ್ತು, ವ್ಯಕ್ತಿಗಳನ್ನು ನಾವು ಪಂಚೇಂದ್ರಿಯಗಳ ಮೂಲಕ ಸಂಪರ್ಕಿಸಬಹುದು; ಬಯಸಬಹುದು, ಗಳಿಸಬಹುದು; ಅನುಭವಿಸಬಹುದು. ಆದ್ದರಿಂದ ಇವುಗಳ ಬಗೆಗೆ ಆದಷ್ಟೂ ನಿರ್ದಿಷ್ಟವಾದ, ಖಚಿತವಾದ ಜ್ಞಾನ ಅವಶ್ಯಕ. ಬದುಕಿನ ಯಾವುದಾದರೊಂದು ಉದ್ದೇಶವನ್ನು ಸಾಧಿಸಬೇಕಾದರೆ, ಅಗತ್ಯವಾದ ವಸ್ತು ಸಲಕರಣೆಗಳ ಬಗೆಗಿನ ಕರಾರುವಾಕ್ಕಾದ ತಿಳಿವಳಿಕೆ, ಅನುಸರಿಸಬೇಕಾದ ಮಾರ್ಗದ ಸ್ಪಷ್ಟ ಪರಿಜ್ಞಾನ ಇರಬೇಕಾಗುತ್ತದೆ. ಇದೇ ವಿಜ್ಞಾನ. ಉದ್ದೇಶ ಸಾಧನೆಗಾಗಿ ಅನುಸರಿಸಬೇಕಾದ ಮಾರ್ಗವನ್ನು 'ನೀತಿ' ಎನ್ನುವುದೂ ಉಂಟು. ರಾಜಕಾರಣದ ವಿವಿಧ ಉದ್ದೇಶಗಳನ್ನು ಸಾಧಿಸಲು ಅನುಕೂಲವಾದ ಮಾರ್ಗಗಳನ್ನೂ, ತಂತ್ರಗಳನ್ನೂ ಉಪದೇಶಿಸುವ ಕಥೆಗಳ ಗುಚ್ಛವನ್ನು ''ಪಂಚತಂತ್ರ ನೀತಿಕಥೆಗಳು'' ಎನ್ನಲಾಗಿದೆ. ಹೀಗಾಗಿ ಭೌತಜಗತ್ತಿನ ನಿಯಮ ನೀತಿಗಳ ಸ್ಫುಟವಾದ ತಿಳಿವಳಿಕೆಯು ಉತ್ತಮ ಬದುಕಿನ ಒಂದು ಅನಿವಾರ್ಯ ಅಗತ್ಯವಾಗುತ್ತದೆ.

ಈಗ ಈ ಬರವಣಿಗೆಯ ಆರಂಭದ ಮಾತುಗಳಿಗೆ ಮತ್ತೆ ಬರೋಣ; ಉತ್ತಮ ಜೀವನವು ಜ್ಞಾನದ ಮಾರ್ಗದರ್ಶನ ಪಡೆದ ಪ್ರೀತಿಯಿಂದ ಕೂಡಿರಬೇಕು ಎನ್ನಲಾಗಿದೆ. ಹೀಗೆ ಹೇಳುವುದಕ್ಕೆ ಪ್ರೇರಣೆ ಸಾಧ್ಯವಾದಷ್ಟುಮಟ್ಟಿಗೆ ಅಂತಹ ಬದುಕು ಸಾಗಿಸಬೇಕೆಂಬ ಮತ್ತು ಸಹಜೀವಿಗಳೂ ಇಂತಹ ಬದುಕಿನಲ್ಲಿ ಭಾಗಿಗಳಾಗಬೇಕೆಂಬ ಅಪೇಕ್ಷೆ. ಈ ಅಭಿಪ್ರಾಯದ ತರ್ಕಬದ್ಧತೆ ಏನೆಂದರೆ, ಈ ರೀತಿ ಬದುಕುವ ಸಮುದಾಯಗಳಲ್ಲಿ ಜನರು, ಪ್ರೀತಿ ಮತ್ತು ಜ್ಞಾನಗಳಿಲ್ಲದ ಸಮುದಾಯದ ಜನರಿಗಿಂತ ಹೆಚ್ಚು ನೆಮ್ಮದಿಯಾಗಿರುತ್ತಾರೆಂಬುದು. ಅದರಾಚೆಗೆ ಇಂಥ ಬದುಕು 'ಪುಣ್ಯಕಾರಕ'ವೆಂದಾಗಲಿ, ಇನ್ನೊಂದು ಬಗೆಯದು 'ಪಾಪಪೂರಿತ'ವೆಂದಾಗಲಿ ಹೇಳುವುದು ಇಲ್ಲಿನ ಉದ್ದೇಶವಲ್ಲ. ಏಕೆಂದರೆ ಇಂಥ 'ಪಾಪ', 'ಪುಣ್ಯ'ಗಳ ಕಲ್ಪನೆ ಭೌತವಾದಿ ಚಿಂತನೆಗೆ ಅತೀತವಾದುದು.

**ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ,
ಬೆಂಗಳೂರು-೫೬೦ ೦೭೦

# ಕಳ್ಳರು, ಸುಳ್ಳರೆಂದು ಯಲ್ಲಾಪುರದ ಕೊರಚರ ಹಟ್ಟಿಯನ್ನು ಒಕ್ಕಲೆಬ್ಬಿಸಿದವರಾರು ?

**ಸು**ಡುವ ಮಟಮಟ ಮಧ್ಯಾಹ್ನದ ಬಿಸಿಲು. ಕೊರಚರನ್ನು ಕುರಿತು ಹೊಸ ಅಲೆಯ ಜನಾಂಗೀಯ ಸಂಶೋಧನೆಗಾಗಿ ಬಂದಿದ್ದ ಎಚ್. ಆರ್. ಸ್ವಾಮಿ ಮತ್ತವರ ಸಂಗಡಿಗ ನೊಂದಿಗೆ ಯಲ್ಲಾಪುರದ (!) ಕೊರಚರಹಟ್ಟಿಗೆ ಕೆಮರಾ ಕಿಟ್ಟು ಹೊತ್ತು ನಡೆದೆ.

ಮೂರು ದಶಕಗಳಿಂದ ನೋಡಿದ್ದ ಹಟ್ಟಿ ಮಟಮಾಯ ಆಗುವ ಹಂತ ಕಂಡಾಗ 'ಏನು ಚಿತ್ರಿಸಲಿ ?' ಅನ್ನಿಸಿತು. ಹಟ್ಟಿ ಪಕ್ಕದ ಗುಡ್ಡ ಹತ್ತಿ ಪಕ್ಷಿನೋಟ ಸೆರೆಹಿಡಿಯುವ ಮೂರನೆಯ ಕಣ್ಣಲ್ಲಿ ಕಂಡದ್ದು ಮಾತ್ರ ಬೆರಳೆಣಿಕೆಯ ವಾಸಸ್ಥಾನಗಳು.

ಶಾಪ ಹಾಕುತ್ತಾ ಕಲ್ಲುಮುಳ್ಳಲ್ಲಿದ್ದು ಬಂದು ನೋಡಿದರೆ 'ನನ್ನ ಅವಸ್ಥೆ ನೋಡಿ' ಯೆಂಬುವ ಭಾವಣೆ ಕಳೆದುಹೋದ ಮನೆ !

ಉಳಿದಿದ್ದ ಭಾಗದ ನೆರಳಿಗೆ ಜೊತೆ ಬಂದವರು ಮೊರೆ ಹೋದರು. ನನ್ನ ಕತೆ ಯಾರಿಗೆ ಹೇಳಲಿ ? ಹೇಗೆ- ಯಾತಕ್ಕಾಗಿ ಹೇಳಬೇಕು ?

ಹಾಡಿ, ಹಟ್ಟಿ, ಬುಡಕಟ್ಟುಗಳು...ಇವುಗಳಿಗಾಗಿ ಸರ್ಕಾರದ ಶ್ರೇಯೋಭಿವೃದ್ಧಿ ಯೋಜನೆಗಳಿಗೆಲ್ಲ... ಅರ್ಥವಿದೆಯೋ ?

ಕೆರೆಯನ್ನು ಸುತ್ತುವರೆದು ಯಲ್ಲಾಪುರಕ್ಕೆ ಬಂದಾಗ ಕೊರಚರ ದಂಡು ಸ್ವಾಗತಿಸಿತು. ಬಹಳಷ್ಟು ಪರಿಚಿತ ಮುಖಗಳು. 'ನಿಮ್ಮ ಮಾತೃಭಾಷೆಯಲ್ಲಿಯೇ ಸಂದರ್ಶನ ನಡೆಯಲಿ' – ಸ್ವಾಮಿಯವರಿಗೆ ಹಿತನುಡಿದೆ. ಅವರು ಟೇಪ್‌ರೆಕಾರ್ಡರ್ ಆನ್ ಮಾಡಿದರು. ಮಂದಸ್ಮಿತರಾಗಿ ಜಾತಿಬಾಂಧವರ ಅಳಲನ್ನು ಆಲಿಸಲಾರಂಭಿಸಿದರು.

೧೮ರ ಪ್ರಾಯದಲ್ಲಿ ತಿಮ್ಮನ ಜತೆ ಸೀರೆಉಟುಗಿ ಮಾಡಿಕೊಂಡು ಎರಡನೆಯ ಹೆಂಡತಿಯಾದ, ಈಗಿನ ೮೦ರ ಆಸುಪಾಸಿನ ದುರ್ಗಮ್ಮಜ್ಜ: 'ಅವ್ರು ದೇಶದ ಮೇಲೆ ಕನ್ನಕ್ಕ ಹೋಗ್ತಿದ್ರು. ನಾನು ಸುಳ್ಳು ಹೇಳಿದ್ರ ಪುಣ್ಯ ಬಂದೀತಾ ?...' ಬಿಚ್ಚುತ್ತಾ ಬಿಚ್ಚುತ್ತಾ ನುಡಿದಳು (ಈಕೆ ಮಕ್ಕಳಿಲ್ಲದ ಮಹಾತಾಯಿ). ಅವಳ ಬಾಯಿಯಿಂದ ಡೈರೆಕ್ಟ್ ಅನ್ನುವ ಆಂಗ್ಲಪದ ಬಂದಾಗ ವಿದ್ಯಾವಂತೆಯೆಂಬುದು ಬಯಲಾಯಿತು. ಕಳ್ಳನಸುಳ್ಳನ ಹೆಂಡತಿ ಅಂಬುದು ನಂಬಲಿಕ್ಕಾದೀತೆ ? ಇವರನ್ನು ತಪ್ಪು ದಾರಿಗೆ ದಬ್ಬಿದವರೇ ಮಹಾಕಳ್ಳರೆಂದುಕೊಳ್ಳುವ ಹೊತ್ತಿಗೆ ನನ್ನ ಕೆಮರಾ ಕೆಲಸ ಮಾಡಿತು. ನೀವೆ ನೋಡಿ ಆ ಚಿತ್ರವನ್ನು. ಚಿತ್ರ ಕತೆ ಹೇಳುತ್ತದೆ. ಚಿನ್ನಕ್ಕೆ ಕನ್ನ ಹಾಕುವವರಲ್ಲಿ ಗುಂಜಿ ಚಿನ್ನವನ್ನು ಪೊಲೀಸರು...ನಾವೆಲ್ಲ ಬಿಟ್ಟಿದ್ದೇವಾ ? ಅಪರಂಜಿ ಉತ್ತರ ಕೊಡಿ. ಈ ಅಜ್ಜಿಯ ಗಂಡನಿಗೆ ಸ್ವಾತಂತ್ರ್ಯ ಬಂದ ಸವಿನೆನಪಿಗಾಗಿ ಸರಳುಗಳಿಂದ ಮುಕ್ತಗೊಳಿಸಿದ್ದರು. ಅವನೀಗ ಇಲ್ಲ. ನನ್ನ ಮಹಾನ್ ಭಾರತ ನೋಡಿ ಹೇಸುತ್ತೇನೆ.

**ಮಧು ಬಗರೆ**



ದುರ್ಗಮ್ಮ (ತಿಮ್ಮಪ್ಪನ ಎರಡನೇ ಮಡದಿ)



ಒಕ್ಕಲೆದ್ದ ಹಟ್ಟಿಯ ಜನ ಯಲ್ಲಾಪುರದಲ್ಲಿ ಝಂಡಾ ಊರಿದ್ದಾರೆ

ಅಣ್ಣತಮ್ಮಂದಿರಾದ ಲೋಕಲ್ ರಾಮ ಮತ್ತು ತಿಮ್ಮ ಯಲ್ಲಾಪುರದ ಕೊರಚರ ಹಟ್ಟಿಯ ಹಿರೋಗಳು. ರಾಮನ ದಯಾಗುಣದ ಬಗ್ಗೆ ಎಣೆಯಿಲ್ಲದಷ್ಟು ದಂತಕತೆಗಳು ಜೀವಂತ ಇವೆ. ಅವನ ಸಾಹಸದ ಯಶೋಗಾಥೆ ಮತ್ತೊಂದು ಬ್ರಹ್ಮಾಂಡ. ಚರಿತ್ರೆಯ ವೀರರಲ್ಲಿ ಇವರ ಹೆಸರಿಲ್ಲದ್ದು ತರವಲ್ಲ. ಈತನ ತಮ್ಮನಾದ ತಿಮ್ಮನ ಬಳಗದ ಚಿತ್ರ ತೆಗೆಯಲು ''ರೋಖ್ ಬುಲಾವ್'' ಬಂದಾಗ ನಾನು ೨೦ರ ಹೊಸ್ತಲಲ್ಲಿದ್ದೆ. ಪ್ರಪಂಚದ ಅತೀಕ್ರೂರಿಗಳೆಂದರೆ ಕೊರಚರೆಂದುಕೊಂಡು, ನಿಕ್ಕರ್ ಕಾಲದಲ್ಲಿ ತೊಯ್ದ ನೆನಪಿತ್ತು. ದಡಿಯನಾದ ತಮ್ಮನಿಗೆ ಬಾಕ್ಸ್ ಕೆಮರಾ ಜತೆ ಅಟ್ಟಿದ್ದೆ. ಸನ್ಮಿತ್ರರಾಗಿದ್ದ ಡಿವೈಎಸ್ಪಿ ಎಮ್. ಕೆ. ನಾಗರಾಜ್ ಅವರು ದಾಖಲಾತಿ ಮಾಡಲೆಂದು ಆ ಜನರನ್ನೆಲ್ಲ ಸ್ಟೇಷನ್‌ನಲ್ಲಿ ನನ್ನ ಮೂರನೆಯ ಕಣ್ಣೆದುರಿಗೆ ಸ್ಲೇಟ್ ಕೊಟ್ಟಾಗಲೂ ಇವರ್‍ಯಾರ ಕುರಿತು ನನ್ನಲ್ಲಿ ಸದಭಿಪ್ರಾಯವಿರಲಿಲ್ಲ. ಆಫೀಸಿನ ಟೆಬಲ್ಲೇರಿ ತಿಮ್ಮನ ಪರಿವಾರ ಚಿತ್ರದಲ್ಲಿ ಕೂತಿತ್ತು !

ಬರಹಗಾರನಾಗದೇ ಗತ್ಯಂತರವಿಲ್ಲದ್ದರಿಂದ ಜನಾಂಗೀಯ ಅವಲೋಕನದ ವೈಜ್ಞಾನಿಕ ಗೀಳನ್ನು ಸ್ಥಿತ್ಯಂತರವಾಗಿ ಅಂಟಿಸಿಕೊಂಡೆ. ವೃತ್ತಿನಿರತನಾಗಿ ಎಗ್ಗಿಲ್ಲದೇ ಸುತ್ತಮುತ್ತಲಿನ ಕೊರಚರ ಹಟ್ಟಿಗಳಲ್ಲಿ ಮಣಭಾರದ ಕೆಮರಾ ಕಿಟ್ಟು ಹೊತ್ತು ನುಗ್ಗಲಾರಂಭಿಸಿದೆ. ಅವರಿಗೆಲ್ಲ ನಾನು ನಿರುಪದ್ರವಿ. ಅವರ ಒಡಲಾಳದ ನೋವು ಬಸಿದು ನನ್ನ ಮನ ಕರಗಿತು. ಈಗಲೂ ಅವರಿಗಾಗಿ ಏನೂ ಮಾಡಲಾಗುತ್ತಿಲ್ಲ. ನಾಚಿಕೆಗೇಡಿನ ಪ್ರಹಸನ.

...ನೋಡಿದೆ. ಯಲ್ಲಾಪುರದ ರಸ್ತೆಪಕ್ಕದ ಗುಡಿಸಲುಗಳಲ್ಲಿ ಧೈರ್ಯಶಾಲಿ ನಿಷ್ಕಳಂಕ ಜನಾಂಗ. ಗುಬ್ಬಿಯಂತೆ ಮುದರಿದ್ದರು. ಈ ಗುಡಿಸಲುಗಳ ಮೊತ್ತಕ್ಕೆ 'ರೋಡ್ ಕ್ಯಾಂಪ್' (ಬೀದಿಗೆ ಬಿದ್ದವರು) ಅನ್ನುತ್ತಾರೆ. ಕುತೂಹಲದ ಕಣ್ಣುಗಳಲ್ಲಿ ಮಕ್ಕಳು ಮರಿ ಶಾಲೆ ಬಿಟ್ಟ ಹುಡುಗರಂತೆ ಕೆಮರಾ ಲೆನ್ಸ್ ಎದುರು ಕುಪ್ಪಳಿಸಿದರು. ಕಣ್ಣಳತೆಯಲ್ಲಿ ಚರ್ಮ ಸುಲಿದು ಮರಕ್ಕೆ ನೇತುಹಾಕಿದ ಕುರಿಯ ಪಕ್ಕ ನಾಗರಾಜ್ ಕಂಡ ಸ್ವಾಮಿ ಸಂಗಡಿಗನಿಗೆ ಬುಲಾವ್ ಕೊಟ್ಟೆ. ಕ್ಲಿಕ್ ಅನ್ನುವ ಮುನ್ನ ಬೋಕನ ಮಗ ದಳಪತಿ, ಲಕ್ಕಪ್ಪ ಮತ್ತಿತರರು ಇಣುಕಿದಾಗ ಸಮಾಧಾನ ಆಯಿತು.

ಹಟ್ಟಿಯ ಮಾಜಿ ಮೆಂಬರ್ ಶತಾಯುಷಿ ಮೂಕಜ್ಜನ ಜತೆ ಆತನ ಮಡದಿ ಕೂರಿಸಿ ಸ್ವಾಮಿ ಪೋಸ್ ಕೊಟ್ಟರು. ಶತಾಯು ಕೂರಲಾಗದಷ್ಟು ಹಣ್ಣಾಗಿದ್ದ. ಹಿಂಗದ ಸ್ವಾಭಿಮಾನಿ ಯಾದ ಸ್ವಾಮಿಗಾಗಿ ಕೆಮರಾ ಬಿಟ್ಟೂಬಿಡದೇ ಬಿಟ್ಟುಬಿಟ್ಟು ಓಡಿತು. ದೈವದ ಯಜಮಾನ ನಾದ ನಂದ್ಯಪಜ್ಜನಿಗೆ ಕಿವಿ ಮಸಕು. ನೆರೆದವರಿಗೆಲ್ಲ ಅರಿವು ಮರೆವು ಇಲ್ಲದ ಇವರ ಹಾಸ್ಯ ತಮಾಷೆಯ ಹೊಳೆ ಹರಿಸಿತು. ದೃಶ್ಯ ಮಾಧ್ಯಮದಲ್ಲಿ ಈ ಸೊಗಡು ಜೀವ ತಾಳೀತೆ ?

ಕೊರಚರ ಯಜಮಾನ ಅಧಿಕಾರ ಚಲಾಯಿಸಿದ: 'ನಮ್ಮೆಲ್ಲರ ಗ್ರೂಪ್ ಫೋಟೋ ಆಗೇಬಿಡಲಿ'. ಅಲ್ಲಿದ್ದವರ ಚಿತ್ರ ನನ್ನ ಬತ್ತಳಿಕೆ ಸೇರಿತು. ಆದರೆ ತೊಗಲು ಕೆಡಿಸುವುದು ಖಂಡಿತವಾಗಿ ನಮಗೆಲ್ಲ ಗೊತ್ತಿಲ್ಲ!?

ಮುದಗಲ್ಲಿನಲ್ಲಿ ಕೆಲವು ಕೊರಚರು ಕ್ರಿಶ್ಚಿಯನ್‌ರಾಗಿ ಮತಾಂತರಗೊಂಡಿರುವುದನ್ನು ಕೇಳಿದರೂ, ಮತಪ್ರಸಾರಕರ ಧೋರಣೆಗಳ ಬಗ್ಗೆ ನನಗಿರುವ ತಾಕಲಾಟ ಈ ಅಮಾಯಕರಿಗೆ ಅರ್ಥವಾಗದು. ಒಬ್ಬ ಹೇಳಿದ: 'ಅವನೊಬ್ಬ ಬಹಳ ದುಡಿದು ಕಳ್ಳ. ಎಲ್ಲವನ್ನೂ ಪೊಲೀಸರಿಗೆ-ನ್ಯಾಯವಾದಿ, ನ್ಯಾಯಾಧೀಶರಿಗೆಲ್ಲ ಇಟ್ಟ. ಅವನಲ್ಲಿ ಕಡು ಬಡತನ ಸ್ವರ್ಗದ ಮನೆ ಮಾಡಿಕೊಂಡಿತ್ತು. ''ಇವನೇ ಜೀರಾ'' ಅಂದರು. ಬದುಕಿದ್ದ ಹೀರೋ ಜೀರೋ ಆದ. ಅಪ್ರತಿಮ ಕಳ್ಳನೆಂದು ಹರಪನಹಳ್ಳಿಯ ಠಾಣೆ ಎದುರು ಇವನನ್ನು ಚಿತ್ರಿಸಿದ್ದೆ. ಬಳ್ಳಾರಿ ಜೈಲಿನಲ್ಲಿ ನಲ್ವತ್ತರ ಪ್ರಾಯದಲ್ಲಿ ಇತ್ತೀಚಿಗೆ ಸತ್ತ. ಮುಖಕ್ಕೆ ರಾಚಿತು. ಆತನ ಹದಿವಯಸ್ಸಿನ ಎರಡನೆಯ ಹೆಂಡತಿ ಆ ಫೋಟೋಗಾಗಿ ಬಂದಾಗ 'ಪರಿಹಾರ ಸಿಕ್ಕಿಲ್ಲ' ಅಂದಳು. 'ಯಾರಲ್ಲಿ?' ಅಂದೆ. 'ಇಲ್ಲದ ದೇವರಲ್ಲಿ'ಯೆಂದು ಉತ್ತರಿಸಿದಾಗ ಆಕಾಶ ನೋಡಿದೆ. ಅಲ್ಲಿ ಎಲ್ಲ ಅನರ್ಥಗಳೇ ತುಂಬಿ ತುಳುಕಿದ್ದು ಸರಿಯಲ್ಲ.



*ರೋಡ್ ಕ್ಯಾಂಪ್. ಒಟ್ಟು ೫೦ ಗುಡಿಸಲುಗಳು*

ನಾನು ಕಂಡಂತೆ ಕೊರಚರೆ ತುಂಬಾ ಬುದ್ಧಿವಂತ ಸಮುದಾಯ (ಜನಾಂಗ). ಅತೀ ಬುದ್ಧಿವಂತನಿಗೂ ಪಾಠ ಕಲಿಸಬಲ್ಲರು. ಆದರೇಕೆ ಅವರಿಗೆ ಈಗ ನಿರ್ಗತಿಕ ತ್ರಿಶಂಕು ಪಾಡು ? ಕಣ್ಣುಕಟ್ಟು ವಿದ್ಯೆಯ ಕುರಿತು ಕೇಳಿದ್ದೇವೆ. ಇವರೋ ಮೋಡಿ ಆಟದ ಪ್ರವೀಣರು. ಆ ಕಲೆಗೆ ಎಲ್ಲಿ ಪ್ರೋತ್ಸಾಹವಿದೆ ? ಯುಗಾಂತರ ಅನ್ನುವಷ್ಟು ಕಾಲದ ಹಿಂದೆ ನೋಡಿದ್ದೆ.

ಬೋಕಪ್ಪನ ಮಗನಾದ ದಳಪತಿ ಲಕ್ಕಪ್ಪ ವಿದ್ಯಾವಂತ ಸಂಗಡಿಗರೊಂದಿಗೆ ಊರವರು ಏರ್ಪಡಿಸಿದ್ದ ಜಿಲ್ಲಾಮಟ್ಟದ ಕಬಡ್ಡಿ ಪಂದ್ಯಾವಳಿ ಚಂದಾ ಹಣಕ್ಕಾಗಿ ನನ್ನ ಸ್ಟುಡಿಯೋಕ್ಕೆ ಮೊನ್ನೆ ಬಂದು ಖಾತೆ ಬಿಚ್ಚಿದ: ''ಪೊಲೀಸರ ದೌರ್ಜನ್ಯ ಅಸದಳ. ಜೈಲು ಅನುಭವ ಬಲು ಕೆಟ್ಟದ್ದು. ನಮಗೀಗ ಬೇಕಿಲ್ಲ. ಸರಕಾರದ ಲವಲೇಶ ಸೌಲಭ್ಯ ನಮಗಿಲ್ಲ. ಮನೆ ಮಠ ಇಲ್ಲದೇ ಕಡುಕಷ್ಟಕ್ಕೆ ಸಿಕ್ಕಿದ್ದೇವೆ. ಯಾರಿಂದಲೋ ಎಲ್ಲಿಯೋ ಆದ ದುರ್ಘಟನೆಗಳಿಗೆ ನಮ್ಮನ್ನು ಸುಲಿದು, ಕಳ್ಳರು ಸುಳ್ಳರೆಂದು ಯಮಹಿಂಸೆ ಕೊಡುತ್ತಾರೆ. ಭಾಗ್ಯ ಜ್ಯೋತಿಯಿಲ್ಲ. ವೋಟಂತೂ ನಾವು ಕೊಡಬೇಕು. ನಮ್ಮದು ರಾಜಕೀಯವಾಗಿ ಮೀಸಲು ಕ್ಷೇತ್ರವಾದ್ದರಿಂದ ಹೊಲೆಯ, ಮಾದಿಗ, ಲಂಬಾಣಿ-ಬೇಡರಿಗೆ ಸಿಕ್ಕ ಯಾವ ಸೌಲಭ್ಯದ ಕನಸು ಕಾಣುವಂತಿಲ್ಲ. ಒತ್ತುವರಿ (ಪರಂಪೋ) ಜಾಗದ ಹೊಲಗಳಿವೆ. ಅರಣ್ಯ ಇಲಾಖೆಯವರು ಶನಿಯ ಅಪ್ಪನಾಗಿ ಕಾಡುತ್ತಾರೆ... ಹಾಗಾಗಿ ಹಟ್ಟಿಯಿಂದ ಗುಳೆ ಕಿತ್ತು ಇಲ್ಲಿದ್ದೇವೆ..''

ಸ್ವಾಮಿಯವರಿಗಾಗಿ ಅಲ್ಲೇ ಹಗ್ಗ ಹೊಸೆಯಲೆಂದು ನೇತು ಹಾಕಿದ್ದ ನಾರಿನ ಪೆಂಡಿಯ ಚಿತ್ರ ಒಂದು ತೆಗೆದೆ. ನಾನೂ ಕಸುಬಿಯಾದ್ದರಿಂದ ಅವರ ಕಸುಬಿನ ಸಣಬಿಗೆ ಮಾರುಹೋದೆ. ಬಿಡಲಾರದ ಮನಸ್ಸಿನಿಂದ ಬಾಯ್ದೆರೆದ ಜನಾಂಗ ನಮ್ಮನ್ನು ಬಿಟ್ಟುಕೊಟ್ಟಿತು. 'ಬಾರೋ ನಮ್ಮ ದೇವರು' ಅನ್ನುವ ತರ.

ಹರಪನಹಳ್ಳಿಯಲ್ಲಿ ಊಟಮಾಡಿದಾಗ ಮಧ್ಯಾನ್ಹ ಮೂರಾಗಿತ್ತು. ಮಾಚಿಹಳ್ಳಿ ಕೊರಚರ ಹಟ್ಟಿಯತ್ತ ನಮ್ಮ ಕಾಲು ಸಾಗಿದವು. ಆಮೇಲೆ ಹನ್ನೆರಡು ಕಿಲೋ ಮೀಟರ್ ಅಂತರದ ನೀಲಗುಂದ ಅಡ್ಡ ರಸ್ತೆಯಲ್ಲಿ ಇಳಿದು ಮೂರ್ನಾಲ್ಕು ಕಿ.ಮೀ. ನಡೆದು ಗುರಿ ಮುಟ್ಟಿದಾಗ ಸಮಯದ ಕೊರತೆಯಾಗುವ ಭಯ ಕಾಡಿತು.

ಚಕಚಕನೆ ನಡೆದು ಸಾತ್‌ಪಡಿ ಅಪ್ಪಣ್ಣನ ಮನೆ ಅಂಗಳಕ್ಕೆ ಮಿತ್ರರನ್ನು ತಲುಪಿಸಿದೆ. ವಿದ್ಯಾವಂತ ಸ್ವಾಮಿಯ ಬಾಯಿಯಲ್ಲಿ ತಮ್ಮ ಭಾಷೆ ಕಂಡು ಅವರು ಆಧುನಿಕ ಪ್ಲಾಸ್ಟಿಕ್ ಚಾಪೆ ಹಾಸಿದರು. ಅದೇ ನೆಲದ ಮೇಲೆ ಸತ್ಯಮ್ಮನ ಭವ್ಯ ಪೂಜೆಯನ್ನು ಹೋದಸಲ ಕೋಣ ಕಡಿದ ಜಾತ್ರಾ ಸಮಯ ಸರೋರಾತ್ರಿಯಲ್ಲಿ ನೋಡಿ ನಿಬ್ಬೆರಗಾಗಿದ್ದೆ. ಅದು ತಾಂತ್ರಿಜಂ (ತಾಂತ್ರಿಕ ವಿದ್ಯೆ)ನ ಪರಾಕಾಷ್ಠೆ. ವೈದಿಕ ಪರಂಪರೆಯ ಮಹೋನ್ನತಿಯ ಮಿಶ್ರಣ ಪಡೆದಿತ್ತು! ಅವನ ಮನೆಮುಂದೆ ಮಾತ್ರ ಈ ಅಂಕ ನಡೆದಿತ್ತು. ಅದನ್ನು ಕುರಿತು ಅಪ್ಪಣ್ಣ ಎದೆತುಂಬಿ ವಿವರಿಸಲಾರಂಭಿಸಿದ. ರೆಕಾರ್ಡರ್ ಆನ್ ಆಯಿತು. ಸಂತೃಪ್ತಿಯಲ್ಲಿ ಸ್ವಾಮಿ ರಾಜಹಂಸನಂತೆ ತೇಲುತ್ತಿದ್ದರು.

ಮರೆತುಹೋಗಬಹುದಾದ ಪುರಾತನ ವಿಧಿಯಾಚರಣೆಯೊಂದು ಕಾಲನ ವಶವಾಗುವುದರಿಂದ ತಪ್ಪಿ ದಾಖಲಾಯಿತು. ಹತ್ತಿಪ್ಪತ್ತು ಸಾವಿರ ವರ್ಷಗಳಷ್ಟು ಮುನ್ನ ಬದುಕಿದ್ದ ಆ ಕ್ಷಣದ ಅನುಭವ ನಮಗೆಲ್ಲಾ ಆದದ್ದು ಸಣ್ಣ ಮಾತಲ್ಲ. ಕತ್ತಲು ಆವರಿಸಲಾರಂಭಿಸುವಾಗ ಅದೊಂದು ಸುಂದರ ಅರುಣೋದಯದಂತೆ ಗೋಚರಿಸಿತು.

ಪ್ಯಾಕಪ್ ಅಂದಾಗ, ಸ್ವಾಮಿ: ''ಮಧು, ಈ ಹೊತ್ತಲ್ಲಿ ಸ್ನಾನ ಮಾಡಿಸುತ್ತಿರುವ ತಾಯಿಯ ಬಿಂಬ ಬೇಕೇಬೇಕು'' ಅಂದು, ಮತ್ತೇ: ''ಅಗೋ. ಅಲ್ಲಿ ಕತ್ತಲೆ ಹಟ್ಟಿಯ ಮಿಕ್ಸಿ ಜತೆ ಹುಡುಗಿ ಇದ್ದಾಳೆ. ಅದೂ ಆಗಲಿ''... ಮಾತಿಗೆ ಬೀಗ ಜಡೆದಾಗ...

ಆದದ್ದೆಲ್ಲ ಒಳ್ಳೆಯದೇ. ಒಳ್ಳೆಯವರಿಗೆ ಬರುವುದು ಇದೊಂದೇ ತಾನೆ ?

ಮಧು ಬಗರೆ
ಮಧೂಸ್ 'ಫ್ಲಾಷ್' ಸ್ಟುಡಿಯೋಸ್, ಗೌಳೇರಪೇಟೆ, ಹರಪನಹಳ್ಳಿ-೫೮೩ ೧೩೧, ದಾವಣಗೆರೆ ಜಿಲ್ಲೆ

## ಈಗ

ಮುಂಜಾನೆಯಷ್ಟೇ
ನಕ್ಕ ಮುಖಗಳು
ಈಗ ಗಂಭೀರವಾಗಿವೆ.

ಆಡಿದ್ದ
ಉಲ್ಲಾಸದ ಮೈಕೈಗಳು
ಈಗ ಬಿಗಿದುಕೊಂಡಿವೆ.

ಮನಸು
ಇಂಕ್ರಿಮೆಂಟ್, ಬಡ್ತಿ
ಪದವಿ, ಪ್ರಶಸ್ತಿ -



ಗಳ ಕನಸು
ಹೆಣೆಯುತ್ತಿದೆ.

ಕ್ಷಣಕೊಮ್ಮೆ
ಬದಲಾಗೋ ಚಹರೆಗಳ ನಡುವೆ
ಎಂದಾದರೊಂದು ಕ್ಷಣ
ನಿಜದ ಮುಖ ಕಂಡೀತೆಂದು
ನನ್ನ ಕವಿತೆ
ಕಾಯುತ್ತಿದೆ.

[redacted] ಸಂತೋಷ ಚೊಕ್ಕಾಡಿ
ಕನ್ನಡ ಉಪನ್ಯಾಸಕ, ಮಹಾರಾಣಿ ಸರ್ಕಾರಿ
ಪದವಿಪೂರ್ವ ಕಾಲೇಜು, ನಾರಾಯಣಶಾಸ್ತ್ರಿರಸ್ತೆ,
ಮೈಸೂರು - ೫೭೦ ೦೨೪

# ಅನಂತಮೂರ್ತಿ ಸಾಹಿತ್ಯ 'ದಿವ್ಯ'ದ ಹಿನ್ನೆಲೆಯಲ್ಲಿ

**ಕ**ನ್ನಡ 'ನವ್ಯ' ಸಾಹಿತ್ಯದ ಮುಖ್ಯ ಲೇಖಕರಲ್ಲಿ ಅನಂತಮೂರ್ತಿ ಒಬ್ಬರು. ತಮ್ಮ ಕತೆ-ಕಾದಂಬರಿಗಳಿಂದ ಬಹು ಚರ್ಚಿತರು; ಜನಪ್ರಿಯರು. ಸದ್ಯದ ಮಟ್ಟಿಗಂತೂ ಕನ್ನಡದ 'ಸ್ಟಾರ್' ಬರಹಗಾರರು. ಇನ್ನೇನು ನೊಬೆಲ್ ಬಂದೇಬಿಟ್ಟಿತು ಎನ್ನುವಷ್ಟರಲ್ಲಿ ಅದರಿಂದ ವಂಚಿತರಾದವರು. ಇರಲಿ, ಈ ಲೇಖಕರ ಇತ್ತೀಚಿನ ಕಾದಂಬರಿ 'ದಿವ್ಯ'ದ ಚರ್ಚೆಗೆ ಹಿನ್ನೆಲೆಯಾಗಿ ಅವರ ಈ ಹಿಂದಿನ ಕೃತಿಗಳ ಅವಲೋಕನವೂ ಇಲ್ಲಿದೆ.

'ನವ್ಯ'ದ ಉಳಿದ ಮುಖ್ಯರೆಂದರೆ ಲಂಕೇಶ್, ತೇಜಸ್ವಿ, ಚಿತ್ತಾಲ ಮತ್ತು ದೇಸಾಯಿ. ಲಂಕೇಶ್ ತಮ್ಮ ಸಾಮಾಜಿಕ ಬದ್ಧತೆ, ನಿಷ್ಠುರತೆ, ನಿರ್ಭೀತಿ, ಪ್ರಾಮಾಣಿಕ ಅಭಿವ್ಯಕ್ತಿ, ಸಾಮಾಜಿಕ ಕಳಕಳಿ ಹಾಗೂ ಅಚ್ಚ ಕನ್ನಡದ ಪ್ರತಿಭೆಯಿಂದ ಕಳೆದ ಮೂವತ್ತು ವರ್ಷಗಳಲ್ಲಿ ಕನ್ನಡ ಸಾಹಿತ್ಯ-ಸಾಂಸ್ಕೃತಿಕ ವಲಯದಲ್ಲಿ ಪಡೆದ ಸ್ಥಾನ ಅದ್ವಿತೀಯವಾದುದು. ಶೂದ್ರ ಬದುಕಿನ ಎಲ್ಲ ಒಳತೋಟಿಗಳು, ಬಹುಸಂಖ್ಯಾತರ ಸಂಸ್ಕೃತಿ, ಅಲ್ಪಸಂಖ್ಯಾತರ ನೋವು, ಸ್ತ್ರೀ ಶೋಷಣೆಯ ಆಯಾಮ ಎಲ್ಲವೂ ಅವರ ಸಾಹಿತ್ಯದ ನೆಲೆಗಟ್ಟುಗಳಾಗಿವೆ. ಅವರ 'ಉಮಾಪತಿ', 'ದೇವೀರಿ', 'ಸುಭದ್ರೆ', 'ಬಸವರಾಜು' ಮೊದಲಾದ ಪಾತ್ರಗಳು ಕನ್ನಡ ನವ್ಯದ ಅದ್ಭುತ ಪ್ರತಿಮೆಗಳು. ತಮ್ಮ ಭಾಷೆ, ಬಂಧಗಳಿಂದ, ಸಾಚಾ ಅಭಿವ್ಯಕ್ತಿಯಿಂದ ಲಂಕೇಶ ಕನ್ನಡ ಓದುಗರು ಎಂದೂ ಮರೆಯಲಾಗದ ಒಡನಾಡಿಯಾದರು. ಹಾಗೆಯೇ ತಮ್ಮ ಪರಿಸರ ಪ್ರೇಮ, ಅನ್ವೇಷಣೆ, ಸಾಹಸ, ಒಳನೋಟಗಳಿಂದ ತೇಜಸ್ವಿ ನೀಡಿರುವ ಮಂದಣ್ಣ, ಕುಬಿ, ತಬರ ಮೊದಲಾದ ಪಾತ್ರಗಳು ಅನನ್ಯ. ರಫಿ, ಜಯಂತಿ, ಅಂಗಾಡಿ ಒಂದಲ್ಲ ಒಂದು ಕಾರಣಕ್ಕೆ ನಮ್ಮನ್ನು ಕಾಡುತ್ತಾರೆ. ಅಂತೆಯೇ ತಮ್ಮ ತೀವ್ರ 'ನಗರ' ಬದುಕಿನ ಅಭಿವ್ಯಕ್ತಿಗೆ ಹೆಸರಾದವರು ಚಿತ್ತಾಲ. ಅವರ ಸಣ್ಣಕತೆಗಳ ವಿಸ್ತಾರ, ಕಾದಂಬರಿಗಳ ವೈವಿಧ್ಯತೆ ಅಪಾರವಾದುದು. 'ನಾಗಣ್ಣ'ನಂಥ ಪಾತ್ರಗಳು ಚಿರನೂತನ. ದೇಸಾಯಿ ಮೇಲಿನ ಮೂವರಿಗೆ ತೀರಾ ಭಿನ್ನರು. ಬದುಕಿನ ವಿವಿಧ ಘಟ್ಟಗಳಲ್ಲಿ ಕಾಡುವ 'ಕಾಮ' ಮತ್ತದರ ಸಾಮಾಜಿಕ ಸಂಬಂಧಗಳ ಸಾಧ್ಯತೆಗಳನ್ನು ಅವರಷ್ಟು ತೀವ್ರವಾಗಿ ಶೋಧಿಸಿದವರು ವಿರಳ. ಅವರ ಸಣ್ಣಕತೆಗಳಂತೂ ಅಪೂರ್ವವಾದವು. ರಾಹುಲ, ಮಂದಾಕಿನಿ, ಗೌರೀಶರಂಥ ಪಾತ್ರಗಳ ಮೂಲಕ ದೇಸಾಯಿ ಪುನಃ ಪುನಃ ಓದಿಗೆ ಪಾತ್ರರಾಗಿದ್ದಾರೆ. ಆದರೆ ಇದೇ ಮಾತನ್ನು ಅನಂತಮೂರ್ತಿಯವರ ಬಗ್ಗೆ ಹೇಳುವಂತಿಲ್ಲ.

ಅನಂತಮೂರ್ತಿಯವರ ಸಣ್ಣಕತೆಗಳು ತಮ್ಮ ಬಿಗಿಯಾದ ಬಂಧ ಮತ್ತು ಮೋಹಕ ಭಾಷೆಗಳ ಮೂಲಕ ಆಕರ್ಷಿಸುತ್ತವೆ. ಓದುಗ ಬೆರಗುಗೊಳ್ಳುವಂತಿವೆ. ಆದರೆ ಒಮ್ಮೆ ಓದಿದರೆ ನಂತರ ಓದುವ, ಮನನ ಮಾಡುವ, ಆ ಮೂಲಕ ಬದುಕಿಗೆ ಬೇಕಾಗುವ ಆಯಾಮಗಳು ಇಲ್ಲಿಲ್ಲ. ಅವರ 'ಕ್ಲಿಪ್ ಜಾಯಿಂಟ್'ನಂತಹ ಕತೆಗಳಲ್ಲಿ ಸಾಕಷ್ಟು ಯಶಸ್ವಿಯಾಗುವ, ಕೇಶವನಂತಹ ಇಬ್ಬಗೆ ನೀತಿಯ ಮನಸ್ಸುಗಳನ್ನು ಅದ್ಭುತವಾಗಿ ಚಿತ್ರಿಸುವ ಮೂರ್ತಿ 'ಸೂರ್ಯನ ಕುದುರೆ'ಯ 'ಹಡೆ ವೆಂಕಟ'ನಂಥ ಆದರ್ಶ ಪಾತ್ರಗಳನ್ನು ನೀಡಿದಾಗ ಸೋತು ನಿಲ್ಲುತ್ತಾರೆ. ಆ ಕಾರಣಕ್ಕಾಗಿಯೇ ವೆಂಕಟ, ಪ್ರಾಣೇಶಾಚಾರಿ ಮೊದಲಾದ




ಪಾತ್ರಗಳು ಆಯಾಮರಹಿತವೂ, ತಪ್ಪು ಸಂದೇಶ ವಾಹಕಗಳೂ ಆಗಿ ಉಳಿಯುತ್ತವೆ. 'ಘಟಶ್ರಾದ್ಧ'ದಂಥ ಕತೆಗಳ ಹಿಂದಿನ ರೋಚಕ ಕಾಮ ಸಂಬಂಧೀ ಚಿತ್ರಗಳು ಈ ಕತೆಗಳ ಓದಿಗೆ ಕಾರಣ. ಅದು ಬಿಟ್ಟರೆ ಉಳಿದಂತೆ ಪರಿಣಾಮ, ಪ್ರಭಾವಗಳಲ್ಲಿ ಶೂನ್ಯ. ಅಲ್ಲದೆ ಇವರ ಅನೇಕ ಸಣ್ಣಕತೆಗಳ ಹಿಂದೆ ಯಶಸ್ವೀ ಪಾಶ್ಚಾತ್ಯ ಕತೆಗಳ ಹಂದರ ಇದೆ ಎಂಬುದನ್ನು ರಾಮಚಂದ್ರ ದೇವ, ಸುಮತೀಂದ್ರ ನಾಡಿಗ ಮೊದಲಾದ ವಿಮರ್ಶಕರು ತೋರಿಸಿಕೊಟ್ಟಿದ್ದಾರೆ. ಮೂರ್ತಿಯವರ ಬಹು ಚರ್ಚಿತ 'ಸಂಸ್ಕಾರ' ಕಾದಂಬರಿಗೆ ಪ್ರೇರಕ, ಪೂರಕ ವಸ್ತು ಟಿ. ಜಿ. ರಾಘವ ಅವರ 'ಶ್ರಾದ್ಧ' ಕತೆ ಎಂದು ಕ. ವೆಂ. ರಾಜಗೋಪಾಲ ಹಾಗೂ ಚಂಪಾ, ಮತ್ತು ದೇವುಡು ಅವರ 'ಅಂತರಂಗ' ಕಾದಂಬರಿಯಲ್ಲಿ ಆ ಬಗೆಯ ಮೂಲ, ವಿನ್ಯಾಸ, ಸಂಘರ್ಷ ಇದೆ ಎಂದು ಡಾ|| ಕುಮಾರಚಲ್ಯರವರು ತಮ್ಮ ಸಂಶೋಧನೆಯ ಮೂಲಕ ತಿಳಿಸಿದ್ದಾರೆ.

ಇನ್ನು, ಅನಂತಮೂರ್ತಿಯವರ ಈ ಮೊದಲ ಕಾದಂಬರಿಗಳ ಬಗ್ಗೆ ನೋಡಬಹುದು. ಅವರ ಬಹು ಜನಪ್ರಿಯ, ಬಹುಚರ್ಚಿತ 'ಸಂಸ್ಕಾರ' ಸಮಾಜ ವಿರೋಧಿ ನಿಲುವಿನದು. ಕನ್ನಡದಲ್ಲಿ ಒಂದು ಗಾದೆ ಇದೆ: 'ಸತ್ತ ಮುಕುಳಿ ಎತ್ತ ಬಿದ್ದರೇನು'. ಆದರೆ ಮೂರ್ತಿ ಇಲ್ಲಿ ಹೆಣವನ್ನು ಇಟ್ಟುಕೊಂಡು ನೀಡುವ ಸೆಂಟಿಮೆಂಟ್, ಸೃಷ್ಟಿಸುವ ಗೊಂದಲ, ಕಾಣಿಸುವ ಸಮಾಜ ಎಲ್ಲವೂ ಕಾಲ್ಪನಿಕ, ಅವಾಸ್ತವಿಕ, ಸಾಮಾಜಿಕ ಸತ್ಯಗಳಿಂದ ದೂರವಾದ್ದು. ಹಾಗಾಗಿಯೇ 'ಸಂಸ್ಕಾರ' ತನ್ನೆಲ್ಲ ಕೀರ್ತಿಯ ನಡುವೆಯೂ ನಿರಾಕರಣೆಗೆ, ಬೇಸರಕ್ಕೆ ಈಡಾಗುತ್ತದೆ.

'ಭಾರತೀಪುರ' ಹುಸಿ ಕ್ರಾಂತಿಯ, ಹುಸಿ ನೆಲೆಯ ಒಂದು ಹುಸಿ ಪ್ರಯತ್ನ. ಬರೀ ಚಿಂತನೆ ಮತ್ತು ಮಾತು ಎಂದೂ, ಎಲ್ಲಿಯೂ ಏನನ್ನೂ ಮಾಡುವುದಿಲ್ಲ. ಹಾಗಾಗಿ ಇಡೀ ಕಾದಂಬರಿ ಕೇವಲ ಒಣ ಚರ್ಚೆ. ಲೇಖಕರ ಮೇಲೆ ಬೀರಿದ ಆಯಾಕಾಲದ ಸಾಮಾಜಿಕ ಚಳುವಳಿಗಳ ಪ್ರಭಾವ ಇಲ್ಲಿ ಅಭಿವ್ಯಕ್ತಗೊಂಡಿದ್ದರೂ ಅದು ಸಾಹಿತ್ಯವಾಗಿಲ್ಲ; ಪರಿಣಾಮಕಾರಿ ಎನಿಸುವುದಿಲ್ಲ. ಇನ್ನು 'ಅವಸ್ಥೆ' ಕಾದಂಬರಿ ಸಮಾಜವಾದಿ ಚಳುವಳಿಯ ಚಿತ್ರಣವಾದರೂ, ಕೃಷ್ಣಪ್ಪ ಸಮಕಾಲೀನ ವ್ಯಕ್ತಿಯೊಬ್ಬರ ನಕಲಾದರೂ ಎಲ್ಲೂ 'ಅಪೀಲ್' ಆಗುವುದಿಲ್ಲ. ಬದಲು ಗೌರಿ, ಕೃಷ್ಣಪ್ಪನ ಕಾಮ ಸಂಬಂಧದ ಹಸಿ ಬಿಸಿ ಚಿತ್ರಣಗಳು ಪಡ್ಡೆ ಓದುಗನಿಗೆ ಭಾರೀ ಖುಷಿ ಕೊಡುತ್ತವೆ. ಇಲ್ಲೆಲ್ಲ ಕನ್ನಡ ಸಮಾಜ, ಕನ್ನಡ ಸಂಸ್ಕೃತಿಯ ವಾಸ್ತವ ಚಿತ್ರಣ ಕಂಡುಬರುವುದೇ ಇಲ್ಲ.

ಇನ್ನು 'ಭವ' ಹುಟ್ಟಿನ ಮೂಲಕ ಪ್ರಶ್ನೆ ಎತ್ತುವ ಕಾದಂಬರಿ. ಇದೊಂದು ಸಿನಿಮಾದಂತಿದೆ. ಈ ಬಗ್ಗೆ ಪ್ರತ್ಯೇಕ ವಿಮರ್ಶೆಯನ್ನು ಈಗಾಗಲೇ ಬರೆದಿರುವ ಕಾರಣ ಇಲ್ಲಿ ಹೆಚ್ಚು ಚರ್ಚಿಸುವುದಿಲ್ಲ. ಕನ್ನಡದ 'ಫ್ಲಾಪ್' ಕಾದಂಬರಿಗಳಲ್ಲಿ ಇದೂ ಒಂದು. ಇಲ್ಲಿನ ದಿನಕರ, ಅವನ ಅಯ್ಯಪ್ಪ ಸ್ತೋತ್ರ, ಬಂದು ಹೋಗುವ ದೊಡ್ಡ ದೊಡ್ಡ ನಗರಗಳು, ಊಟ, ಮಾತು ಯಾವುದೂ ಈ ಕಾದಂಬರಿಗೆ ಒಂದು ನೆಲೆ, ಗಟ್ಟಿತನ ಒದಗಿಸಿಲ್ಲ.

ಇಷ್ಟಾದ ಮೇಲೆ ಅನಂತಮೂರ್ತಿಯವರಿಗೆ ಜ್ಞಾನಪೀಠ ಪ್ರಶಸ್ತಿ ಬಂತು. ನಂತರ ಪ್ರಕಟವಾದ್ದು 'ದಿವ್ಯ' ಕಾದಂಬರಿ. ಅದರ ವಿಸ್ತೃತ ಚರ್ಚೆ ಇಲ್ಲಿದೆ. ಇದು ಬಿಡುಗಡೆಯಾದ ಸಂದರ್ಭದಲ್ಲಿ 'ಈ ಕೃತಿ ಜಾಗತೀಕರಣ ಪ್ರಕ್ರಿಯೆಯನ್ನು ಸಂವೇದಿಸುತ್ತದೆ' ಎಂಬ ಪಿಸುಮಾತು ಅಲ್ಲಲ್ಲಿ ಕೇಳಿಬಂತು. ಹಾಗಾಗಿಯೇ ಕನ್ನಡದ ಬಹುತೇಕ ಓದುಗರು ಕುತೂಹಲ ಆಸಕ್ತಿಗಳಿಂದ ಇದನ್ನು ಗಮನಿಸುವಂತೆಯೂ ಆಯ್ತು. ಈ ಕಾದಂಬರಿ ಸದ್ಯದ ಬದುಕನ್ನು ಕುರಿತದ್ದು; ಆದರೆ ಸಮಕಾಲೀನ ಬದುಕನ್ನಲ್ಲ. ಸ್ವಲ್ಪದರಲ್ಲಿ ಅದರ ಕಥೆ ಹೀಗಿದೆ: ಸಾವಿತ್ರಿ ಬೆಳೆಸುವ ಹೆಣ್ಣು ಮಕ್ಕಳು; ಗೌರಿಯ ಅಲೌಕಿಕ ವ್ಯಕ್ತಿತ್ವ, ಕೇಶವನ 'ಹಡೆ'ತನ ಅಥವ ಹಡಬೆತನ, ಓದಿದವನಾದ ಘನಶಾಮ, ಕೀಲುಗೊಂಬೆಯಂತಹ ವಿನೋದಿನಿ, ಕ್ರಾಂತಿಕಾರಿ ವಿಮಲ, ಲೌಕಿಕದ ಮಂಜಯ್ಯ ಹೀಗೆ ಇವರ ಬದುಕಿನ ಕೆಲ ಘಟನೆಗಳನ್ನು ಒಳಗೊಂಡಿದೆ. ಹಾಗೆ ನೋಡಿದರೆ ಇದು ಕೇವಲ 'ಗೌರಿ ಕಲ್ಯಾಣ'. ಇಡೀ ಕಾದಂಬರಿಯಲ್ಲಿ ಅಲೌಕಿಕ, ಅವ್ಯಕ್ತ ಪಾತ್ರವಾಗಿ ಮೂಡಿಬಂದ ಗೌರಿಯಂಥ ಪಾತ್ರ ಇದ್ದಕ್ಕಿದ್ದಂತೆ ಘನಶ್ಯಾಮನಂಥ ಜಡ ಪಾತ್ರದ ಕೈಹಿಡಿಯುವುದು ಬೆರಗು!

ಕಾದಂಬರಿ 'ಬಂಧ'ಕ್ಕೆ ಲೇಖಕರು ಪ್ರಯತ್ನಿಸಿದ್ದರೂ

**ಡಾ|| ಎಸ್. ಪ್ರಸಾದಸ್ವಾಮಿ**

ಕೂಡ, ಹೊಂದಿಕೊಳ್ಳಲು ಹೆಣಗಿದಂತೆ ಕಂಡರೂ ಕೂಡ ಮೊದಲ ಭಾಗ ಪೂರ್ತಿ 'ಟಿಪ್ಪಣಿ'ಗಳ ಜೋಡಣೆ ಆಗಿದೆ. ಈ ಭಾಗಗಳಲ್ಲಿ ಸಂಭವಿಸುವ ಭಾವುಕತೆ, ರಮ್ಯತೆ, ಶೃಂಗಾರ, ಸೌಂದರ್ಯ, ನಿಸರ್ಗ, ತಮಾಷೆ, ಸಾಹಿತ್ಯಿಕ ಚರ್ಚೆ, ಕಾಮದ ಚಿತ್ರಣ ಎಲ್ಲವೂ ಬಂದು ಹೋಗುವ ಘಟನೆಗಳಾಗಿವೆಯೇ ಹೊರತು ಕಾದಂಬರಿಯ ಸಾವಯವ ಸಂವಿಧಾನವನ್ನು ರೂಪಿಸಲು ಇಲ್ಲವೇ ಅಂಥ ಸಂವಿಧಾನವೊಂದಕ್ಕೆ ಪೂರಕವಾಗಿರಲು ವಿಫಲವಾಗಿವೆ. ಹಾಗೆ ನೋಡಿದರೆ ಇಲ್ಲಿನ ಬರವಣಿಗೆ ಮುಂದೆ ಎಂದೋ ಈ ಕೃತಿ ರಾಷ್ಟ್ರೀಯ ದೂರದರ್ಶನದಲ್ಲಿ 'ಧಾರಾವಾಹಿ'ಯಾಗಲು ಇಂದೇ ಹೊರಬಂದಂತೆ ಭಾಸವಾಗುತ್ತದೆ. ಹಾಗಾಗಿಯೇ ವಿನೋದಿನಿಯ ಪಾತ್ರ ಉದಯ ಟಿ.ವಿ.ಯ ಪ್ರಮೋದಿನಿಯನ್ನು ನೆನಪಿಸುತ್ತದೆ.

ಕಾದಂಬರಿಯ 'ನರೇಶನ್'ಗೆ ಪರಂಪರೆಯ ನೆಲೆ ಇದೆ ಎನಿಸಿದರೂ ಈಗಿನ ಓದುಗ ಈ ಬಗೆಯ ನಿರೂಪಣೆಯಿಂದ ಕಿರಿಕಿರಿಗೆ ಒಳಗಾಗುವ ಸಾಧ್ಯತೆ ಇದೆ. ಕಾದಂಬರಿಯ ಆರಂಭ ಕನ್ನಡದ ವಾಸ್ತವವಾದಿ ನೆಲೆಯ ನಿರೂಪಣೆಯನ್ನು ನೆನಪಿಸಿದಂತೆ, ಅನುಸರಿಸಿದಂತೆ ಕಂಡುಬಂದರೂ ಸೂಕ್ತ ನಿರ್ವಹಣೆ ಹಾಗೂ ವಸ್ತುವಿನ ಗಾಢತೆಯ ಕೊರತೆ ಕಂಡುಬರುತ್ತದೆ. ಹಾಗಾಗಿಯೇ ಕಾದಂಬರಿಯ ಆರಂಭ 'ತೀರಾ ಕ್ಯಾಜುಯಲ್' ಆಗಿದೆ. ಹಾಗೂ ಇಂಥ ವಾತಾವರಣ ಸಾಧ್ಯವೇ? ಅಗತ್ಯವೆ? ಎನಿಸಿಬಿಡುತ್ತದೆ. ಮತ್ತು ಕಾದಂಬರಿಯ ಈ ಘನ ಗಂಭೀರ ಆರಂಭ ಮುಂದೆ ಎಲ್ಲಿಯೂ ಪೋಷಿತವಾದಂತೆ ಕಂಡುಬರುವುದಿಲ್ಲ.

ಕಾದಂಬರಿಯ ಮುಖ್ಯ ಪಾತ್ರಗಳಲ್ಲೊಂದಾದ ಕೇಶವನ ಭೋಳೇತನ, ಅಕ್ಕುವಿನ ವೈಶಿಷ್ಟ್ಯ ವಿಶೇಷ ಎನಿಸಿದರೂ ಪೂರಕ ನೆಲೆಗಳಿಂದ ಪೋಷಿತವಾಗಿಲ್ಲ. ಗೌರಿಗಂಗೆಯರ ರಮ್ಯಲೋಕ ಸೋಜಿಗ ತರುವಷ್ಟು ಅವಾಸ್ತವ. ಗೌರಿಯ ಬೆಕ್ಕು ಏನನ್ನು ಸೂಚಿಸುತ್ತದೆ? ಇದು 'ನವ್ಯ'ದ ಬೆಕ್ಕೆ? ಮನೆಯ ಬೆಕ್ಕೆ? ವೈದಿಕ ಬೆಕ್ಕೆ? ಹಾಗೆಯೇ ಗೌರಿ ಕರಿಯ-ಕೇದಗೆ ಬನ-ಹೂ-ಇವೆಲ್ಲ ಏನನ್ನೋ ಹೇಳಲು ಪ್ರಯತ್ನಪಟ್ಟರೂ ಇಲ್ಲೆಲ್ಲಾ ಕಾಣುವ ಹಿಂಜರಿಕೆ, ನಿಗ್ರಹ, ಅಡತಡೆ ಬೇರೇನನ್ನೋ ಹೇಳುತ್ತವೆ. ಇದರ ನಡುವೆ ಬರುವ ಗಾಂಧಿ, ಸಮಕಾಲೀನ ಸಾಹಿತ್ಯದ ಚರ್ಚೆಗಳು ಒಣ ಘಟನೆಗಳಾಗಿವೆ. ಶೂದ್ರ ಪ್ರತಿಭೆಯನ್ನು ಧಿಕ್ಕರಿಸುವ, ನಿರಾಕರಿಸುವ, ಮರೆಸುವ ಹುನ್ನಾರವಾಗಿದೆ, ಈ ಚಿತ್ರಣ. ಇದೆಲ್ಲಕ್ಕೂ ಪೂರಕವಾದ್ದು ಕರಿಯನ ಸಾವು! ಅನಂತಮೂರ್ತಿಯಂಥವರ ಲೇಖನ ಸಂಸ್ಕಾರದ 'ಚಂದ್ರಿ'ಯಂಥವರನ್ನು ಅಪೂರ್ವವಾಗಿ ಬೆಳಗಿಸಿದರೆ ಇಲ್ಲಿನ 'ಕರಿಯ'ನಂತಹವರನ್ನು ಸಾಯಿಸಿಬಿಡುತ್ತದೆ. ಯಾಕೆ? ಕರಿಯ ಉಳಿದಿದ್ದರೆ; ಉಳಿವ ಸಂಭವವಿದ್ದಿದ್ದರೆ?

ಇದರ ನಡುವೆ ಬಂದು ಹೋಗುವ ಜಲಜ ಇತ್ಯಾದಿ ಪಾತ್ರಗಳು, ಅನೇಕ ಘಟನೆಗಳು, ಸಾವುಗಳು, ಮದುವೆ ಮಾತುಗಳು ಯಾವುದೂ ಒಂದು ಮುಖ್ಯ ನೆಲೆಗೆ ಜೋಡಣೆಯಾಗದೆ ಬಿಡಿಬಿಡಿ ಚಿತ್ರಣಗಳಾಗಿಬಿಟ್ಟಿವೆ.

## ವಿನಂತಿ

ಅಯ್ಯಾ ಅಗ್ನಿ,
ಪಂಚಭೂತ ಭಯಂಕರ,
ಎಷ್ಟು ವಯಸ್ಸಾಯಿತು
ನಿನಗೆ!
ಈಗಾದರೂ ತುಸು
ತಣ್ಣಗಾಗಬಾರದೆ?
ಹೆಣ್ಣುಮಕ್ಕಳ ಕಣ್ಣೀರು
ಕಡಮೆ ಮಾಡಬಾರದೆ?

ಸಿ.ಪಿ.ಕೆ. ಮೈಸೂರು

ಹೀಗಾಗಿ ಅಪಾರ ನಿರೀಕ್ಷೆಯ ಈ ಕಾದಂಬರಿ ಭಾಷೆ, ಬಂಧ, ಸಾತತ್ಯ, ಪರಿಣಾಮ, ಪ್ರಭಾವ, ಲೌಕಿಕ ಆಯಾಮಗಳಲ್ಲಿ ಸೋತು ನಿಲ್ಲುತ್ತದೆ. ಕಾದಂಬರಿಯ ಎರಡನೆ ಭಾಗವಂತೂ ಮೊದಲ ಭಾಗದ ರಮ್ಯ ಲೋಕಕ್ಕೆ ವಿರುದ್ಧವೂ, ಅವಸರದಿಂದ ಕೂಡಿದ್ದೂ, ಒಂದು ರೀತಿಯ ಹೊಂದಾಣಿಕೆ ಅಥವಾ ಒಪ್ಪಂದದ ಸಂಬಂಧಗಳಿಂದ ಕೂಡಿ ಜಾಳುಜಾಳಾಗಿ ಚಿತ್ರಣವಾಗಿದೆ. ಹಾಗಾಗಿ ಅಲ್ಲಿನ ಅಂತಸ್ತು, ಜಾತಿ ಆಧಾರಿತ ಸಂಬಂಧಗಳು ತೀರಾ ಅವಾಸ್ತವ, ಸಂಘರ್ಷರಹಿತ ಎನಿಸುತ್ತವೆ.

ಕನ್ನಡ 'ನವ್ಯ' ಗದ್ಯಕ್ಕೆ ಒಂದು ತಾತ್ವಿಕ ಹಾಗೂ ಭರವಸೆಯ ನೆಲೆಗಟ್ಟಿದೆ. ಅಡಿಗರಿಂದ ಆರಂಭವಾದ ಈ ಚಳುವಳಿಗೆ ರಾಷ್ಟ್ರೀಯ ಸಮಸ್ಯೆ, ನಿರುದ್ಯೋಗ, ಅನೈತಿಕ ರಾಜಕಾರಣ, ಜನಸಂಖ್ಯೆ, ದೇವರು-ಧರ್ಮ, ಮೂಢ ನಂಬಿಕೆ, ದಿವಾಳಿ ನಾಯಕತ್ವ ಮೊದಲಾದವು ಕೈಹಾಕುವ ಜೇನುಹುಟ್ಟುಗಳಾಗಿದ್ದವು. ಈ ಸಮಸ್ಯೆಯ ಸುಳಿಯಲ್ಲಿ ಸುಳಿದಾಡಿ ವಿಫಲವಾಗುವ ಬಸವರಾಜು, ರಾಹುಲ, ನಾಗಪ್ಪ, ಮಂದಾಕಿನಿ, ಮಂದಣ್ಣ ಮೊದಲಾದವರು ಅದೇ ಕಾರಣಕ್ಕೆ ಶಾಶ್ವತ ಪ್ರತಿಮೆಗಳಾಗಿ ಉಳಿದರು. ಆದರೆ ಅನಂತಮೂರ್ತಿಯವರ ಕತೆ ಕಾದಂಬರಿಗಳಿಗೆ ಈ ಬಗೆಯ ಯಾವುದೇ ತಾತ್ವಿಕ ನೆಲೆಗಳು ಇಲ್ಲವಾಗಿ 'ಜಾತಿ' ಆಧಾರಿತ, ಅದೂ ವೈದಿಕ ಬದುಕಿನ ರಮ್ಯ ಕ್ಷಣಗಳೇ ಮುಖ್ಯವಾದ್ದು ದುರಂತ. ನವ್ಯ ತಾತ್ವಿಕತೆಗೆ 'ಧರ್ಮ ನಿರಪೇಕ್ಷ' ಗಟ್ಟಿ ನೆಲೆ. ಭಾಷೆ, ಸಂಸ್ಕೃತಿ, ಒಡನಾಟ, ಕಟ್ಟುವಿಕೆ ಅದರ ಸೆಲೆ. ಹಾಗಾಗಿ ದೇಸಾಯಿ ತಮ್ಮ ಅಂತಿಮ ಕ್ಷಣಗಳಲ್ಲಿ ಬರೆದ 'ಓಂಣಮೋ'ದಲ್ಲಿ ಜೈನ ಧರ್ಮದ ಒಳನೋಟ ನೀಡುತ್ತಲೇ, ಅದನ್ನು ವ್ಯಂಗ್ಯದಿಂದ ಪರಿಭಾವಿಸುತ್ತಾರೆ. ನಗರೀಕರಣದ ಪರಿಣಾಮದ ಬಗ್ಗೆ ಚಿತ್ತಾಲ ಅನುಮಾನಿಸುತ್ತಾರೆ. ಜಾಗತೀಕರಣಕ್ಕೆ ಎಲ್ಲರಿಗಿಂತ ಮೊದಲು ತೇಜಸ್ವಿ ಸಂವೇದಿಸುತ್ತಾರೆ. ಇವೆಲ್ಲವನ್ನು ಲಂಕೇಶ್ ಈ ಮೊದಲೇ ಅಭಿವ್ಯಕ್ತಿಸಿರುವುದು ಈಗಾಗಲೇ ದಾಖಲಾಗಿದೆ. ಆದರೆ ಅನಂತಮೂರ್ತಿ 'ತಾನು ಮಾಧ್ವ ಎಂದು ಹೇಳಿಕೊಳ್ಳುವುದು ಹೆಮ್ಮೆ' ಎನ್ನುವ ಮೂಲಕ, 'ಜಾತಿ ಪದ್ಧತಿ ಸೃಜನಶೀಲತೆಗೆ ಪೂರಕ' ಎಂದು ಹೇಳಿಕೆ ಕೊಡುವುದರ ಮೂಲಕ ಹೊಸ ಬದುಕಿಗೆ ಆಘಾತ ನೀಡುತ್ತಾರೆ. ಬಾಹ್ಯ ರೂಪಿನಲ್ಲಿ, ಬದುಕಿನಲ್ಲಿ ಜಾತ್ಯಾತೀತ ಎನಿಸಿಕೊಂಡರೂ, ಚಿಂತನೆಗಳು, ಸಾಹಿತ್ಯದ ಮೂಲಕ ಪ್ರತಿಗಾಮಿಯಾಗಿದ್ದಾರೆ. ಭಾರತದ ಇತರ ಭಾಷೆಗಳಾದ ಬಂಗಾಳಿ, ಹಿಂದಿ, ಮಲೆಯಾಳಂ, ತೆಲುಗು, ತಮಿಳು, ಮರಾಠಿಗಳಲ್ಲಿ ಅಲ್ಲಿನ ಮುಖ್ಯ ಲೇಖಕರು ಜಾಗತೀಕರಣ, ಧರ್ಮ, ರಾಜಕಾರಣ, ನವಸಂಸ್ಕೃತೀಕರಣ, ಅಮೆರಿಕದ ವಿರುದ್ಧದ ನಿಲುವುಗಳಿಗೆ ಬದ್ಧರಾಗಿ ಸಾಹಿತ್ಯ ರಚನೆ ಮಾಡಿ, ಯುವ ಪೀಳಿಗೆಗೆ ವಾಸ್ತವ ಚಿತ್ರಣ ನೀಡಿ, ಮಾರ್ಗದರ್ಶಕರಾಗುತ್ತಿರುವಾಗ ನಮ್ಮ ಅನಂತಮೂರ್ತಿ ಹಿಂದೆ, ಹಿಂದೆ, ಬಹು ಹಿಂದಕ್ಕೆ ಚಲಿಸುತ್ತಿರುವುದು ಕನ್ನಡ ನಾಡು-ನುಡಿಗೆ ಬಗೆದ ದ್ರೋಹವಾಗಿದೆ. ಕನ್ನಡ ಓದುಗನ ದೌರ್ಭಾಗ್ಯವಾಗಿದೆ.

ಎಸ್. ಪ್ರಸಾದಸ್ವಾಮಿ
ಕನ್ನಡ ವಿಭಾಗದ ಮುಖ್ಯಸ್ಥರು
ಸರ್.ಎಂ.ವಿ. ಸರ್ಕಾರಿ ವಿಜ್ಞಾನ ಕಾಲೇಜು, ಭದ್ರಾವತಿ-೫೭೭ ೩೦೨

## ಸಾದರ ಸ್ವೀಕಾರ

**ಎತ್ತಪ್ಪ** (ಜನಪದಕಥೆ)
*ಡಾ|| ಮೀರಾಸಾಬಿಹಳ್ಳಿ ಶಿವಣ್ಣ*
**ಪುಟ: ೮೮** **ಬೆಲೆ: ರೂ. ೮೦**
**ಸಿವಿಜಿ ಪಬ್ಲಿಕೇಷನ್ಸ್**
ನಂ. ೭೦, ಎರಡನೇ ಮುಖ್ಯರಸ್ತೆ, ಜಬ್ಬಾರ್ ಬ್ಲಾಕ್, ವೈಯಾಲಿಕಾವಲ್, ಬೆಂಗಳೂರು-೫೬೦ ೦೦೩

**ಬಣ್ಣ ಬಯಲು** (ಚಿತ್ರಕಲಾ ಲೇಖನಗಳು)
*ಡಿ. ಎಸ್. ಚೌಗಲೆ*
**ಪುಟ: ೧೨೪** **ಬೆಲೆ: ರೂ. ೭೦**
**ಹರ್ಷ ಪ್ರಕಾಶನ**
ಮನೆ ನಂ. ೬, ಬ್ಲಾಕ್ ನಂ. ೨. ಕಿಮ್ಸ್ ಕ್ವಾರ್ಟರ್ಸ್, ಹುಬ್ಬಳ್ಳಿ-೨೨

**ಮೌನ ಮೆರವಣಿಗೆ** (ಕವನ ಸಂಕಲನ)
*ಶಂಕರ ತಲ್ಲೂರ*
**ಪುಟ: ೬೪** **ಬೆಲೆ: ರೂ. ೫೦**
**ಚೇತನ ಸಹಕಾರಿ ಗ್ರಂಥ ಮಾಲೆ, ಪತ್ರಕರ್ತರ ಹಾಗೂ ಬರಹಗಾರರ ಸಹಕಾರ ಸಂಘ ನಿಯಮಿತ,** ರಾಮತೀರ್ಥನಗರ, ಬೆಳಗಾವಿ-೧೫

**ಶರದದ ಮುಗಿಲು** (ಕವನಸಂಕಲನ)
*ಸಿ. ಪಿ. ಕೆ.*
**ಪುಟ: ೭೨** **ಬೆಲೆ: ರೂ. ೫೦**
**ಚಿತ್ರಭಾನು ಪ್ರಕಾಶನ,** ೨೨೬೫/೧೯ 'ಭಾರತಿ' ೬ನೇ ತಿರುವು, ವಿನಾಯಕನಗರ, ಮೈಸೂರು - ೧೨

**ಉಡುಪಿ ಅಂದು-ಇಂದು** (ಪರಿಚಯ)
*ಯಸ್. ಗೋಪಿಚಂದ ರಾವ್*
**ಪುಟ: ೭೪** **ಬೆಲೆ: ರೂ. ೨೫**
**ನವಪ್ರಕಾಶನ, ಉಡುಪಿ**

**ಕಥಾ ಚೈತ್ರ** (ಕಥಾಸಂಕಲನ)
*ಕೆ. ಎನ್. ಭಗವಾನ್*
**ಪುಟ: ೧೪೪** **ಬೆಲೆ: ರೂ. ೬೦**

**ಕಾರ್ಖಾನೆ ಚಿತ್ರಗಳು** (ಪ್ರಬಂಧ ಸಂಕಲನ)
*ಕೆ. ಎನ್. ಭಗವಾನ್*
**ಪುಟ: ೧೭೬** **ಬೆಲೆ: ರೂ. ೫೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಧಾತ್ರಿ ಪ್ರಕಾಶನ,** ಚೈತ್ರ, ೧೫೫೫, ಪೂರ್ವಾಂತ್ಯ ರಸ್ತೆ, ೯ನೇ ಬ್ಲಾಕ್, ಜಯನಗರ, ಬೆಂಗಳೂರು-೬೯

ಯಶಸ್ವಿನಿ ಒಂಬತ್ತು ವರ್ಷದ ಆಕರ್ಷಕ ಮುದ್ದು ಮಗು. ಸ್ವಲ್ಪ ದಪ್ಪವೆನಿಸಿದರೂ ಬೆಳ್ಳಗಿದ್ದು ಯಾರಾದರೂ ನೋಡಿದಾಗ, 'ನನಗೆ ಇಂತಹ ಮಗಳಿಲ್ಲವಲ್ಲಾ' ಎಂದು ಹಲುಬುವಂತಿದ್ದಳು. ಇವಳು ಲೋಕೇಶ್ ಮತ್ತು ಪ್ರೇಮ ದಂಪತಿಗಳ ಏಕಮಾತ್ರ ಪುತ್ರಿ. ಮಗುವಿನಲ್ಲಿ ಈಗ್ಗೆ ನಾಲ್ಕು ತಿಂಗಳಿಂದ ತಾಯ್ತಂದೆಯರು ಬದಲಾವಣೆಯನ್ನು ಗಮನಿಸಿದ್ದರು. ಮಾತು ಕಡಿಮೆಯಾಗಿತ್ತು. ನೆಂಟರಿಷ್ಟರ ಅಥವಾ ಸ್ನೇಹಿತರ ಮನೆಗೆ ಹೋದಾಗ ಇವಳ ವಯಸ್ಸಿನ ಇತರೆ ಮಕ್ಕಳ ಜೊತೆ ಆಡದೆ, ಮಾತನಾಡದೆ ಮೂಲೆಯಲ್ಲಿ ಏಕಾಂತವಾಗಿ ಕುಳಿತುಕೊಳ್ಳುತ್ತಾಳೆ. ಅಪ್ಪ ಅಮ್ಮ ಇಬ್ಬರೂ ಉದ್ಯೋಗದಲ್ಲಿದ್ದು, ಇವರು ಮನೆಗೆ ವಾಪಸ್ಸಾಗುವುದು ರಾತ್ರಿ ಎಂಟು, ಒಂಬತ್ತಕ್ಕೆ. ಅಪ್ಪ ಬರುವುದು ತಡವಾದರೆ ತಕರಾರು ಮಾಡದ ಮಗು ಅಮ್ಮ ತಡವಾದರೆ ಅಳುತ್ತಾಳೆ. ತಾತ, ಅಜ್ಜಿಯ ಸಮಾಧಾನದ ಮಾತು ಯಾವ ಪರಿಣಾಮ ಬೀರುತ್ತಿಲ್ಲ. ಅಮ್ಮನ ಮುಂದೆ ಅಳುತ್ತಾಳೆ. ಕಾರಣವೇನೆಂದು ಪ್ರಶ್ನಿಸಿದರೆ 'ಬೇಜಾರು' ಎನ್ನುತ್ತಾಳೆ. ಶಾಲೆಯಲ್ಲಿ ಸದಾ ವಾಚಾಳಿಯಾಗಿರುತ್ತಿದ್ದ ಇವಳನ್ನು ಉಪಾಧ್ಯಾಯರು ಸುಮ್ಮನಿರುವಂತೆ ಪದೇ ಪದೇ ಎಚ್ಚರಿಸಬೇಕಾಗಿತ್ತು. ಆದರೆ ಈ ಅವಧಿಯಲ್ಲಿ ಬಹುತೇಕ ಮೂಕಳಂತಿದ್ದು, ಇದರ ಬಗ್ಗೆ ಉಪಾಧ್ಯಾಯರು ಲೋಕೇಶ್ ದಂಪತಿಗಳನ್ನು ಕರೆದು ವಿಚಾರಿಸಿದ್ದರು. ಪರೀಕ್ಷೆಯಲ್ಲಿ ಶೇಕಡ ೯೦ಕ್ಕೂ ಮೀರಿ ಅಂಕ ಪಡೆಯುತ್ತಿದ್ದವಳು ಈಗ ಅರವತ್ತಕ್ಕೆ ಇಳಿದಿದ್ದಾಳೆ. 'ಇರುವ ಒಬ್ಬಳೇ ಮಗಳು ಹೀಗಾದಳಲ್ಲಾ?' ಎಂಬ ಕೊರಗು ಪೋಷಕರಲ್ಲಿ ಉದ್ಭವಿಸಿ ಬಾಲಿಕೆಯನ್ನು ನನ್ನಲ್ಲಿಗೆ ಕರೆತಂದಿದ್ದರು.

# ಬೇರ್ಪಡೆ ಆತಂಕ

ಅವಳ ಹೆಸರು, ಸ್ನೇಹಿತೆಯರ ಹೆಸರು, ಅವಳ ಶಾಲೆ ಹೆಸರು ಇತ್ಯಾದಿ ವಿವರಗಳನ್ನು ಅವಳಿಂದ ಸಂಗ್ರಹಿಸುವುದರ ಮೂಲಕ ಮಗುವಿನ ವಿಶ್ವಾಸ ಸಂಪಾದಿಸಿದೆ.

''ಯಶಸ್ವಿನಿ, ಅಮ್ಮ, ಅಪ್ಪ ಇಬ್ಬರೂ ಕೆಲಸ ಮುಗಿಸಿ ರಾತ್ರಿ ತಡವಾಗಿ ಮನೆಗೆ ಬರುತ್ತಾರ ?'' ಕೇಳಿದೆ.

''ಹೌದು.''

''ಇದು ನಿನಗೆ ಇಷ್ಟವಾಗುವುದಿಲ್ಲವೇ ?''

''ಅಪ್ಪ ತಡವಾಗಿ ಬಂದರೆ ಏನೂ ಅನಿಸುವುದಿಲ್ಲ. ಅಮ್ಮ ತಡವಾಗಿ ಬಂದರೆ ದುಃಖವಾಗುತ್ತದೆ.''

''ಇದರ ಬಗ್ಗೆ ಅಮ್ಮನಲ್ಲಿ ಜಗಳವಾಡುತ್ತೀಯ ?''

''ಹೌದು, ನನಗೆ ಅಮ್ಮನನ್ನು ಕಂಡರೆ ಇಷ್ಟವಿಲ್ಲ''.

''ಅಪ್ಪನನ್ನು ಕಂಡರೆ ?''

''ಕೋಪವಿಲ್ಲ.''

''ಏಕೆ ?''

''ಅವರು ಒಳ್ಳೆಯವರು.''

''ನಿನ್ನ ಮನಸ್ಸಿಗೆ ಸಾಮಾನ್ಯವಾಗಿ ದುಃಖ ಇರುತ್ತದೋ ಅಥವಾ ಸಂತೋಷ ಇರುತ್ತದೋ ?''

ಪ್ರಶ್ನೆ ಮಗುವಿಗೆ ಅರ್ಥವಾಗಲಿಲ್ಲ.

''ಪದೇ ಪದೇ ಅಳುತ್ತೀಯ ?'' ಪ್ರಶ್ನೆ ಬದಲಾಯಿಸಿದೆ.

ಹೌದೆಂದು ತಲೆಯಾಡಿಸಿದಳು. ಮಗುವನ್ನು ಪ್ರಶ್ನಿಸುವಾಗ ಪೋಷಕರನ್ನು ಹೊರಗೆ ಕಳಿಸಿದ್ದೆ. ಈಗ ಮಗುವನ್ನು ಹೊರಗೆ ಕಳಿಸಿ ಅವರನ್ನು ಒಳಗೆ ಕರೆದೆ.

''ಪ್ರೇಮರವರೆ, ನೀವು ಮನೆಗೆ ಬಂದಾಗ ಮಗಳು ನಿಮ್ಮ ಜೊತೆ ಹೇಗೆ ವರ್ತಿಸುತ್ತಾಳೆ ?''

''ನನ್ನ ಬೆನ್ನಂಟಿಕೊಂಡವಳು ಬಿಡುವುದಿಲ್ಲ. ಮೈಕೈ ನೋವು ಎನ್ನುತ್ತಿರುತ್ತಾಳೆ. ಮೈಕೈಯಲ್ಲಿ 'ಗ್ಯಾಸ್' ಇದೆ, ಇದು ಹೊಟ್ಟೆಗೆ ಬರುತ್ತದೆ ಎನ್ನುತ್ತಿರುತ್ತಾಳೆ'' ಎಂದಳು ಆಕೆ.

''ಡಾಕ್ಟ್ರೇ, 'ನನಗೆ ತಮ್ಮ ಅಥವಾ ತಂಗಿ ಬೇಕು' ಎಂದು ಹಟ ಮಾಡುತ್ತಾಳೆ'' ಲೋಕೇಶ್ ಸೇರಿಸಿದ.

''ಯಶಸ್ವಿನಿಗೆ ಈ ತೊಂದರೆ ಬರುವ ಮುಂಚೆ ಮನೆಯಲ್ಲಿ ಸಹಿಸದ ಘಟನೆ ಏನಾದರೂ ನಡೆದಿತ್ತೆ ?'' ಇಬ್ಬರನ್ನೂ ಪ್ರಶ್ನಿಸಿದೆ.

ಸ್ವಲ್ಪ ಸಮಯ ಯೋಚಿಸಿ ಅಮ್ಮ ಉತ್ತರಿಸಿದಳು, ''ಹೌದು. ಆ ದಿನ ರಾತ್ರಿ ನಾನು, ಯಶಸ್ವಿನಿ ಮತ್ತು ನನ್ನ ತಂಗಿ ತವರೂರು ಶಿವಮೊಗ್ಗಕ್ಕೆ ಹೊರಟಿದ್ದೆವು. ಸಮಯ ಎಂಟು ಕಾಲು. ಎಂಟು ಮುಕ್ಕಾಲಿಗೆ ಬಸ್ಸಿತ್ತು. ಹೋಗುವ ಅವಸರದಲ್ಲಿ ನಾವಿರುವಾಗ ಮಾವ ಆ ದಿನ ಬೆಳಗ್ಗೆ ಆದ ಚಿಕ್ಕ ಘಟನೆ ಬಗ್ಗೆ ಜಗಳ ಪ್ರಾರಂಭಿಸಿದರು. ನಾನು 'ಊರಿಂದ ಬಂದ ಮೇಲೆ ಈ ಚಿಕ್ಕ ವಿಷಯದ ಬಗ್ಗೆ ಮಾತನಾಡೋಣ' ಎಂದೆ. ಅದಕ್ಕೆ ಅವರು ಕೋಪದಿಂದ, 'ಹೋಗು ಮತ್ತೆ ಬರಬೇಡ' ಎಂದರು'' ಎಂದಳು.

ಈಗ ಯಶಸ್ವಿನಿಗೆ ಇರುವ ತೊಂದರೆ ತಿಳಿಯಿತು. ಅಮ್ಮ ತನ್ನಿಂದ ದೂರವಾಗುತ್ತಾಳೆ, ಅವಳನ್ನು ತಾನು ಕಳೆದುಕೊಳ್ಳುತ್ತೇನೆ ಎಂದು ನಂಬಿದಳು. ಈ ಕಾರಣ ಅಮ್ಮ ಕಛೇರಿಯಿಂದ ಬರುವುದು ತಡವಾದಾಗ ಅಳುತ್ತಿದ್ದಳು. ಅವಳು ಬಂದನಂತರ ಸೀರೆ ಹಿಡಿದು ಸದಾ ಬೆನ್ನಹಿಂದೆ ಇರುತ್ತಿದ್ದಳು. 'ಎಲ್ಲಿ ತನ್ನಿಂದ ಅಮ್ಮ ದೂರವಾಗುತ್ತಾಳೋ' ಎಂದು ಯೋಚಿಸಿದಳು. ತಾತ ಅಪ್ಪನಿಗೆ ಆ ರೀತಿ ಹೇಳದಿದ್ದುದರಿಂದ ಅವನ ಬಗ್ಗೆ ಯೋಚಿಸುತ್ತಿಲ್ಲ. ಈ 'ಬೇರ್ಪಾಡು ಆತಂಕ'ದಿಂದ ದುಃಖಿತಳಾಗಿ ಅಳುವುದು, ಏಕಾಂತವಾಗಿರುವುದು, ಶ್ರದ್ಧೆ ವಹಿಸಿ ಓದದೆ ಅಂಕ ಕಡಿಮೆಯಾಯಿತು. ಏನೂ ಬೇಡವಾಯಿತು. ಅಮ್ಮನನ್ನು ಕಳೆದುಕೊಳ್ಳಬಹುದೆಂಬ ಸಂಶಯ ಅವಳನ್ನು ದ್ವೇಷಿಸುವಂತೆ ಮಾಡಿತು.




ಬೇರ್ಪಡೆ ಆತಂಕ (Separation Anxiety Disorder) ಶೇ. ೪ ಮಕ್ಕಳಲ್ಲಿ ಕಂಡುಬರುತ್ತದೆ. ಸಾಮಾನ್ಯವಾಗಿ ೭-೯ ವರ್ಷದ ಮಕ್ಕಳಲ್ಲಿ ಇದು ಕಂಡುಬಂದು, ಹುಡುಗರಿಗಿಂತ ಹುಡುಗಿಯರಲ್ಲಿ ಹೆಚ್ಚು ಸಂಖ್ಯೆಯಲ್ಲಿ ಕಾಣಿಸಿಕೊಳ್ಳುತ್ತದೆ. ಕೆಲವೊಮ್ಮೆ ಹದಿಹರೆಯದ ವಯಸ್ಸಿನಲ್ಲೂ ಕಂಡುಬರಬಹುದು.

ರೋಗಿಯ ತೊಂದರೆಗೆ ಪರಿಹಾರ ಸೂಚಿಸಿದೆ: ''ನೋಡಿ ತಾಯಿ, ನೀವು ಕಛೇರಿಯಿಂದ ಆದಷ್ಟು ಬೇಗ ಬರಬೇಕು. ಪ್ರತಿದಿನ ಕಛೇರಿಯಿಂದ ಯಶಸ್ವಿನಿ ಶಾಲೆಯಿಂದ ಬಂದ ನಂತರ ಫೋನ್ ಮೂಲಕ ಕೆಲವು ನಿಮಿಷ ಮಾತಾಡಿ. ತಡವಾದರೆ ಮತ್ತೊಮ್ಮೆ ಫೋನ್ ಮಾಡಿ ಅದರ ಬಗ್ಗೆ ಅವಳಿಗೆ ತಿಳಿಸಿ. ಪ್ರತಿದಿನ ಸಂಜೆ ಅಥವಾ ರಾತ್ರಿ ನೀವಿಬ್ಬರೂ ಅವಳ ಜೊತೆ ಸ್ವಲ್ಪ ಸಮಯ ವಾಕಿಂಗ್ ಹೋಗಿ. ಭಾನುವಾರ ಅವಳನ್ನು ಹೊರಗೆ ಕರೆದೊಯ್ದು ಆದಷ್ಟು ಸಮಯ ಖರ್ಚು ಮಾಡಿ. ಆದಷ್ಟು ಮಗಳ ಜೊತೆ ಇರಿ. ಆಗ ನೀವು ಅವಳ ಸಮೀಪ ಇದ್ದೀರಿ ಎಂಬ ನಂಬಿಕೆ ಮತ್ತು ವಿಶ್ವಾಸ ಬರುತ್ತದೆ. ಯಾವಾಗ ಈ ನಂಬಿಕೆ ಅವಳಲ್ಲಿ ಬರುತ್ತದೋ ಆಗ ಈ ರೋಗ ಹೋಗುತ್ತದೆ.''

ಇಬ್ಬರೂ ಒಪ್ಪಿದರು.

''ಔಷಧ ?'' ಲೋಕೇಶ್ ಕೇಳಿದ.

''ನಾನು ಇದುವರೆಗೂ ಹೇಳಿದ್ದೇ ಔಷಧ'' ಮುಗುಳ್ನಕ್ಕು ಹೇಳಿದೆ.

''ಗ್ಯಾಸ್‌ಗೆ ?'' ಪ್ರೇಮ ಪ್ರಶ್ನಿಸಿದಳು.

''ಗ್ಯಾಸ್, ಆತಂಕ, ಖಿನ್ನತೆ ಮತ್ತು ಮೈಕೈ ನೋವು ಬೇರ್ಪಡೆ ಆತಂಕದ ಚಿಹ್ನೆಗಳು. ಇವಕ್ಕೆ ಪ್ರತ್ಯೇಕ ಔಷಧ ಬೇಕಿಲ್ಲ. ಹಾಗೂ ಪ್ರತಿಯೊಂದಕ್ಕೂ ಔಷಧವೇ ಉತ್ತರವಲ್ಲ.''

''ಇನ್ನೊಂದು ಮಗು ಬೇಕೆಂದು ಹಟ ಮಾಡುತ್ತಾಳಲ್ಲಾ? ಅದಕ್ಕೆ ಪರಿಹಾರವೇನು?''

''ಇದರ ಬಗ್ಗೆ ನಿಮ್ಮ ಅಭಿಪ್ರಾಯವೇನು ?''

''ನಮಗೆ ಇನ್ನೊಂದು ಮಗು ಬೇಕಿಲ್ಲ'' ಪ್ರೇಮ ಖಚಿತವಾಗಿ ಹೇಳಿದಳು.

''ಸರಿ, ಇದು ನಿಮ್ಮಿಬ್ಬರ ವೈಯಕ್ತಿಕಕ್ಕೆ ಸಂಬಂಧಿಸಿದ್ದು. ನೀವು ದೂರವಾಗಬಹುದು, ತನಗೆ ಪ್ರಿಯವಾದವರು ಇನ್ನೊಬ್ಬರು ಬೇಕೆಂದು ಹಂಬಲಿಸಿ ಹಟ ಮಾಡುತ್ತಾಳೆ. ಏನಾದರೂ ಕಾರಣ ಹೇಳಿ ಇದನ್ನು ಮುಂದೂಡಿ. ನೀವು ಅವಳಿಗೆ ಪುನಃ ಹತ್ತಿರವಾಗಿದ್ದೀರಿ. ಅವಳನ್ನು ಬಿಟ್ಟು ಹೋಗುವುದಿಲ್ಲವೆಂದು ಆಕೆಗೆ ನಂಬಿಕೆಯಾದಾಗ ಸುಮ್ಮನಾಗುತ್ತಾಳೆ'' ಎಂದೆ.

ಅಪ್ಪ ಅಮ್ಮಂದಿರ ಜೊತೆ ಹೋಗುವಾಗ ಯಶಸ್ವಿನಿ ನನಗೆ ಆಕರ್ಷಕ ನಗುವಿತ್ತು, 'ಬೈ' ಮಾಡಿದ್ದು ನಾನು ಯಾವತ್ತೂ ಮರೆಯಲಾರೆ.

ಡಾ|| ಜಿ. ಎಸ್. ಪಾಲಾಕ್ಷ
ಮನೋರೋಗ ತಜ್ಞ, ಹೆಚ್. ಎ. ಎಲ್. ಆಸ್ಪತ್ರೆ
ಬೆಂಗಳೂರು - ೫೬೦ ೦೧೭

# ಓಝೋನ್ ಪತನ ಈ ಧರೆಯ ವಿನಾಶದ ಸೂಚನೆಯೇ?

**ಭೂ**ಮಿಯಿಂದ ೧೦-೫೦ ಕಿ.ಮಿ. ಎತ್ತರದ ವಾಯುಮಂಡಲದಲ್ಲಿ ತೆಳುವಾದ ಪದರಿನಂತೆ ಹರಡಿರುವುದೇ ಓಝೋನ್ ವಲಯ. ಇಲ್ಲಿ ಓಝೋನ್ ನಿರಂತರವಾಗಿ ಉತ್ಪಾದಿಸಲ್ಪಡುವುದು. ವಾಯುಮಂಡಲದ ಅಧಿಕ ಉಷ್ಣಾಂಶದ ಪರಿಣಾಮವಾಗಿ ಆಮ್ಲಜನಕ ($O_2$)ಅನಿಲ ಕಣವು ಆಮ್ಲಜನಕ ಅಣುವಾಗಿ (O) ನಂತರ ಆಮ್ಲಜನಕ ಅನಿಲ ಕಣದೊಡನೆ ಸಂಯೋಜನೆ ಹೊಂದಿ ಓಝೋನ್ ($O_3$) ಆಗುವುದು.

**ಓಝೋನ್ ಮಹತ್ವ**: ಸೂರ್ಯನಿಂದ ಬಿಡುಗಡೆಯಾಗುವ ಶಾಖವೆಲ್ಲವೂ ಭೂಮಿಗೆ ತಲುಪುವುದಿಲ್ಲ. ಅದರಲ್ಲಿಯ ಜೀವಘಾತುಕ ಕಿರಣಗಳಾದ ನೀಲ ಲೋಹಿತ (ಅಲ್ಟ್ರಾ ವಯಲೆಟ್) ಕಿರಣಗಳನ್ನು ಓಝೋನ್ ಭೂಮಿಗೆ ಬಿಡದೆ ಹೀರಿಕೊಂಡು ಚದುರಿ ಹೋಗುವಂತೆ ಮಾಡಿ ಭೂಮಿಯನ್ನು ರಕ್ಷಿಸುತ್ತಿದೆ. ಇದರಿಂದ ಭೂಮಿಗೆ ಸೂರ್ಯನ ಶಾಖದ ಸುರಕ್ಷಿತ ಭಾಗ ಮಾತ್ರ ತಲುಪುತ್ತಿದೆ. ಇದರಿಂದಾಗಿ ಭೂಮಿಯಲ್ಲಿ ಜೀವಿ ಮತ್ತು ಸಸ್ಯಗಳು ಬೆಳವಣಿಗೆ ಹೊಂದಲು ಸಾಧ್ಯವಾಗಿದೆ.

ಓಝೋನ್ ಒಂದು ಜೀವರಕ್ಷಕ ಅನಿಲ. ಅದರ ಪ್ರಮಾಣ (ಶೇ. ೦.೦೦೦೬) ಅಲ್ಪವಾದರೂ ಈ ಧರೆಯಲ್ಲಿನ ಸಕಲ ಜೀವ ರಾಶಿಗಳ ಉಳಿವಿಗೆ ಕಾರಣವಾಗಿದೆ. ಓಝೋನ್ ಇಲ್ಲದಿದ್ದರೆ, ಇತರ ಗ್ರಹಗಳಂತೆ ಈ ಭೂಮಿಯೂ ಸಹ ನಿರ್ಜೀವ ಗ್ರಹವಾಗುತ್ತಿತ್ತು. ಆದುದರಿಂದ ಇದರ ರಕ್ಷಣೆ ಎಲ್ಲರ ಆದ್ಯ ಕರ್ತವ್ಯವಾಗಿದೆ.

IONOSPHERE
MESOSPHERE
STRATOSPHERE
TROPOSPHERE
EXOSPHERE
ಬಾಹ್ಯ ಮಂಡಲ
500 KMS
80 KMS
50 KMS
10 KMS
ಪರಿವರ್ತನ ಮಂಡಲ
ಸಮೋಷ್ಣ ಮಂಡಲ
ಮಧ್ಯಾಂತರ ಮಂಡಲ
ಅಯಾನ ಮಂಡಲ

ಭೂಮಿಯನ್ನು ಪೊರೆಯಂತೆ ಸುತ್ತುವರೆದಿರುವ ವಾಯುಮಂಡಲದಲ್ಲಿ ಓಝೋನ್ ವಲಯ

**ಓಝೋನ್ ನಾಶ ಏಕೆ ? ಹೇಗೆ ?**

ನಮ್ಮ ವಿಜ್ಞಾನಿಗಳು ೧೯೮೦ರಲ್ಲಿ ಓಝೋನ್ ಪದರದಲ್ಲಿ ರಂಧ್ರ (Ozone hole)ಗಳಾಗಿರುವುದನ್ನು ಮೊದಲ ಬಾರಿಗೆ ಪತ್ತೆ ಹಚ್ಚಿದರು. ಪ್ರಕೃತಿಯ ಮೇಲಿನ ಮಾನವನ ದುರಾಕ್ರಮಣ ಎಲ್ಲೆ ಮೀರಿದೆ. ಅವರ ಆಸೆಗಳಿಗೆ ಕೊನೆಯಿಲ್ಲ. ಪ್ರತಿ ನಿತ್ಯವೂ ಹೊಸ ಹೊಸ ವಾಹನ ಮತ್ತು ಯಂತ್ರಗಳನ್ನು ತಯಾರಿಸುತ್ತಿದ್ದಾನೆ. ಬೃಹತ್ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸುತ್ತಿದ್ದಾನೆ. ಇವು ಅಗಾಧ ಪ್ರಮಾಣದಲ್ಲಿ ಕಲುಷಿತ ವಾಯುವನ್ನು ವಾತಾವರಣಕ್ಕೆ ಸೇರಿಸುತ್ತಿವೆ. ಕ್ಲೋರೋಫ್ಲೋರೋ ಕಾರ್ಬನ್ (CFCs) ಗುಂಪಿನ ಅನಿಲಗಳನ್ನು ಬಿಡುಗಡೆ ಮಾಡುತ್ತಿವೆ. ಇವು ಓಝೋನ್ ಪದರವನ್ನು ಛಿದ್ರಗೊಳಿಸಿ ಗೋಳದ ಉಷ್ಣಾಂಶ ದಿನೇ ದಿನೇ ಹೆಚ್ಚಾಗಲು ಕಾರಣವಾಗಿವೆ.

**ತಡೆಯಿಲ್ಲದ ಇಂಗಾಲಾಮ್ಲ ಉತ್ಪಾದನೆ**: ಕಳೆದ ನೂರಾರು ವರ್ಷಗಳಲ್ಲಿ ಉರಿಸಲಾಗಿದ್ದ ಹಲವು ಬಿಲಿಯನ್ ಟನ್ ಕಲ್ಲಿದ್ದಲನ್ನು ನಾವು ಈಗ ಕೇವಲ ಒಂದೇ ದಶಕದಲ್ಲಿ ಉರಿಸುತ್ತಿದ್ದೇವೆ! ಒಂದು ಟನ್ ಕಲ್ಲಿದ್ದಲು ಉರಿಸಿದರೆ, ೪ ಟನ್ ಇಂಗಾಲ ವಾತಾವರಣಕ್ಕೆ ಬಿಡುಗಡೆಯಾಗುತ್ತದೆ! ನಮ್ಮ ದೇಶದ ಥರ್ಮಲ್ ಸ್ಥಾವರಗಳು ವರ್ಷಕ್ಕೆ ೫೦ ಮಿಲಿಯನ್ ಟನ್ ಇಂಗಾಲ ಬಿಡುಗಡೆ ಮಾಡುತ್ತಿವೆ. ಕಲ್ಲಿದ್ದಲು ಮತ್ತು ವಾಹನಗಳಿಂದ ಪ್ರತಿ ವರ್ಷ ಸುಮಾರು ೨.೦ ಮಿಲಿಯನ್ ಟನ್ ಇಂಗಾಲ ವಾತಾವರಣಕ್ಕೆ ಸೇರುತ್ತಿದೆ ಎಂಬ ಅಂದಾಜಿದೆ. ಹೀಗೆ ಎಲ್ಲಾ ಮೂಲಗಳಿಂದ ಪ್ರತಿ ವರ್ಷ ಒಟ್ಟು ೨೦೦೦ ಕೋಟಿ ಟನ್‌ಗಳಿಗಿಂತಲೂ ಹೆಚ್ಚಿನ ಇಂಗಾಲ ವಾತಾವರಣ ಸೇರುತ್ತಿದೆ.

ಡಾ|| ದಯಾನಂದ

ಜಗತ್ತಿನ ಕೇವಲ ಶೇ. ೪ರಷ್ಟು ಜನಸಂಖ್ಯೆ ಹೊಂದಿರುವ ಅಮೆರಿಕವು ತನ್ನ ವೈಭವ ಜೀವನ ಕ್ರಮದಿಂದಾಗಿ ಅತಿ ಹೆಚ್ಚು ಅಂದರೆ ಶೇ. ೨೫ರಷ್ಟು ಪ್ರಮಾಣದ ಇಂಗಾಲವನ್ನು ವಾತಾವರಣಕ್ಕೆ ಪ್ರತಿವರ್ಷ ಸೇರಿಸುತ್ತಿದೆ. ಅಭಿವೃದ್ಧಿಶೀಲ ರಾಷ್ಟ್ರಗಳಾದ ಭಾರತ ಮತ್ತು ಚೈನಾಗಳು ಹೆಚ್ಚು ಇಂಗಾಲ ಬಿಡುಗಡೆ ಮಾಡುವ ಆರು ರಾಷ್ಟ್ರಗಳ ಪಟ್ಟಿಯಲ್ಲಿ ಸೇರಿವೆ.

**ಅರಣ್ಯನಾಶ - ಇಳಿಕೆಯಾಗುತ್ತಿರುವ ಇಂಗಾಲಾಮ್ಲದ ಬಳಕೆ**: ಸಸ್ಯಗಳು ಇಂಗಾಲಾಮ್ಲವನ್ನು ಕಚ್ಚಾವಸ್ತುವಾಗಿ ಬಳಸಿ ಆಹಾರ ತಯಾರಿಸುತ್ತವೆ. ಆದರೆ ಅರಣ್ಯನಾಶ ನಿರಂತರವಾಗಿ ನಡೆದಿದೆ. ಒಂದು ಅಂದಾಜಿನ ಪ್ರಕಾರ ಪ್ರತಿ ನಿಮಿಷಕ್ಕೆ ೨೦ ರಿಂದ ೫೦ ಹೆಕ್ಟೇರ್‌ನಷ್ಟು ಅರಣ್ಯ ನಾಶವಾಗಿ ವಾಯುಮಂಡಲಕ್ಕೆ ಸೇರುತ್ತಿರುವ ಇಂಗಾಲದ ಪ್ರಮಾಣ ಪ್ರತಿವರ್ಷ ಶೇ. ೪.೬ರಷ್ಟು ಹೆಚ್ಚುತ್ತಿದೆ. ಈ ಹೆಚ್ಚಾದ ಇಂಗಾಲವನ್ನು ಬಳಸಿಕೊಳ್ಳಲು ಸಾಕಷ್ಟು ಅರಣ್ಯವಿಲ್ಲದೆ, ಇರುವ ಅರಣ್ಯಗಳು ಬೆಂಕಿಗಾಹುತಿಯಾಗಿ ಸಮತೋಲನೆ ಏರುಪೇರಾಗಿ ಹೆಚ್ಚಿನ ಇಂಗಾಲ ವಾಯುಮಂಡಲದಲ್ಲಿಯೆ ಉಳಿಯುತ್ತಿದೆ. ಈ ಇಂಗಾಲ ಮತ್ತು ಇತರ ಅನಿಲಗಳು ಹಸಿರು ಮನೆ ಪರಿಣಾಮ ಉಂಟುಮಾಡುತ್ತಿವೆ.

**ಹಸಿರುಮನೆ ಪರಿಣಾಮ** (Greenhouse effect) : ಗಾಜಿನ ಮನೆಯ ತೋಟದಲ್ಲಿ ಸೂರ್ಯನ ಶಾಖ ಗಾಜಿನ ಮೂಲಕ ಒಳಬರುತ್ತದೆ. ಆದರೆ ಶಾಖ ಹೊರ ಹೋಗದಂತೆ ಗಾಜು ತಡೆಯುತ್ತದೆ. ಇದರಿಂದ ಗಾಜಿನ ಮನೆಯ ಶಾಖ ಹೆಚ್ಚುತ್ತಾ ಹೋಗುತ್ತದೆ. ಹಾಗೆಯೇ ಭೂಮಿಯ ಸುತ್ತಲೂ ಆವರಿಸಿರುವ ವಾಯುಮಂಡಲದಲ್ಲಿ ಇಂಗಾಲಾಮ್ಲ ಮಿಥೇನ್ ಮತ್ತಿತರ ಅನಿಲಗಳು ಸೇರಿವೆ. ಇವು ಗಾಜಿನ ಹಾಗೆ ಸೂರ್ಯ ಕಿರಣಗಳನ್ನು ಭೂಮಿಗೆ ಬಿಡುತ್ತವೆ. ಆದರೆ ಶಾಖ ಆಚೆ ಚದುರಿ ಹೋಗದಂತೆ ತಡೆಯುತ್ತವೆ. ಇದನ್ನೇ 'ಹಸಿರು ಮನೆ ಪರಿಣಾಮ' ಎನ್ನಲಾಗಿದೆ.

ಹಸಿರು ಮನೆ ಪರಿಣಾಮಕ್ಕೆ ಕಾರಣವಾಗಿರುವ ಅನಿಲಗಳಿಗೆ ಹಸಿರು ಮನೆ ಅನಿಲಗಳು ಎನ್ನಲಾಗುವುದು. ಅವುಗಳೆಂದರೆ- ಇಂಗಾಲಾಮ್ಲ ($CO_2$), ಮಿಥೇನ್ ($CH_4$), ಕ್ಲೋರೋಫ್ಲೋರೊ ಕಾರ್ಬನ್ (CFC), ಹೈಡ್ರೋ ಕ್ಲೋರೋಫ್ಲೋರೊ ಕಾರ್ಬನ್ (HCFC), ಕಾರ್ಬನ್ ಟೆಟ್ರಕ್ಲೋರೈಡ್ ($CCL_4$), ಕಾರ್ಬನ್ ಮಾನಾಕ್ಸೈಡ್ (CO), ನೈಟ್ರಸ್ ಆಕ್ಸೈಡ್ ($N_2O$) ಮೀಥೇಲ್ ಬ್ರೋಮೈಡ್ ($CH_3Br$) ಮುಖ್ಯವಾದವು. ಇವುಗಳಲ್ಲಿ CFCs ಗುಂಪುಗಳನ್ನು ರೆಫ್ರಿಜರೇಟರ್, ಕಂಪ್ಯೂಟರ್, ಏರ್‌ಕೂಲರ್ಸ್, ಲಿಪ್‌ಸ್ಟಿಕ್ ಮತ್ತು ಸೆಂಟ್ ಬಾಟಲಿಗಳಲ್ಲಿ ಉಪಯೋಗಿಸುತ್ತಾರೆ. ಇದರ ಒಂದೇ ಒಂದು ಅಣು ಹತ್ತು ಸಾವಿರ ಇಂಗಾಲಾಮ್ಲ ಅಣುಗಳು ಮಾಡುವ ಕೆಲಸ ಮಾಡುತ್ತದೆ! ಇವೆಲ್ಲ ಸೇರಿ ಓಝೋನ್ ಪದರವನ್ನು ಛಿದ್ರಗೊಳಿಸುತ್ತಿವೆ.

**ಅಪಾಯಗಳ ಸರಮಾಲೆ**

ಓಝೋನ್ ರಂಧ್ರಗಳಿಂದಾಗಿ ಭೂಮಿಯ ತಾಪ ಏರಿದಂತೆ ಅಪಾಯಗಳ ಸರಮಾಲೆಯೇ ಬಿಚ್ಚಿಕೊಳ್ಳಬಹುದು. ಅವುಗಳೆಂದರೆ-

- ಈ ಶತಮಾನದ ಪ್ರಾರಂಭಿಕ ದಶಕಗಳಲ್ಲಿ ಪೃಥ್ವಿಯ ಉಷ್ಣಾಂಶ ಪ್ರತಿ ದಶಕಕ್ಕೆ ಸರಾಸರಿ ೦.೫°-೧°ಸೆ.ನಷ್ಟು ಹೆಚ್ಚಬಹುದೆಂದು ಹವಾಮಾನ ತಜ್ಞರು ಅಂದಾಜು ಮಾಡಿದ್ದಾರೆ. ಈ ಪ್ರಕಾರ ಈ ಶತಮಾನದ ಕೊನೆಯ ವೇಳೆಗೆ ೫° ಸೆ. ಉಷ್ಣಾಂಶ ಏರಿಕೆಯಾಗುವ ಸಂಭವವಿದೆ. ಈಗಾಗಲೇ ಏರಿರುವ ತಾಪದಿಂದ ಕೃಷಿ ಬೆಳೆಗಳಿಗೆ ರೋಗ ತಗುಲಿದೆ. ಸಸ್ಯ ಮತ್ತು ಪ್ರಾಣಿ ಸಂಕುಲಗಳು ಬಿಸಿಲಿನ ತಾಪಕ್ಕೆ ಹೊಂದಿಕೊಳ್ಳಲು ಅಸಮರ್ಥವಾಗುತ್ತಿವೆ. ಮಳೆ ಕಡಿಮೆಯಾಗಿದೆ. ಅರಣ್ಯಗಳ ಕಾಡ್ಗಿಚ್ಚು ಸಸ್ಯ ಮತ್ತು ಅರಣ್ಯ ಜೀವಿಗಳನ್ನು ಭಸ್ಮ ಮಾಡುತ್ತಿದೆ. ಆದುದರಿಂದ ಮುಂದಿನ ೨೫ ವರ್ಷಗಳಲ್ಲಿ ಭೂಗೋಳದಲ್ಲಿರುವ ಶೇ. ೧೫ರಷ್ಟು ಜೀವಿಗಳು ಶಾಶ್ವತವಾಗಿ ನಾಶಹೊಂದಬಹುದೆಂದು

ಜೀವಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ.

❐ ಹೆಚ್ಚಾಗುವ ಗೋಳದ ತಾಪ ಉಷ್ಣ ಮತ್ತು ಸಮಶೀತೋಷ್ಣವಲಯ ಪ್ರದೇಶಗಳಲ್ಲಿ ವಾಸಿಸುವ ಜನರಲ್ಲಿ ಚರ್ಮ ಕ್ಯಾನ್ಸರ್ ರೋಗವನ್ನು ಉಲ್ಬಣಿಸಬಹುದು. ಹೆಚ್ಚಾಗಬಹುದಾದ ಧ್ರುವಗಳ ಶೀತ ಪ್ರವಾಹಗಳು ಸಾಗರಗಳಲ್ಲಿ ಮೀನುಗಳ ಮುಖ್ಯ ಆಹಾರವಾದ ಫ್ಲಾಂಕ್ಟನ್ ಏಕಕೋಶ ಜೀವಿಗಳ ಉತ್ಪತ್ತಿಯ ಮೇಲೆ ದುಷ್ಪರಿಣಾಮ ಬೀರಬಹುದು.

❐ ಭೂಮಿಯ ತಾಪ ಏರಿದಂತೆ ಸಮುದ್ರದ ನೀರು ಹಿಗ್ಗಿ ನೀರಿನ ಮಟ್ಟ ಏರಬಹುದು. ಅದರ ಜೊತೆಯಲ್ಲಿಯೇ ಅಂಟಾರ್ಕ್‌ಟಿಕಾದ ವಿಶಾಲ ಹಿಮಗಡ್ಡೆಗಳು ಕರಗಿ ಸಮುದ್ರದಲ್ಲಿ ವಿಲೀನವಾಗಿ ಸಾಗರಗಳ ನೀರಿನಮಟ್ಟ ಕೆಲವು ಮೀಟರ್‌ಗಳವರೆಗೆ ಏರುವ ಸಾಧ್ಯತೆಯಿದೆ. ಕರಾವಳಿಯ ಬಾಂಗ್ಲಾದೇಶದ ಬಹುಭಾಗ, ಲಕ್ಷದ್ವೀಪ ಮತ್ತು ದಕ್ಷಿಣದ ನೆರೆಯ ದೇಶಗಳು ಮತ್ತು ಮಾಲ್ಡೀವ್ಸ್ ಪೂರ್ತಿಯಾಗಿ ಸಮುದ್ರದಲ್ಲಿ ಮುಳುಗಬಹುದು. ಶಾಂಘೈನಿಂದ ಸ್ಯಾನ್‌ಫ್ರಾನ್ಸಿಸ್ಕೋವರೆಗೆ, ಗ್ರೀನ್‌ಲ್ಯಾಂಡ್, ಐಸ್‌ಲ್ಯಾಂಡ್, ನಾರ್ವೆ, ಸ್ವೀಡನ್, ಫಿನ್‌ಲ್ಯಾಂಡ್, ಸೈಬೀರಿಯಾ ಮತ್ತು ಅಲಾಸ್ಕಾಗಳು ಇದರ ಪರಿಣಾಮ ಎದುರಿಸಬೇಕಾಗುತ್ತದೆ. ಇದರಿಂದ ಜನಜೀವನ ಅಸ್ತವ್ಯಸ್ತವಾಗಬಹುದು. ನೆರೆಹಾವಳಿ ವಿಪರೀತವಾಗಬಹುದು. ವಾಯುಗುಣ ಬದಲಾಗಬಹುದು. ಎಲ್‌ನಿನೊ ಸಮಸ್ಯೆ ಸಾಮಾನ್ಯವಾಗಬಹುದು. ಉತ್ತರ ಅಮೆರಿಕಾದಂತಹ ಹಸಿರು ಪ್ರದೇಶಗಳು ಒಣ ಭಾಗಗಳಾಗಿ ಪರಿವರ್ತನೆಯಾಗಬಹುದು. ಬಿರುಗಾಳಿ ಸಾಮಾನ್ಯವಾಗಬಹುದು.

❐ ಕರಾವಳಿ ಕೊರೆತ ಮತ್ತು ಮುಳುಗಡೆಯಿಂದ ಭಾರತ, ಬಾಂಗ್ಲಾದೇಶ, ಈಜಿಪ್ಟ್, ವಿಯಟ್ನಾಂಗಳಂತಹ ಬಡರಾಷ್ಟ್ರಗಳ ಆರ್ಥಿಕ ಪರಿಸ್ಥಿತಿಯು ಹದಗೆಡಬಹುದು. ಕೋಲ್ಕತಾ, ಢಾಕಾದಂತಹ ಹಲವು ಬಂದರು ಮತ್ತು ರೇವು ಪಟ್ಟಣಗಳು ಮುಳುಗಡೆಯಾಗಿ ಜಾಗತಿಕ ಸಾಗರೀಕ ವ್ಯಾಪಾರ ವಹಿವಾಟುವಿಗೆ ಪೆಟ್ಟು ಬೀಳಬಹುದು. ಕರಾವಳಿಯ ಮೀನುಗಾರರು ನಿರಾಶ್ರಿತರಾಗಬಹುದು.

❐ ವಾತಾವರಣದಲ್ಲಿ ಇಂಗಾಲ ಮತ್ತು ಇತರ ಅನಿಲಗಳು ಸತತವಾಗಿ ಹಾಗೆಯೇ ಏರುತ್ತಿದ್ದರೆ, ಮುಂದೊಂದು ದಿನ ಆ ಅನಿಲಗಳು ಸೂರ್ಯನ ಶಾಖ ಭೂಮಿಗೆ ಬಾರದಂತೆ ತಡೆಯಬಹುದು. ಇದರಿಂದ ಪೃಥ್ವಿಯ ಉಷ್ಣಾಂಶ ಕ್ರಮೇಣ ಕಡಿಮೆಯಾಗುತ್ತಾ ಬಂದು ಜಲಭಾಗಗಳೆಲ್ಲವೂ ಹೆಪ್ಪುಗಟ್ಟಿ ಶೀತಲ ಯುಗವು ನಿರ್ಮಾಣವಾಗಲೂಬಹುದು ಎಂದು ವಿಜ್ಞಾನಿಗಳು ಅಭಿಪ್ರಾಯಪಟ್ಟಿದ್ದಾರೆ.

ಅತಿ ಹೆಚ್ಚು ಇಂಗಾಲಾಮ್ಲ ಬಿಡುಗಡೆ ಮಾಡುವ ದೇಶಗಳು
(ಮಿಲಿಯನ್ ಟನ್ನುಗಳಲ್ಲಿ) ೧೯೯೬-೯೭

| ದೇಶ | ಮಿಲಿಯನ್ ಟನ್ |
|---|---|
| ಅಮೆರಿಕ | ೪೮೮೧ |
| ಚೀನಾ | ೨೬೬೭ |
| ರಷ್ಯಾ | ೨೧೬೫ |
| ಜಪಾನ್ | ೧೬೯೫ |
| ಜರ್ಮನಿ | ೮೦೮ |
| ಭಾರತ | ೭೬೯ |

ಕೃಪೆ : ಅಂಕಿ ಅಂಶಗಳು ವರ್ಲ್ಡ್ ರಿಸೋರ್ಸಸ್ ೧೯೯೬-೯೭

❐ ಅಮೆರಿಕಾದ ವಿಜ್ಞಾನಿ ಜಾರ್ಜ್ ವುಡ್‌ವೆಲ್‌ರವರು ವಾತಾವರಣದಲ್ಲಾಗುತ್ತಿರುವ ವೈಪರೀತ್ಯ ನೋಡಿ, ಮಾನ್ಸೂನ್ ಪ್ರದೇಶಗಳಲ್ಲಿ ಮುಂಗಾರು ಮಳೆಯು ಅನಿಶ್ಚಿತವಾಗಬಹುದೆಂದು ಭವಿಷ್ಯ ನುಡಿದಿದ್ದಾರೆ. ಪ್ರಸ್ತುತ ನಮ್ಮನ್ನು ಕಾಡುತ್ತಿರುವ ಬರಗಾಲ ಮತ್ತು ಅತೀವೃಷ್ಟಿ ಅವರ ಮಾತನ್ನು ಪುಷ್ಟೀಕರಿಸಬಹುದೆ ?

**೧೯೮೭ರ ಮಾಂಟ್ರಿಯಲ್ ಪ್ರೋಟೋಕಾಲ್**

೧೯೮೦ರಲ್ಲಿ ಜೀವರಕ್ಷಕ ಓಝೋನ್ ಪದರ ಹರಿದಿರುವುದು ಪತ್ತೆಯಾದ ಮೇಲೆ ಅದರ ಚೇತರಿಕೆಗಾಗಿ ಕ್ರಮ ತೆಗೆದುಕೊಳ್ಳಲು ೧೯೮೭ರಲ್ಲಿ ಕೆನಡಾದ ಮಾಂಟ್ರಿಯಲ್‌ನಲ್ಲಿ ಪ್ರಮುಖ ರಾಷ್ಟ್ರಗಳ ವಿಜ್ಞಾನಿ ಪ್ರತಿನಿಧಿಗಳು ಸಭೆ ಸೇರಿ ಜಾರಿಗೆ ತಂದ ಐತಿಹಾಸಿಕ ಒಪ್ಪಂದವೇ ೧೯೮೭ರ ಮಾಂಟ್ರಿಯಲ್ ಪ್ರೋಟೋಕಾಲ್. ಅದೇನೆಂದರೆ - ಓಝೋನ್ ಪತನಕ್ಕೆ ಕಾರಣವಾಗಿರುವ $CFC_s$ ಗುಂಪಿನ ಅನಿಲಗಳ ಬಳಕೆ ಮತ್ತು ಉತ್ಪಾದನೆಯನ್ನು ಒಂದು ನಿರ್ದಿಷ್ಟ ಕಾಲಮಿತಿಯಲ್ಲಿ ಎಲ್ಲಾ ರಾಷ್ಟ್ರದವರೂ ಸೇರಿ ಕಡಿತಗೊಳಿಸಬಹುದಾಗಿದೆ.

ಈ ಒಪ್ಪಂದವನ್ನು ಜಾರಿಗೊಳಿಸಲು ವರ್ಲ್ಡ್ ಮೀಟ್ರೊಲಾಜಿಕಲ್ ಆರ್ಗನೈಜೇಷನ್ (WMO) ಯುನೈಟೆಡ್ ನೇಷನ್ಸ್ ಎನ್ವಿರಾನ್‌ಮೆಂಟ್ ಪ್ರೋಗ್ರಾಮ್ (UNEP)ಗಳು ಪ್ರತಿ ವರ್ಷ ಸಭೆ ಸೇರಿ ಮಾಂಟ್ರಿಯಲ್ ಒಪ್ಪಂದದ ಜಾರಿಯ ಪ್ರಗತಿ ಮತ್ತು ಓಝೋನ್ ಸ್ಥಿತಿಯ ಪುನರ್ ಪರಿಶೀಲನೆ ನಡೆಸುತ್ತಿದ್ದು ಇದರ ಪ್ರಗತಿಪರ ತೀರ್ಮಾನಗಳನ್ನು ಅನುಷ್ಠಾನಕ್ಕೆ ತರಲು ಒತ್ತಾಯಿಸಲಾಗುತ್ತಿದೆ. ಅವು ಈ ಮುಂದಿನಂತಿವೆ –

❐ $CFC_s$ ಗುಂಪಿನ ಅನಿಲಗಳ ಅನಧಿಕೃತ ವ್ಯಾಪಾರ ವಹಿವಾಟನ್ನು ಪ್ರಪಂಚ ದಾದ್ಯಂತ ನಿಗ್ರಹಿಸುವುದು.

**ವಾಯುಮಂಡಲದಲ್ಲಿ ಓಝೋನ್ ಮತ್ತು ಇತರ ಅನಿಲಗಳ ಪ್ರಮಾಣ**

| ಅನಿಲಗಳು | ಶೇಕಡಾ ಪ್ರಮಾಣ |
|---|---|
| ಸಾರಜನಕ ($N_2$) | ೭೮.೦೮ |
| ಆಮ್ಲಜನಕ ($O_2$) | ೨೦.೯೪ |
| ಆರ್ಗಾನ್ (Ar) | ೦.೯೩ |
| ಇಂಗಾಲಾಮ್ಲ ($CO_2$) | ೦.೦೩ |
| ನಿಯಾನ್ (Ne) | ೦.೦೦೧೮ |
| ಹೀಲಿಯಂ (He) | ೦.೦೦೦೫ |
| ಓಝೋನ್ ($O_3$) | ೦.೦೦೦೦೬ |
| ಜಲಜನಕ (H) | ೦.೦೦೦೦೫ |

ಕೃಪೆ : ಡಾ|| ರಂಗನಾಥ, ಪ್ರಾಕೃತಿಕ ಭೂಗೋಳ ಶಾಸ್ತ್ರದ ಮೂಲತತ್ವಗಳು. ಪು. ೨೨೦

❐ ಔಷಧಿಗಳ ತಯಾರಿಕೆಯಲ್ಲಿ ಬಳಸಲಾಗುವ $CFC_s$ ಸಮೂಹವನ್ನು ನಿಷೇಧಿಸುವುದು. ಉದಾ: ಆಸ್ತಮಾ ರೋಗಕ್ಕೆ ಬಳಸುವ ಇನ್‌ಹೇಲರ್ಸ್‌ಗಳಲ್ಲಿ $CFC_s$ ಮತ್ತು ಇತರೇ ಔಷಧಿಗಳಲ್ಲಿ ಬಳಸುವ ಮೀಥೇಲ್ ಬ್ರೋಮೈಡ್ ನಿಷೇಧ.

❐ ಮೀಥೇಲ್ ಒಳಗೊಂಡಿರುವ ಕೀಟನಾಶಕಗಳ ಉತ್ಪಾದನೆಯನ್ನು ಅಭಿವೃದ್ಧಿ ರಾಷ್ಟ್ರಗಳು ಇಸವಿ ೨೦೦೫ ಮತ್ತು ಹಿಂದುಳಿದ ರಾಷ್ಟ್ರಗಳು ೨೦೧೫ರ ಒಳಗಾಗಿ ನಿಲ್ಲಿಸಬೇಕೆಂದು ತೀರ್ಮಾನಿಸಲಾಗಿದೆ. ಹಿಂದುಳಿದ ದೇಶಗಳ ರೈತರಿಗೆ ಬದಲೀ ವ್ಯವಸ್ಥೆಯನ್ನು ಮಾಡಿಕೊಳ್ಳಲು ಹಣಕಾಸಿನ ಸಹಾಯವನ್ನು ನೀಡುವುದೂ ಸೇರಿದೆ.

❐ ೨೦೦೫ರ ಒಳಗಾಗಿ ಕಾರ್ಬನ್ ಟೆಟ್ರಾಕ್ಲೋರೈಡ್ ಮತ್ತು ಮೀಥೇಲ್ ಕ್ಲೋರೋಫಾರಂಗಳ ಬಳಕೆ ಮತ್ತು ಉತ್ಪಾದನೆಯನ್ನು ಸಂಪೂರ್ಣವಾಗಿ ನಿಲ್ಲಿಸುವುದು.

❐ HCFC ಬಳಕೆಯನ್ನು ೨೦೦೪ರ ಸಮಯಕ್ಕೆ ಶೇ. ೩೫ರಷ್ಟು, ೨೦೧೦ರ ವೇಳೆಗೆ ಶೇ. ೬೫ರಷ್ಟು ಮತ್ತು ೨೦೧೫ರ ಸಮಯಕ್ಕೆ ಶೇ. ೯೦ರಷ್ಟು ಕಡಿತಗೊಳಿಸಿ ಹಾಗೂ ೨೦೩೦ರ ಸಮಯಕ್ಕೆ ಎಲ್ಲಾ CFCS ಸಮೂಹಗಳ ಬಳಕೆ ಮತ್ತು ಉತ್ಪಾದನೆಯನ್ನು ಸಂಪೂರ್ಣವಾಗಿ ನಿಷೇಧಿಸಬೇಕೆಂದು ತೀರ್ಮಾನಿಸಲಾಗಿದೆ.

ಈ ಮೇಲಿನ ಎಲ್ಲಾ ಕ್ರಮಗಳನ್ನು ಅನುಷ್ಠಾನಗೊಳಿಸಿದ್ದೇಯಾದರೆ ಈ ಶತಮಾನದ ಮಧ್ಯದ ವೇಳೆಗೆ ಓಝೋನ್ ಪದರ ಸುಸ್ಥಿತಿಗೆ ಬರಬಹುದು. ಈ ಧರೆಯ ಸಮಸ್ತ ಸಸ್ಯ ಮತ್ತು ಜೀವಿಗಳ ಉಳಿವಿಗೆ ಓಝೋನ್ ಪದರವನ್ನು ಸಂರಕ್ಷಿಸಬೇಕು. ಶಕ್ತಿಯ ಮೂಲವಾಗಿ ಸೌರಶಕ್ತಿಯನ್ನು ಹೆಚ್ಚಾಗಿ ಅವಲಂಬಿಸುವುದಾದರೆ ಹಲವು ಸಮಸ್ಯೆಗಳಿಗೆ ಪರಿಹಾರ ಸಿಗಬಹುದು.

**ಮಾಹಿತಿ ಕೃಪೆ:** ಎನ್‌ಸೈಕ್ಲೋಪೀಡಿಯಾ ಬ್ರಿಟಾನಿಕ ೨೦೦೧; ಓಝೋನ್ ವರದಿಗಳು ಮತ್ತು ಇತರ ಮೂಲಗಳು.

**ಡಾ|| ದಯಾನಂದ**
ಮಹಾರಾಣಿ ಸರ್ಕಾರಿ ಪದವಿ ಪೂರ್ವ ಕಾಲೇಜು, [illegible]

# ಬಂಡಾಯ ಮಹಿಳಾ ಸಂವೇದನೆ

**ಡಾ|| ವಿನಯಾ**

ವ್ಯವಸ್ಥೆಯ ವಿರುದ್ಧದ ಪ್ರತಿಭಟನೆ ಬಂಡಾಯ ಎನ್ನುವುದಾದರೆ, ಕನ್ನಡದಲ್ಲಿ ಮಹಿಳಾ ಸಂವೇದನೆಯ ಮೂಲ ಸೆಲೆ ಬಂಡಾಯ ಮನೋಧರ್ಮದ್ದಾಗಿದೆ.

ಬೇಟೆಯಿಂದ ಬೇಸಾಯಕ್ಕೆ ಹೊರಳಿದ ಮಾನವ ಚರಿತ್ರೆ ಉತ್ಪಾದಕ-ಅನುತ್ಪಾದಕ ಎಂಬ ಅವ್ಯವಹಾರಿಕ ಶ್ರಮ ವಿಭಜನೆಯನ್ನು ಹುಟ್ಟುಹಾಕಿತು. ಮಹಿಳೆ ಮಾನವ ಗುಲಾಮಳಾಗಿ ಇತಿಹಾಸದಲ್ಲಿ ದಾಖಲಾದಳು. ಸಮಾಜೋ-ಆರ್ಥಿಕ ರಚನೆ ಪುರುಷ ಹಿತಾಸಕ್ತವಾದುದರಿಂದ ಭಾಷೆ-ಸಾಹಿತ್ಯ-ಸಂಸ್ಕೃತಿಗಳಲ್ಲಿ ಏಕಮುಖಿ ಚಲನೆ ಆರಂಭ ವಾಯ್ತು. ಮಹಿಳಾ ಸಂವೇದನೆ ಸಾಂಸ್ಕೃತಿಕ ಸಂರಚನೆಯ ಆಚೆಯೇ ಉಳಿಯಿತು.

ಮಹಿಳಾ ಸಂವೇದನೆಯ ಮೊದಲ ದಾಖಲೆಯಾದ ಜಾನಪದ ಸಾಹಿತ್ಯ ಹೆಣ್ಣಿನ ತಪ್ತತೆಯನ್ನು ಹೇಳುತ್ತದೆ. 'ಹೆಣ್ಣಾಗಿರೋದಕ್ಕಿಂತ ಮಣ್ಣಾಗಿರೋದು ಲೇಸು' ಎಂಬ ಪಿಸುಗು ತನ್ನ ಸ್ಥಿತಿಯ ನಿವೇದನೆಯಷ್ಟೇ ಅಲ್ಲ; ಹೆಣ್ಣನ್ನು ಮಣ್ಣಿನಂತೆ ತುಳಿದ ಸ್ಥಿತಿಗತಿಗಳ ಕುರಿತ ಎಚ್ಚರವನ್ನೂ ಧ್ವನಿಸುತ್ತದೆ. ಈ ಎಚ್ಚರ ತಣ್ಣನೆಯ ಪ್ರತಿಭಟನೆಯಾಗಿ ರೂಪು ಗೊಂಡಿದೆ. ಜಾನಪದ ಮಹಿಳಾ ಸಂವೇದನೆ ವ್ಯವಸ್ಥೆಯೊಂದಿಗೆ ರಾಜಿ ಮಾಡಿ ಕೊಂಡಿದೆಯೇ ಹೊರತು ಅಪ್ರಶ್ನಾರ್ಹವಾಗಿ ಒಪ್ಪಿಕೊಳ್ಳಲಿಲ್ಲ.

*ಹೆಣ್ಣು ಹುಟ್ಟ್ಯಾದಂತ ಹೇಳಿ ಕಳುಹಲು ಬ್ಯಾಡ*
*ಹೆಣ್ಣೆಂದರವರು ಹೆದರ್‍ಯಾರ / ಕಂದಮ್ಮ*
*ಹೆಣ್ಣಲ್ಲ ನಮಗ ರವಿ ಚಿನ್ನ //*

ಹೆಣ್ಣಿನ ಹುಟ್ಟನ್ನು ತಿರಸ್ಕರಿಸುವ ಕೌಟುಂಬಿಕ-ಸಾಮಾಜಿಕ ಚೌಕಟ್ಟಿನ ಪರಿವೆಯಿದ್ದೂ, ತನ್ನ ಭಾವಲೋಕವನ್ನು ಸ್ಪಷ್ಟಪಡಿಸಿ ಪ್ರಧಾನ ಚಿಂತನವಿಧಾನದಿಂದ ಪ್ರತ್ಯೇಕತೆಯನ್ನು ಕಾದುಕೊಳ್ಳುವ ಪರಿ ವಿಶಿಷ್ಟವಾಗಿದೆ. ಜೈವಿಕ ಭೇದ ಸಾಂಸ್ಕೃತಿಕ ಭೇದವಾಗಿ ರೂಪು ಗೊಂಡ ವ್ಯವಸ್ಥೆಯಲ್ಲಿ ಸಂವೇದನೆಯ ನೆಲೆಗಳು ಪ್ರತ್ಯೇಕಗೊಂಡಿದ್ದನ್ನು ಮಹಿಳಾ ಸಂವೇದನೆ ಗ್ರಹಿಸಿದೆ. 'ಹೆಣ್ಣು ಮಕ್ಕಳ ದುಃಖ ಹೆತ್ತವ್ವ ಬಲ್ಲಳು'–ಎನ್ನುವಾಗ ಪರಂಪರಾಗತವಾಗಿ ಸಂವೇದನೆಗಳು ವಿಭಜಿತ ಸ್ವರದಲ್ಲೇ ಮುಂದುವರಿದಿದ್ದನ್ನು ಹೇಳಲಾಗಿದೆ. ಅಧಿಕಾರವಿಹೀನ ಸಮುದಾಯದ ಅತೃಪ್ತಿ-ಅಸುಖ-ಕನಸು-ಕಲ್ಪನೆಗಳು ಪ್ರತ್ಯೇಕತೆಯನ್ನು ಪಡೆದಿವೆ. ಪ್ರಧಾನ ಪರಂಪರೆಗೆ ಈ ಸಂವೇದನೆಯನ್ನು ಜೀರ್ಣಿಸಿಕೊಳ್ಳುವುದು ಸಾಧ್ಯವಾಗಿಲ್ಲ. ಜನಪದ ಕಥೆಗಳಲ್ಲಿ ದೈಹಿಕ ಅಶಕ್ತತೆಯ ಪ್ರಾಣಿಗಳು ಬಲಿಷ್ಠ ಪ್ರಾಣಿಗಳನ್ನು ಉಪಾಯದಿಂದ ಜಯಿಸುವುದು – ಅಶಕ್ತತೆಯನ್ನು ಒಪ್ಪಿತ ಸ್ಥಿತಿಯಾಗಿಸಿಕೊಂಡ ಮಹಿಳಾ ಸಂವೇದನೆ ಕಂಡುಕೊಂಡ ಬಿಡುಗಡೆಯ ನೆಲೆಯಾಗಿದೆ.

ಪ್ರಧಾನ ವಾಹಿನಿಯೊಂದಿಗೆ ಮಹಿಳಾ ಸಂವೇದನೆ ಕೈಜೋಡಿಸಿದ ಮೊದಲ ಉದಾಹರಣೆ ಕನ್ನಡದ ಮಟ್ಟಿಗೆ ವಚನಕಾರ್ತಿಯರದ್ದು. ಸಮಾನತೆಯ ಮೊದಲ ಧ್ವನಿ ಈ ನೆಲದಲ್ಲಿ ರೂಪುಗೊಂಡ ಹೊತ್ತಲ್ಲಿ ಮಹಿಳಾ ಸಂವೇದನೆ ಸಶಕ್ತ ಬಂಡಾಯದ ಸ್ವರೂಪದಲ್ಲಿತ್ತು. ದೇಹಬದ್ಧ ಚಿಂತನಾ ಕ್ರಮಗಳನ್ನು ಜೀವಬದ್ಧತೆಯೆಡೆಗೆ ಹೊರಳಿಸಿದ್ದು ವಚನಕಾರರ ಸಾಧನೆ.

*ಮೊಲೆ ಮುಡಿ ಇದ್ದುದು ಹೆಣ್ಣೆಂದು ಪ್ರಮಾಣಿಸಲಿಲ್ಲ*
*ಮೀಸೆ ಕಾಸೆ ಕಠಾರವಿದ್ದುದೆ ಗಂಡೆಂದು ಪ್ರಮಾಣಿಸಲಿಲ್ಲ*
*ಅದು ಜಗದ ಹ್ಞಾಗೆ, ಬಲ್ಲವರ ನೀತಿಯಲ್ಲ.*

– ಈ ಸ್ಪಷ್ಟತೆ ಹೊಸ ಹೊಳಹುಗಳಿಗೆ ಕಾರಣವಾಯಿತು. ವ್ಯವಸ್ಥೆ ರೂಪಿಸಿದ 'ಪೂರಕ' ಪಾತ್ರವನ್ನು ಮೀರುವ ಹಂಬಲ ವ್ಯಕ್ತವಾಯ್ತು. ಹೆಣ್ಣೆಂಬ ಕಾರಣಕ್ಕಾಗಿ 'ಆಯ್ಕೆ'ಯ ಹಕ್ಕೇ ಇಲ್ಲದ ನೋವನ್ನು ಕೊಗ್ಗವ್ವೆ ಹೇಳುತ್ತಾಳೆ. ಪ್ರಧಾನ ಪರಂಪರೆಯೊಂದಿಗಿನ ನೇರ ಮುಖಾಮುಖಿಯಲ್ಲಿ ವಚನಕಾರ್ತಿಯರ ಬಂಡಾಯ ಪ್ರಜ್ಞೆಯಿದೆ. 'ಪತಿಯಾಜ್ಞೆಯಲಿ ಪತಿಕರದಲಿ ಪೋಪದಿರೆ ಯಾತನೆಯಲ್ಲವೇ ?' ಎಂಬ ಗಂಗಾಂಬಿಕೆಯ ಪ್ರಶ್ನೆಯಿಂದ, 'ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು' – ಎಂಬ ಮಹಾದೇವಿಯಕ್ಕನ ನಿರ್ಧಾರ ದವರೆಗೂ ಈ ಪ್ರಜ್ಞೆಯು ವ್ಯಾಪ್ತಿಸಿದೆ. 'ನನ್ನ ಕಾಲಿನ ಮುಳ್ಳ ನಾನೇ ತೆಗೆಯಬೇಕಲ್ಲದೆ ಇನ್ನರಲ್ಲ' – ಎಂಬ ವಚನಕಾರ್ತಿಯರ ಅರಿವು ಆಧುನಿಕ ಮಹಿಳಾ ಸಂವೇದನೆಯ ಆದ್ಯತೆಯಾಗಿ ಮುಂದುವರಿಯಿತು.

ಇಪ್ಪತ್ತನೆಯ ಶತಮಾನದ ವಸಾಹತುಶಾಹಿ ವ್ಯವಸ್ಥೆ ಸ್ವಾತಂತ್ರ್ಯ ಸಂಗ್ರಾಮ, ಸಾರ್ವತ್ರಿಕ ಶಿಕ್ಷಣ, ಕೈಗಾರಿಕೀಕರಣ, ರಾಷ್ಟ್ರೀಯ ಪುನರುತ್ಥಾನವಾದಿ ಚಳುವಳಿಗಳು ಮಹಿಳೆಯ ಸಾಂಸ್ಕೃತಿಕ ಅಸ್ಪೃಶ್ಯತೆಯನ್ನ ಸಾಂಕೇತಿಕವಾಗಿ ನಿವಾರಿಸಿದವು. ಈ ಸಂದರ್ಭದ ಮಹಿಳಾ ಸಂವೇದನೆ ಜಾನಪದ ಮಹಿಳಾ ಸಾಹಿತ್ಯ ಮತ್ತು ವಚನಕಾರ್ತಿಯರಲ್ಲಿ ತನ್ನ ಅನನ್ಯತೆ ಯನ್ನು ರೂಪಿಸಿಕೊಂಡಿದೆ. ಸಾಹಿತ್ಯದ ಪ್ರಧಾನ ಪರಂಪರೆಯಿಂದ ಮತ್ತು ಸಮಕಾಲೀನ ಆಶಯಗಳಿಂದ 'ದೂರ'ವನ್ನು ಸಾಧಿಸಿಕೊಂಡಿದೆ.

ಹಾಗಾಗಿ ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ ಎಂಬ ಸಿದ್ಧ ವಿಂಗಡಣಾ ಕ್ರಮದಲ್ಲಿ ಮಹಿಳಾ ಸಂವೇದನೆಯನ್ನು ವಿಶ್ಲೇಷಿಸುವುದು ಸಾಧ್ಯವಿಲ್ಲ. ಕನ್ನಡ ನವೋದಯ ಪರಂಪರೆ ಹೆಣ್ಣಿನ ಆದರ್ಶದ ರೂಪ ನಿರ್ವಚನದಲ್ಲಿ ತೊಡಗಿದಾಗ, ಲೇಖಕಿಯರು ಹೆಣ್ಣಿನ ಸಮಸ್ಯೆ ಮತ್ತು ಏಕಮುಖಿ ಒತ್ತಡದ ಬಗ್ಗೆ ಮಾತಾಡುವುದನ್ನು ಆದ್ಯತೆಯಾಗಿ ಸ್ವೀಕರಿಸುತ್ತಾರೆ. ಪ್ರಧಾನ ಸಾಹಿತ್ಯ ದಾಂಪತ್ಯವನ್ನು ಗೃಹದೇವತೆಯನ್ನು ವೈಭವಿಸುತ್ತಿದ್ದಾಗ ಬೆಳಗೆರೆ ಜಾನಕಮ್ಮನಂಥ ಕವಯಿತ್ರಿ ತುಂಬ ಭಿನ್ನವೆನಿಸುವ ಅಪ್ಪಟ ಸ್ತ್ರೀ ನೆಲೆಯ ಚಿತ್ರಣವನ್ನು ಕೊಡುತ್ತಾರೆ.

*ಹೆಣ್ಣೆ ನೀ ಗಂಡನ ಕೂಡಿಕೊಂಡ್ಯ*
*ನೋಡು ಮಂಡೂಕ ಸರ್ಪದ ನೆಳಲಿಗೆ ಹೋದಂತೆ*
*ಬಂಡಿಗೆ ಬಸವನು ಶಿರಬಾಗಿಕೊಂಡಂತೆ.*

ಹೆಣ್ಣಿನ ಅನುಭವ ಪ್ರತ್ಯೇಕವಾಗಿಯೇ ಉಳಿದುಬಿಟ್ಟಿದೆ ಎಂಬ ಸತ್ಯವನ್ನು ಗ್ರಹಿಸಲಾಗಿದೆ.

*ಪೆತ್ತವರಿಗೆ ನೀ ಬೇರೆ ನಿನಗೆ ನೀನೆ ಬೇರೆ*
*ಜಗವನ್ನ ಜಗವನ್ನ ನಿನದೆಂಬುದು ಶೂನ್ಯ*
*ದುಷ್ಟ ಧರ್ಮಗಳೆಲ್ಲ ಕ್ರೂರ ಕರ್ಮಗಳೆಲ್ಲ*
*ಅಡಿಗಡಿಗೊಂದುಪಾಯವ ಹೊಂಚುತ್ತಿವೆ.*

ಹೊಸಗನ್ನಡದ ಮೊದಲ ಕಾದಂಬರಿಗಳಾದ 'ಇಂದಿರಾಬಾಯಿ', 'ವಾಗ್ದೇವಿ'ಗಳು ವಿಧವಾ ವಿವಾಹವನ್ನು ಪ್ರತಿಪಾದಿಸುತ್ತವೆ. ಆದರೆ ತಿರುಮಲಾಂಬಾ, ಕಲ್ಯಾಣಮ್ಮನವರು ಬರೆದ ಮೊದಲ ಮಹಿಳಾ ಕಾದಂಬರಿಗಳು ವೈಧವ್ಯದ ದುರಂತವನ್ನು ಚಿತ್ರಿಸುತ್ತವೆ. ಮರು ವಿವಾಹವೊಂದನ್ನೇ ಅದರ ಪರಿಹಾರವಾಗಿ ಸ್ವೀಕರಿಸುವುದಿಲ್ಲ. ವಿಧವೆ-ಸಧವೆ ಎಂಬುದು ಪುರುಷ ವ್ಯವಸ್ಥೆಯ ಮೌಲ್ಯಾರೋಪಣವೇ ವಿನಃ ಇದು ಹೆಣ್ಣಿನ ಸಹಜ ಸ್ಥಿತಿಯಲ್ಲ. ವೈಧವ್ಯದ ಕಾರಣಕ್ಕಾಗಿ ಬದುಕಿನ ಸಾಧ್ಯತೆಗಳಿಂದ ವಂಚಿತಳಾಗದೆ, ಅವಮಾನಿತಳಾಗದೆ ಬದುಕುವ ಹಕ್ಕೊತ್ತಾಯವನ್ನು ಈ ಕೃತಿಗಳು ಮಂಡಿಸುತ್ತವೆ.

ಪ್ರಗತಿಶೀಲ ಸಂದರ್ಭ ಶೋಷಣೆಯ ವಿರುದ್ಧದ ಧ್ವನಿಯಾಗಿದ್ದರೂ ಹೆಣ್ಣನ್ನು ಮೇಲು-ಕೀಳು ಎಂಬ ಸಿದ್ಧಪಡಿಯಚ್ಚಿನಲ್ಲಿಟ್ಟು ಚಿತ್ರಿಸಿತು. ಈ ಪಡಿಯಚ್ಚು ವ್ಯವಸ್ಥೆಯ ಸಾಂಪ್ರದಾಯಿಕ ತೀರ್ಮಾನವಾಗಿತ್ತು. ಈ ಕಪ್ಪು-ಬಿಳುಪು ಛಾಯೆಗಳಿಂದ ಹೆಣ್ಣನ್ನು ಬಿಡಿಸಿ ಸ್ವಂತಿಕೆಯ ರಕ್ತದಾನ ಮಾಡುವ ಮೂಲಕ ವ್ಯಕ್ತಿಗೌರವದ ಪಾತ್ರಗಳನ್ನ ನಿರ್ಮಿಸುವ ಸವಾಲನ್ನ ಮಹಿಳಾ ಸಂವೇದನೆ ಎದುರಿಸಿತು. ಅಸಹನೀಯ ಸ್ಥಿತಿಗಳಲ್ಲೂ ಜೀವಪರ ತುಡಿತಗಳನ್ನು ಕಳೆದುಕೊಳ್ಳದ; ಸೋಲುಗಳಲ್ಲೂ ಧೀಮಂತಿಕೆಯಿಂದ ಬದುಕಿದ ಕಂತಿ, ದ್ಯಾಂವಕ್ಕರಂಥ ಪಾತ್ರಗಳು ಈ ಕಾಲಘಟ್ಟದಲ್ಲಿ ಮಹಿಳಾ ಸಂವೇದನೆಯ ಅಧಿಕೃತ ದಾಖಲೆಗಳಾಗಿವೆ.

ನವ್ಯದ ರೂಪನಿಷ್ಠತೆ ಸಾಂಪ್ರದಾಯಿಕ ವೈಭವೀಕರಣ ಮತ್ತು ಕಾಮಕೇಂದ್ರಿತ ಧೋರಣೆ ಯಲ್ಲಿ ತಲ್ಲೀನವಾದಾಗ ಮಹಿಳಾ ಬಂಡಾಯ ತನ್ನ ಸ್ಪಷ್ಟತೆಯನ್ನು ಪಡೆದಿತ್ತು. ನವ್ಯ ಸಾಹಿತ್ಯ ಹೆಣ್ಣನ್ನು ಲೈಂಗಿಕ ತುಚ್ಛೀಕರಣದ ಮಾದರಿಗಳಾಗಿ, ವಿಕೃತಿಗೆ ಉದಾಹರಣೆಯಾಗಿ ಬಳಸಿ ಕೊಳ್ಳತೊಡಗಿದಾಗ, ಮಹಿಳಾ ಸಂವೇದನೆಯಲ್ಲಿ ಬಂಡಾಯ ಪ್ರಜ್ಞೆ ಸ್ಪಷ್ಟವಾಗ ತೊಡಗಿತು. ಪ್ರಧಾನ ಸಾಹಿತ್ಯದ ಪರಂಪರೆಯಲ್ಲಿ ಬಂಡಾಯ ಘೋಷಿತಗೊಳ್ಳುವು ದಕ್ಕಿಂತ ಮುಂಚೆಯೇ ಮಹಿಳಾ ಬರವಣಿಗೆಯಲ್ಲಿ 'ಶೋಷಣೆ ಬಂಡಾಯ ಇತ್ಯಾದಿ' ಎಂಬಂಥ ಕೃತಿಗಳು ಬಂದಿದ್ದು ಸಾಂಕೇತಿಕ ಮಹತ್ವವನ್ನು ಪಡೆದಿದೆ.

ಸಾಹಿತ್ಯದ ಪ್ರಧಾನ ವಾಹಿನಿಯಲ್ಲಿಯೇ ಶೋಷಿತಪರ ನಿಲುವು ವ್ಯಕ್ತಗೊಂಡಿದ್ದು, ಹತ್ತಿಕ್ಕಲ್ಪಟ್ಟ ಮಹಿಳಾ ಸಂವೇದನೆಯ ಮುಕ್ತ ಅಭಿವ್ಯಕ್ತಿಗೆ ಕಾರಣವಾಯಿತು. ಬದುಕಿನ ಪುರೋಗಾಮಿ ಧೋರಣೆಯಲ್ಲಿ ನಂಬಿಕೆಯಿಟ್ಟ ಸ್ಥಾಪಿತ ವ್ಯವಸ್ಥೆಯ ವಿರುದ್ಧದ ಬಂಡಾಯ ಪ್ರಜ್ಞೆ ಮಹಿಳಾ ಸಂವೇದನೆಯ ಬಹುದಿನದ ಹಸಿವಾಗಿತ್ತು. ಚಾರಿತ್ರಿಕ ಅನಿವಾರ್ಯತೆಯಲ್ಲಿ ರೂಪುಗೊಂಡ ಬಂಡಾಯ ಪರಂಪರಾಗತ ಮಹಿಳಾ ಅನುಭವಗಳಿಗೆ ಮೌಲಿಕತೆ ಯನ್ನು ನೀಡಿತು. ವೈಯಕ್ತಿಕ ನಿವೇದನೆಯಲ್ಲೂ ಸಾಮಾಜಿಕ ಪ್ರತಿನಿಧಿಯಾಗುವ ಅವಕಾಶ ಒದಗಿದ್ದರಿಂದ ಮುಕ್ತ ಅಭಿವ್ಯಕ್ತಿ ಸಾಧ್ಯವಾಯಿತು. ವಚನಕಾರ್ತಿಯರ ಮುಕ್ತತೆ ಮತ್ತು ಪ್ರಾಮಾಣಿಕತೆಯನ್ನು ಮಹಿಳಾ ಸಂವೇದನೆ ಅನುಭವಿಸಿತು. ನವ್ಯ ಮತ್ತು ಬಂಡಾಯ ಕಾಲಘಟ್ಟದ ಮಹಿಳೆಯ ಸಾಮಾಜಿಕ, ರಾಜಕೀಯ, ಆರ್ಥಿಕ ಕ್ಷೇತ್ರ ಗಳಲ್ಲಿ ಗಮನಾರ್ಹ ವ್ಯತ್ಯಾಸಗಳಿಲ್ಲ. ಆದರೆ ಸಂವೇದನೆ ಯಲ್ಲಿ ತೀವ್ರ ವ್ಯತ್ಯಾಸಗಳು ನಡೆದಿವೆ. ಮಹಿಳಾ ಚರಿತ್ರೆ ಯನ್ನು ಕಾಳಜಿ ಮತ್ತು ಪ್ರೀತಿಯಿಂದ ಗ್ರಹಿಸಿದ ಬಂಡಾಯದ ತಿಳುವಳಿಕೆ ಮಹಿಳಾ ಸಂವೇದನೆಯನ್ನು ಪ್ರಭಾವಿಸಿತು. ಹಲವಾರು ಬರಹಗಾರ್ತಿಯರು ನವ್ಯ ಕಾಲದ ಬರವಣಿಗೆಯನ್ನು ತುಂಬ ತಡವಾಗಿ ಬಂಡಾಯ ಸಂದರ್ಭದಲ್ಲಿ ಪ್ರಕಟಿಸಿದರು. ಈ ಹಿರಿಮೆ ಸಲ್ಲುವುದು ಬಂಡಾಯ ಚಳುವಳಿ ಹಾಗೂ ಸಾಹಿತ್ಯಕ್ಕೆ. ಸ್ತ್ರೀವಾದಿ ಚಿಂತನಕ್ರಮ ಹಾಗೂ ಬಂಡಾಯದ ಸಿದ್ಧಾಂತಗಳು ಮಹಿಳಾ ಸಂವೇದನೆ ಪ್ರಧಾನ ಪರಂಪರೆಯೊಂದಿಗೆ ಸಂವಹನಿಸಲು ಯೋಗ್ಯ ವೇದಿಕೆಯನ್ನು ನಿರ್ಮಿಸಿದವು. ಚರಿತ್ರೆಯಲ್ಲಿ ಈ ಜೊತೆಗಾರಿಕೆ ನಡೆದದ್ದು ಎರಡೇ ಎರಡು ಸಂದರ್ಭಗಳಲ್ಲಿ–



ಈ ಶತಮಾನದ ಅಂತ್ಯಕ್ಕೆ ಪ್ರಳಯ ಆಗುವುದು ಗ್ಯಾರಂಟಿ ಅಂದುಬಿಡಿ.. ..ಹೇಗೂ ಆ ವೇಳೆಗೆ ನಾವು ಇರಲ್ಲ!

ಒಂದು ವಚನಕಾರರ ಸಂದರ್ಭ. ಇನ್ನೊಂದು ಬಂಡಾಯದ ಸಂದರ್ಭ.

ಬಂಡಾಯ ಮಹಿಳಾ ಸಾಹಿತ್ಯದ ಸಂವೇದನೆಯ ನೆಲೆಯನ್ನು ಮೂರು ಹಂತಗಳಾಗಿ ಪ್ರತ್ಯೇಕಿಸಬಹುದು –

೧. ನೇರ ಪ್ರತಿಭಟನೆ

೨. ತಾತ್ತ್ವಿಕತೆಯ ಶೋಧ

೩. ಪರ್ಯಾಯ ಚಿಂತನೆಗಳು.

ಇದು ಮಹಿಳಾ ಸಂಕಥನದ ಪ್ರತ್ಯೇಕ ಚರಿತ್ರೆಯಾಗಿದೆ.

೧. ನೇರ ಪ್ರತಿಭಟನೆ : ಮಹಿಳಾ ಸಂವೇದನೆ ಗ್ರಹಿಸಿದ ಮೊದಲ ಅನುಭವ ತನ್ನ ಗುಲಾಮಗಿರಿಯದು. ತುಳಿತದ ಸ್ಥಿತಿ ಬಯಲಾದಂತೆ ಶೋಷಕನ ಪಾತ್ರದಲ್ಲಿ ಕಂಡವನು ಪುರುಷ. ಗಂಡು ಹೆಣ್ಣಿನ ವಿರೋಧಿ ಎಂಬ ಆಲೋಚನೆ ರೂಪುಗೊಂಡಿತು. ಶೋಷಿತ ನೆಲೆಗಳ ಅನಾವರಣ ಮತ್ತು ಆಕ್ರೋಶದ ಪ್ರತಿಭಟನೆ ಈ ಹಂತದ ಮಹಿಳಾ ಸಂವೇದನೆಯ ಅನನ್ಯತೆಯಾಗಿದೆ. ಬಂಡಾಯದ ಆರಂಭದಲ್ಲಿ ದಲಿತ ಸಂವೇದನೆ ಮೇಲ್ವರ್ಗ-ಮೇಲ್ಜಾತಿಗಳ ವಿರುದ್ಧ ಆಕ್ರೋಶವನ್ನು ಹೊಂದಿತ್ತು.

ಇಕ್ರಲಾ ಒದೀರ್ಲಾ
ಆ ಕಳ್ಳ ಸೂಳೆ ಮಕ್ಕಳ ಮೂಳೆ ಮುರೀರ್ಲಾ....

ಎಂಬಷ್ಟು ರೋಷ-ರೊಚ್ಚುಗಳ ಹಿಂದೆ ಚಾರಿತ್ರಿಕ ಒತ್ತಡವಿತ್ತು. ಅದೇ ರೀತಿ ಮಹಿಳಾ ಚಾರಿತ್ರಿಕ ಪ್ರಜ್ಞೆ ಆವೇಶಪೂರ್ಣ ಅಭಿವ್ಯಕ್ತಿಯನ್ನು ಒಳಗೊಂಡಿತು –

ಅಯ್ಯಾ ನನಗೊಂದು ಆಸೆ
ಹಾಗೆ ಹೀಗೆ ಹೆಣ್ಣ ಬುಗುರಿಯಾಡಿಸುವ
ಇವುಗಳ ಕುಂಡಿಗೆ
ಝಾಡಿಸಿ ಒದೆಯಬೇಕು
ಒಮ್ಮೆಯಾದರೂ.

ಪರಂಪರಾಗತವಾಗಿ ದಮನಕ್ಕೊಳಗಾದ ನೋವಿನ ದಾಖಲಾತಿಯಿದು. ಮಹಿಳಾ ಅಭಿವ್ಯಕ್ತಿ ವೈಯಕ್ತಿಕ ಗೊಣಗುವಿಕೆಯಿಂದ ಸಾಮುದಾಯಿಕವಾಗುವ ಬೆರಗನ್ನು ಅನು ಭವಿಸಿತು. ಪಿತೃ ವ್ಯವಸ್ಥೆಯ ಮೌಲ್ಯಗಳಿಂದಾಗಿ ಗಂಡುಮಗುವಿಗಾಗಿ ಪ್ರಾರ್ಥಿಸುತ್ತಿದ್ದ ಹೆಣ್ಣು, ಈ ಹಂತದಲ್ಲಿ ಗಂಡುಮಗುವನ್ನು ನಿರಾಕರಿಸುವ ಹಂತವನ್ನು ತಲುಪಿದ್ದು ಸಂವೇದನೆಯಲ್ಲಿ ನಡೆದ ಸ್ಥಿತ್ಯಂತರವಾಗಿದೆ. ಇದರ ನೇತ್ಯಾತ್ಮಕ ಪರಿಣಾಮ ಏನೇ ಇರಲಿ, ಇಂಥ ಧಿಕ್ಕಾರ ಹುಟ್ಟುವ ವ್ಯವಸ್ಥೆಯ ಕಡೆ ಗಮನ ಹರಿಯುತ್ತದೆ. ಗೀತಾ ನಾಗಭೂಷಣರವರ 'ಹಸಿಮಾಂಸ ಮತ್ತು ಹದ್ದುಗಳು' ಕಾದಂಬರಿಯ ಲಚ್ಚಿಯ ಪಾತ್ರವನ್ನು ಗಮನಿಸಬೇಕು. ಸಮಾಜದ ವಿವಿಧ ಸ್ತರಗಳ ಗಂಡಸರ ಲೈಂಗಿಕ ವಿಕೃತಿಗೆ ಬಲಿಯಾಗುವ ಲಚ್ಚಿ ಗಂಡು ಮಗುವಿನ ತಾಯಿಯಾಗುತ್ತಾಳೆ. ಆ ಮಗುವನ್ನು ಕೊಲ್ಲುವ ಪ್ರಯತ್ನದಲ್ಲಿ ಸಿಕ್ಕಿ ಬಿದ್ದು ಕಟಕಟೆಯಲ್ಲಿ ನಿಂತಿರುತ್ತಾಳೆ. ನ್ಯಾಯಾಧೀಶ ಕೇಳುವ ಪ್ರಶ್ನೆಗೆ ''ಇದು ಗಂಡ್ಸ ಮಗಾಸ್ವಾಮಿ ನಾಳೆ ಇವ್ನೂ ಬೆಳ್ದು ದೊಡ್ಡೋನಾಗಿ... ನನ್ನಂಥಾ ಹೆಣ್ಣುಗೋಳ ಬಾಳಿಗೆ ಕೊಳ್ಳಿ ಇಡೋ ತಂಕಾ... ಇವ್ನೂ ಕೊಂದು, ನಾನೂ ಸಾಯ್ಬೇಕಂತ ಮಾಡಿವ್ನಿ...'' – ಎಂದು ಉತ್ತರಿಸುವುದು. ಸಾಂಸ್ಕೃತಿಕವಾಗಿ ಗಂಡಸುತನದ ಪರಿಕಲ್ಪನೆ ಅಳವಡಿಸಿಕೊಂಡ ಅನಾರೋಗ್ಯಕಾರಿ ಮೌಲ್ಯಗಳನ್ನು ಸಾರಾಸಗಟಾಗಿ ತಿರಸ್ಕರಿಸುವ ರೀತಿಯಾಗಿದೆ. ಇಂಥ ಆಕ್ರೋಶದ ಧಿಕ್ಕಾರ ವನ್ನು ಮಹಿಳಾ ಬಂಡಾಯ ಪ್ರಜ್ಞೆ ಅಳವಡಿಸಿಕೊಂಡಿದ್ದು ಐತಿಹಾಸಿಕ ಅನಿವಾರ್ಯತೆಯಾಗಿತ್ತು.

೨. ತಾತ್ತ್ವಿಕತೆಯ ಶೋಧ : ಮಹಿಳೆಯ ಅನುಭವ ಪ್ರಪಂಚಕ್ಕೆ ವೈಚಾರಿಕ ಸ್ಪರ್ಶ ದಕ್ಕತೊಡಗಿದಂತೆ, ಶೋಷಣೆಯ ಮೂಲಗಳನ್ನು ಶೋಧಿಸಲಾಯಿತು. ಈ ಹುಡು ಕಾಟದಲ್ಲಿ ಮಹಿಳಾ ಸಂವೇದನೆಯ ತಾತ್ತ್ವಿಕ ಸ್ವರೂಪ ಸ್ಪಷ್ಟಗೊಳ್ಳತೊಡಗಿತು. ಹೆಣ್ಣಿನ ಬದುಕಿಗೆ ಪುರುಷ ವಿರೋಧಿಯಲ್ಲ, ಪುರುಷ ಹಿತಾಸಕ್ತ ಆಲೋಚನಾ ವಿಧಾನ ವಿರೋಧಿ ಯಾದದ್ದು ಎಂಬ ತಿಳುವಳಿಕೆ ಬೇರೂರಿತು. ಹೆಣ್ಣಿನ ಬದುಕನ್ನು ನಿಗ್ರಹಿಸುತ್ತಿರುವ ಸಾಮಾಜಿಕ ಸಂರಚನೆಯ ಬಗ್ಗೆ ವಸ್ತುನಿಷ್ಠ ನಿರಾಕರಣೆ ಕಂಡುಬಂತು. ಈ ಹಂತದಲ್ಲಿ ಪಿತೃವ್ಯವಸ್ಥೆಯ ಮೌಲ್ಯಾದರ್ಶಗಳ ವಿಡಂಬನೆ ವ್ಯಕ್ತವಾಯ್ತು.

ನಾವು ಪತಿವ್ರತೆಯರಲ್ಲ...
ನಿಮ್ಮ ಕಾಮಾಗ್ನಿ ಕುಂಡಕ್ಕೆ
ನಮ್ಮ ಶೀಲವನು ಬಲಿಗೊಟ್ಟು
ನಿಮ್ಮಿಂದಲೇ ಪತಿವ್ರತೆಯರ ಪಟ್ಟವೇರಿ
ಪ್ರಾತಃಕಾಲದ ಸ್ಮರಣೆಯಲಿ ಉಳಿದು
ನರಳುತ್ತಿರುವವರು ನಾವು
ನಾವು ಪತಿವ್ರತೆಯರಲ್ಲ...

ನಮ್ಮ ಸಂಸ್ಕೃತಿಯಲ್ಲಿ ಬೆರೆತುಹೋದ ಏಕಮುಖಿ ಮೌಲ್ಯಗಳ ವಿಡಂಬನೆಯಿದು. ಭೂತಕಾಲದ ಭಯಾನಕ ಇತಿಹಾಸ ಹಾಗೂ ವರ್ತಮಾನದ ಅಸಹನೀಯತೆಗಳು ಸಂವೇದನೆಯ ಮೂಲ ಕಾಳಜಿಯಾಗಿದೆ. ಲಿಂಗಾಧಾರಿತ ಶೋಷಣೆಯ ಅವೈಚಾರಿಕತೆ ಯನ್ನು ಮುಖ್ಯ ಪ್ರಶ್ನೆಯಾಗಿ ಎತ್ತಿಕೊಂಡಿದೆ.

ಅದೇ ವೀರ್ಯ ಅದೇ ಗರ್ಭಕ್ಕೆ ಹುಟ್ಟಿ
ಅದೇ ಮೊಲೆಯ ಚೀಪಿ
ಬೆಳೆದಿದ್ದೇವೆ ಸ್ವಾಮಿ ನಾವೂ.

ಇಂಥ ವಾಸ್ತವಿಕ ಚಿಂತನೆ ಸಂವೇದನೆಯ ಮೂಲ ಸ್ವರೂಪವಾಗಿ ದಾಖಲಾಗಿದೆ. ದೇಶ-ಕಾಲ-ವರ್ಣ-ವರ್ಗ ಭೇದಗಳು ಹೆಣ್ಣಿನ ನೋವಿನ ಲಕ್ಷಣಗಳನ್ನು ಬದಲಿಸಿದೆ. ಆದರೆ ನೋವು ಸ್ಥಾಯಿಯೇ ಆಗಿದೆ. ಹೆಣ್ಣೆಂಬ ಜೈವಿಕ ಭಿನ್ನತೆ ರಾಜಕೀಯ - ಆರ್ಥಿಕ-ಸಾಮಾಜಿಕ-ಸಾಂಸ್ಕೃತಿಕ ಕೀಳರಿಮೆಯನ್ನು ಸೃಷ್ಟಿಸುತ್ತದೆ ಎಂಬ ತಾತ್ತ್ವಿಕ ಸ್ಪಷ್ಟತೆಗಾಗಿ ವಿಭಿನ್ನ ವಸ್ತುಗಳನ್ನು ವಿಶ್ಲೇಷಿಸುವ ನೂರಾರು ಕಥೆ ಕಾದಂಬರಿಗಳು ಬಂದಿವೆ. ತನ್ನ ಸ್ಥಿತಿಗೆ ಕಾರಣ 'ಹಾಳು ಹೆಣ್ಣಿನ ಜನ್ಮ' ಎಂಬ ಮುಗ್ಧತೆಯಿಂದ ಬಿಡುಗಡೆಗೊಳ್ಳುತ್ತಿರುವ ಹಂತ ಇದು.

ಈ ಎಚ್ಚರದಿಂದ ಇತಿಹಾಸ-ಪುರಾಣಗಳ ಏಕಮುಖಿ ಪಠ್ಯವನ್ನು ಮರುಚಿಂತನೆಗೆ ಒಡ್ಡುವ ಪ್ರಕ್ರಿಯೆ ಆರಂಭಗೊಂಡಿತು. ಪುರುಷ ನಿರ್ಮಿತ ಸ್ತ್ರೀ ಮಾದರಿಗಳಿಗೆ ಪ್ರತಿ ಮಾದರಿಗಳನ್ನು ನಿರ್ಮಿಸುವ ಕಳಕಳಿ ವ್ಯಕ್ತವಾಯಿತು. ಎಚ್. ವಿ. ಸಾವಿತ್ರಮ್ಮನವರ ಸೀತೆ-ರಾಮ-ರಾವಣ, ವಿಮುಕ್ತಿ, ಅನುಪಮಾ ನಿರಂಜನರ 'ಮಾಧವಿ'ಯಂಥ ಕೃತಿಗಳು ಗಮನಾರ್ಹವಾದವು. 'ಹಂಚಿಕೊಂಡು ತಿನ್ನಲು ಪ್ರೇಮ ಅವಲಕ್ಕಿಯಲ್ಲ' – ಎಂದು ದಶರಥನ ಸ್ವೇಚ್ಛೆಗೆ ಮೌನ ಧಿಕ್ಕಾರ ತೋರುವ ಕೌಸಲ್ಯೆ; 'ರಾಮ ನೀನು ಸತ್ತು ರಾವಣ ಬದುಕಿದ್ದಿದ್ದರೆ ನಾನಿಂಥ ಅವಮಾನವನ್ನು ಎದುರಿಸಬೇಕಿರಲಿಲ್ಲ' – ಎಂದು ಅಗ್ನಿಪ್ರವೇಶದ

ವೇಳೆಯಲ್ಲಿ ಅಂದುಕೊಳ್ಳುವ ಸೀತೆ – ಇವೆಲ್ಲ ಹೊಸ ಆಲೋಚನೆಯ ಕ್ರಮವನ್ನೇ ತೆರೆದಿಟ್ಟವು. ಕರುಣಾಳು ರಾಘವನಲ್ಲಿ ತಪ್ಪಿಲ್ಲ. ಹೆಣ್ಣಾಗಿ ಹುಟ್ಟಿದ್ದು ನನ್ನದೇ ತಪ್ಪು – ಎಂದು ಪರಂಪರವಾಗಿ ಗೋಳಿಡುವ ಸೀತೆ ಇಲ್ಲಿ ಬದಲಾಗುತ್ತಾಳೆ. ಜೀವಪರವಾಗಿ ನಿಲ್ಲುತ್ತಾಳೆ. ಬದುಕಿನ ಸತ್ಯತೆಯೆಡೆಗೆ ತುಡಿಯುತ್ತಾಳೆ. ತುಂಬ ಮುತುವರ್ಜಿಯಿಂದ ಪುರಾಣೇತಿಹಾಸಗಳ ಸ್ತ್ರೀ ಮಾದರಿಗಳನ್ನು ಪ್ರತಿ ಮಾದರಿಗಳಾಗಿಸಲಾಗಿದೆ. ಪುರುಷ ಪ್ರಭುತ್ವವನ್ನು ಧಿಕ್ಕರಿಸಿ ನಡೆದ ಅಕ್ಕಮಹಾದೇವಿಯ ಸಾಧ್ಯತೆ ಮತ್ತು ಮಿತಿಗಳೆರಡನ್ನೂ ಮಹಿಳಾ ಸಂವೇದನೆ ಗ್ರಹಿಸಿದೆ. ಭೂತಕಾಲವನ್ನು ಮುಖಾಮುಖಿಯಾಗಿಸಿಕೊಳ್ಳುತ್ತ ವರ್ತಮಾನದ ಜಟಿಲತೆಗೆ ಉತ್ತರ ರೂಪಿಸಿವ ಇತ್ಯಾತ್ಮಕ ಪ್ರಯತ್ನ ಇದು.

ಚಿಂತನಾ ಕ್ರಮದ ಈ ಸ್ಪಷ್ಟತೆ ಪರಾವಲಂಬಿ ಬದುಕಿಗೆ ಭಾಷ್ಯ ಬರೆಯತೊಡಗಿತು.

ಹುಟ್ಟೆಂಬುದು ಉರಿಕೊಳ್ಳಿ
ಬಾಲ್ಯವೊಂದು ಅಗ್ನಿಕುಂಡ
ಯೌವನವು ಕಾಳ್ಗಿಚ್ಚಾದ ನನಗೆ
ಬೆಳಕಿನ ಸುಖ ಗೊತ್ತಿಲ್ಲ ಸಖ.

ಹಕ್ಕಿಲ್ಲದವರಾಗಿಯೇ ಹುಟ್ಟುವ ಅನುಭವದ ಕಳವಳವನ್ನು ಮಹಿಳಾ ಸಂವೇದನೆ ಅಭಿವ್ಯಕ್ತಿಸಿದೆ.

೩. ಪರ್ಯಾಯ ಚಿಂತನೆಗಳು : ವ್ಯವಸ್ಥೆ ಮೂಲಭೂತವಾಗಿ ಬದಲಾಗದೇ ಸಂವೇದನೆಯ ನೆಲೆಯಲ್ಲಿ, ಪರ್ಯಾಯ ಚಿಂತನೆಗಳನ್ನು ರೂಪಿಸಿಕೊಳ್ಳುವ ಸಂದಿಗ್ಧತೆಯನ್ನು ಮಹಿಳಾ ಸಂವೇದನೆ ಎದುರಿಸಿತು. ಪ್ರತಿ ಮಾದರಿಗಳನ್ನು ಸೃಷ್ಟಿಸುವಾಗ ತನ್ನನ್ನು ಶೋಧಿಸಿಕೊಳ್ಳುವ ಪ್ರಕ್ರಿಯೆ ನಡೆಯಿತು.

ನಾವು ಹುಡುಗಿಯರೇ ಹೀಗೆ...
ಏನೆಲ್ಲ ಒಡಗುಟ್ಟಿದರೂ
ಹೇಳಬೇಕಾದ್ದನ್ನು ಹೇಳಲಾಗದೆ
ಏನೇನೆಲ್ಲ ಅನುಭವಿಸಿ ಸಾಯುತ್ತೇವೆ.
ಡಬ್ಬಿಯೊಳಗೆ ಹಿಟ್ಟು ಒತ್ತಿಟ್ಟಂತೆ
ಜುಮ್ಮೆನಿಸುವ ಆಲೋಚನೆಗಳನ್ನೆಲ್ಲ,
ಒತ್ತಿ ಒತ್ತಿ ಗಟ್ಟಿ ಮಾಡುತ್ತೇವೆ
ನಾವು - ಹುಡುಗಿಯರೇ ಹೀಗೆ....

ಸ್ವ-ವ್ಯಕ್ತಿತ್ವ ನಿರ್ಮಾಣದೊಂದಿಗೆ, ಮಹಿಳಾ ಪರ ದೃಷ್ಟಿಯಿಂದ ಬದುಕಿನ ನಿರ್ವಚನ ನಡೆಯಿತು. ಬಂಡಾಯ ಸಾಹಿತ್ಯದ ತಾತ್ವಿಕತೆ ಮಹಿಳಾ ಸಂವೇದನೆಗೆ ನೈತಿಕ ಒತ್ತಾಸೆಯನ್ನು ನೀಡಿತು. ಬಂಡಾಯ ಪ್ರಜ್ಞೆ ಸಮಸ್ಯೆಗಳನ್ನು ವಿಶ್ಲೇಷಿಸುವಾಗ ಜೀವ ವಿರೋಧಿ ನಿಲುವನ್ನು ತಳೆಯದೆ, 'ಸರ್ವರಿಗೆ ಸಮಪಾಲು, ಸರ್ವರಿಗೆ ಸಮಬಾಳು' ಎಂಬ ಧೋರಣೆಯಲ್ಲಿ ಆರೋಗ್ಯಪೂರ್ಣ ಜೀವನ ವಿಧಾನದ ಮರುಸಂಘಟನೆಯನ್ನು ಬಯಸುತ್ತದೆ. ಹಾಗೆಯೇ ಮಹಿಳಾ ಸಂವೇದನೆ ಸಾಂಪ್ರದಾಯಿಕ ಕುಟುಂಬ ರಚನೆಯನ್ನು ವ್ಯಕ್ತಿಗೌರವದ ಪರಿಕಲ್ಪನೆಯಲ್ಲಿ ರೂಪಿಸಲು ಒತ್ತಾಯಿಸುತ್ತದೆ. ಪ್ರೀತಿ ದೈಹಿಕ ಆಕರ್ಷಣೆ ಅಷ್ಟೇ ಅಲ್ಲ, ಅದು ವ್ಯಕ್ತಿತ್ವ ಪಾಲನೆಯ ಕಾಳಜಿಯಾಗಬೇಕು ಎಂಬ ತಿಳುವಳಿಕೆ ಪ್ರೀತಿಯ ಸ್ತರವನ್ನು ವಿಸ್ತರಿಸುವಂಥದ್ದು.

ಗೆಳೆಯನೊಬ್ಬ ಹೇಳಿದ್ದ ನಿನ್ನ
ಮೈ ತುಂಬ ಮುತ್ತುಗದ ಹೂವೆಂದು
ಮತ್ತೆ ಮತ್ತೆ ಮೈ ತಿರುವಿ
ನೋಡಿಕೊಂಡರೂ
ಸೀರೆ ತುಂಬ ತೂತುಗಳು.

ಇಂಥ ಅಸಹನೀಯತೆಗಳನ್ನು ಸಹ್ಯವಾಗಿಸಿಕೊಳ್ಳುವ ಛಲ ಪ್ರಧಾನವಾಯಿತು.

ಸೂರ್ಯ ಮುಳುಗಿದನೆಂದರೆ
ಪೃಥ್ವಿಯೇಕೆ ಕತ್ತಲಾಗಬೇಕು ?
ಅರ್ಥವಿಲ್ಲ

ಎಂತಹದೇ ವಿಷಾದದಲ್ಲೂ ಸ್ವಂತಿಕೆಯನ್ನು ಉಳಿಸಿಕೊಳ್ಳುವ ಹಂಬಲ ಕಂಡುಬರುತ್ತದೆ. ಸಾರಾ ಅಬೂಬಕ್ಕರ್ ಅವರ 'ವಜ್ರಗಳು' ಕಾದಂಬರಿಯ 'ನಫೀಸಾ'ಳ ಪಾತ್ರವನ್ನು ಗಮನಿಸಬೇಕು. ಗಂಡ ಬಿಟ್ಟವಳೆನಿಸಿಕೊಂಡು, ಮಗುವಿಗೂ ಅಪರಿಚಿತಳಾಗಿ ಅಖಂಡ ೩೦ ವರ್ಷಗಳನ್ನು ಮುದಿ ಅಜ್ಜನೊಂದಿಗೆ ಬಡತನದಲ್ಲಿ ಕಳೆವ ನಫೀಸಾಳಿಗೆ ಬದುಕು ರೋಸಿಹೋಗಿದೆ. ಅಜ್ಜನ ಸಾವಿನ ಸೂಚನೆಯ ತಬ್ಬಲತನದಲ್ಲಿ ನಾಳೆಗಳು ಕತ್ತಲ ದಿಬ್ಬಗಳಾಗಿ ಬೆಳೆಯುತ್ತಿದ್ದವು. ಆಗ, ಊರ ಬೇಲಿಯಲ್ಲಿ ಬಿದ್ದಿದ್ದ ಅನಾಥ ಶಿಶುವನ್ನು

ಇದ್ದುಳ್ಳವರೆಲ್ಲ ನಿಂತು ನೋಡುತ್ತಿದ್ದಾಗ ನಫೀಸಾ ಗಬಕ್ಕನೆ ಬಾಚಿ ಎದೆಗಪ್ಪಿಕೊಂಡು ಗಟ್ಟಿ ಹೆಜ್ಜೆಗಳನ್ನೂರಿ ಗುಡಿಸಲಿಗೆ ಬರುತ್ತಾಳೆ. ಕತ್ತಲೆಗೆ ಬೆಳಕಿನ ಆಸರೆಯಾಗಿ, ಅನಾಥ ಮಗುವನ್ನು ಎದೆಗೆ ಮಡಿಲಿಗೆ ತುಂಬಿಸಿಕೊಳ್ಳುತ್ತಾಳೆ. ಹೀಗೆ ಬದುಕನ್ನು ಅದರ ಎಲ್ಲ ಅಕರಾಳ-ವಿಕರಾಳತೆಯೊಂದಿಗೆ ಒಪ್ಪಿಕೊಳ್ಳುವ ಮನೋಸ್ಥೈರ್ಯ ಬದುಕಿನ ಪರ್ಯಾಯ ನೆಲೆಯ ಶೋಧವಾಗುತ್ತದೆ. ಬದಲಾಗದ ಬದುಕನ್ನು, ತಾನು ಬದಲಾಗುವ ಮೂಲಕ ಎದುರಿಸುವ ತಾಕತ್ತನ್ನು ಮಹಿಳಾ ಸಂವೇದನೆ ಅಭಿವ್ಯಕ್ತಿಸಿದೆ. ವೈದೇಹಿ ಮತ್ತು ನೇಮಿಚಂದ್ರರ ಕಥೆಗಳು 'ಸೋಲನ್ನು ಎದುರಿಸುವ ವಿಧಾನದಲ್ಲಿ ಗೆಲುವಿನ ಗುಟ್ಟಿದೆ' – ಎಂಬ ಮಹಿಳಾ ಸಂಕಥನವನ್ನು ತೆರೆದಿಟ್ಟವು.

ಬೆಳಗಿನಿಂದ ರಾತ್ರಿಯವರೆಗಿನ ತುಂಬಾ ಕೆಲಸದ ಬಗ್ಗೆ
ರಾತ್ರಿಯ ಆಕ್ರಮಣದ ಬಗ್ಗೆ, ಮನಸ್ಸಿನ ಮೇಲೆ
ಮುಸುಕೆಳೆದು ಬುದ್ಧಿಗೆ ಬಿರಡೆ ಹಾಕುವ ಬಗ್ಗೆ
ಗುರುತಿಸಿಲ್ಲದ ಬಗ್ಗೆ, ಒಟ್ಟಿನಲ್ಲಿ ತುಳಿತಕ್ಕೊಳಗಾದ ಬಗ್ಗೆ.

ಬಹಳಷ್ಟು ಹೇಳಿಯಾಗಿದೆ. ಇನ್ನೂ ಗೊಣಗುವುದರಲ್ಲಿ ಅರ್ಥವಿಲ್ಲ, ಪ್ರತಿಭಾರ ಕವಿತೆಯ ಈ ಸಾಲು ಹೊಸ ಸಾಧ್ಯತೆಯ ತಲ್ಲಣವನ್ನು ಧ್ವನಿಸುತ್ತದೆ. ಸಮಕಾಲೀನ ಬಂಡಾಯ ಸಾಹಿತ್ಯ 'ಹೊಸ ಶೋಧ'ದ ಸಂಕಟದಲ್ಲಿ ಸ್ತಬ್ಧತೆಯನ್ನು ಕಂಡಂತೆ; ಮಹಿಳಾ ಸಂವೇದನೆ 'ಮೌನ' ಮತ್ತು 'ಮರುಹುಟ್ಟಿ'ನ ಆತಂಕವನ್ನು ಎದುರಿಸುತ್ತಿದೆ. ಜಾಗತೀಕರಣ ಮತ್ತು ಕೋಮುವಾದಿ ರಾಜಕಾರಣ ತನ್ನ ಕ್ರೌರ್ಯದ ಬೇರುಗಳನ್ನು ಆಳಕ್ಕಿಳಿಸುತ್ತಿದೆ. 'ಬಂಡಾಯ' ಮನುಷ್ಯ ಸಂವೇದನೆಯ ಏಕರೂಪಿ ಲಕ್ಷಣವಾಗಬೇಕಿದೆ. ಸಾಹಿತ್ಯ ಮಾದರಿಗಳು ಪ್ರತಿಕ್ರಿಯೆಯಾಗಿ ದಾಖಲಾತಿಯಾಗಿ ರೂಪ ಪಡೆಯುತ್ತಿವೆ. ಅಭಿವ್ಯಕ್ತಿಯ ಒತ್ತಡ ಹೆಚ್ಚು ಮಹತ್ವವನ್ನು ಪಡೆಯುತ್ತಿದೆ. ವ್ಯಕ್ತಿನಿಷ್ಠತೆಗಿಂತ ಸಮೂಹ ನಿಷ್ಠತೆ ಆದ್ಯತೆಯದಾಗಿದೆ. ಚಿಂತನಾ ವಿಧಾನದಲ್ಲಾಗುತ್ತಿರುವ ಈ ಬದಲಾವಣೆ ಸೃಜನ ಶೀಲತೆಯನ್ನು ವಸ್ತುಸತ್ಯದತ್ತ ಕರೆದೊಯ್ಯುತ್ತಿದೆ. ಸಹಜವಾಗಿಯೇ ವಸ್ತುವ್ಯಾಪ್ತಿ ಹೆಚ್ಚಿದೆ. ಇವತ್ತಿನ ಮಹಿಳಾ ಸಂವೇದನೆ ಸ್ತ್ರೀತ್ವದ ಗ್ರಹಿಕೆಗಳನ್ನು ಅಂತರ್ಗತಗೊಳಿಸಿಕೊಂಡು ಹೊಸ ಪರಿಭಾವನೆಯಲ್ಲಿ ಬೆಳೆಯುತ್ತಿವೆ. ಇತ್ತೀಚಿನ ಮಹಿಳಾ ಕಾದಂಬರಿಗಳಾದ 'ಸ್ತ್ರೀಲೋಕ' 'ಶಿವಗಂಗಾ', 'ಗಾಂಧಿ ಬಂದ', 'ಜಮೀನು' ಇವುಗಳ ವಸ್ತುವೈವಿಧ್ಯವನ್ನು ಗಮನಿಸ ಬಹುದು. ಸಾಮುದಾಯಿಕ ಸಂವೇದನೆಯಲ್ಲಿ ಪಾಲು ಪಡೆವ ಆತಂಕ, ಸಂಭ್ರಮಗಳು ಮುಗಿದು ಸಮೂಹಪ್ರಜ್ಞೆಯ ವಕ್ತಾರಿಕೆಯನ್ನು ಮಹಿಳಾ ಬರವಣಿಗೆ ವಹಿಸಿಕೊಂಡಿದೆ.

ಬಂಡಾಯ ಸಾಹಿತ್ಯದ ಆಶಯಗಳು ಮಹಿಳಾ ಸಂವೇದನೆಯ ಅಭಿವ್ಯಕ್ತಿಗೆ ಯೋಗ್ಯ ಪರಿಸರವನ್ನು ನಿರ್ಮಿಸಿ, ಒತ್ತಾಸೆಯಾಗಿ ನಿಂತವು. ಆದರೆ ಬಂಡಾಯ ಸಾಹಿತ್ಯದ ವಸ್ತು ಧೋರಣೆಗಳಿಗೂ ಮಹಿಳಾ ಬಂಡಾಯ ಸಂವೇದನೆಗಳಿಗೂ ಮೂಲಭೂತ ವ್ಯತ್ಯಾಸ ಗಳಿವೆ. ಮಹಿಳಾ ಸಂವೇದನೆ ತನ್ನ ಅನನ್ಯತೆಯಲ್ಲಿ ಭಿನ್ನ ಸಾಂಸ್ಕೃತಿಕ ಚರಿತ್ರೆಯಾಗಿ ಬೆಳೆದಿದೆ.

**ಮಹಿಳಾ ಭಾಷೆ**

ಭಾಷೆ ಸಾಂಸ್ಕೃತಿಕ ಚರಿತ್ರೆಯ ವ್ಯಕ್ತರೂಪ. ಸಮಾಜೋ ಆರ್ಥಿಕ ರಚನೆಗಳು ಭಾಷೆ ಯನ್ನು ರೂಪಿಸುತ್ತವೆ. ಎಲ್ಲ ಭಾಷೆಗಳಲ್ಲೂ ಮಹಿಳಾ ಭಾಷೆ ಎಂಬುದೊಂದು ಪ್ರತ್ಯೇಕ ಘಟಕ. ಮಹಿಳಾ ಭಾಷೆ ಅಧಿಕಾರಯುತವಾದದ್ದಲ್ಲ. ಗುಲಾಮಿತನದ್ದು. ಕೆಳವರ್ಗ ಮತ್ತು ಕೆಳಜಾತಿಗಳು ಯಜಮಾನಶಾಹಿಯ ಎದುರು ಬಳಸುವ ಭಾಷೆಗೂ, ಮಹಿಳಾ ಭಾಷೆಗೂ ಆಂತರಿಕ ಸಂಬಂಧವಿದೆ. ಈ ಭಾಷೆ ದೀರ್ಘೀಕರಣದ್ದು. ಮೆಲುದನಿಯದ್ದು. ಕೆಳಲಯದ್ದು. ಅಲ್ಪವಿರಾಮದ್ದು ಮತ್ತು ಅಸ್ಪಷ್ಟವಾದುದು. ಮಾತು ಮಹಿಳೆಯ ಪಾಲಿಗೆ ಕೇವಲ ಸಂವಹನಕ್ಕಾಗಿ, ನಿರ್ದಿಷ್ಟ ಬದುಕಿನ ವಲಯದಲ್ಲೇ ಪುನರಾವರ್ತಗೊಳ್ಳುವ ಯಾಂತ್ರಿಕ ಸ್ವರೂಪದ್ದು. ಬದುಕಿನ ವಿಭಿನ್ನ ವಲಯಗಳ ಪರಿಚಯವಿಲ್ಲದ ಹೆಣ್ಣಿಗೆ ವಿಭಿನ್ನ ಭಾಷಾ ಕೋಶಗಳು ಸಹಜವಾಗಿ ದಕ್ಕಲಿಲ್ಲ. ಜೊತೆಗೆ ಸಾಮಾಜಿಕ ನಡವಳಿಕೆ – ಮೌಲ್ಯಗಳು ಭಾಷೆಯನ್ನು ನಿರ್ಭಿಡೆಯಿಂದ ಬಳಸುವ ಅವಕಾಶವನ್ನು ಕೊಡಲಿಲ್ಲ. ಹಾಗಾಗಿ ಮಹಿಳಾ ಪದಕೋಶ ಚಿಕ್ಕದು ಮತ್ತು ಪ್ರತ್ಯೇಕವಾದದ್ದು. ಜಾನಪದ ಗರತಿ ತನ್ನೊಳಗಿಗೆ ಮಾತು ಕೊಡಲಾಗದ ಸಂಕಟದಲ್ಲಿ ಅನುಭವವನ್ನು ದೈವತ್ವಕ್ಕೆ ಸಮೀಕರಿಸಿ ಅಥವಾ ಸಾಕ್ಷೀಕರಿಸಿ ಸುಮ್ಮನಾಗುತ್ತಾಳೆ. ಇತ್ತೀಚಿನ ಮಹಿಳಾ ಸಂವೇದನೆ ಈ ಮಿತಿಯನ್ನು ಮೀರುವ ಪ್ರಯತ್ನ ಮಾಡಿದೆ.

ತನ್ನದಲ್ಲದ ಬದುಕನ್ನ ಬದುಕುತ್ತಿರುವ ಹೆಣ್ಣು, ತನ್ನದಲ್ಲದ ಮಾತನ್ನು ಆಡಲು ಒತ್ತಾಯಿಸಲ್ಪಟ್ಟಿದ್ದಾಳೆ. ಭಾಷಾ ರಚನೆಗಳು ಪಿತೃಸಂಸ್ಕೃತಿಯ ಅರ್ಥಗಳನ್ನು ಒಳಗೊಂಡಿರುವಾಗ ಅವುಗಳನ್ನು ತನ್ನ ಸಂವೇದನೆಗೆ ಒಗ್ಗಿಸಿಕೊಳ್ಳುವುದು ಮುಜುಗರದ ವಿಷಯವಾಗಿದೆ. ಈ ಭಾಷಾ ಸಂದಿಗ್ಧತೆಯನ್ನು ಅಕ್ಕಮಹಾದೇವಿಯಂಥ ವಚನಗಾರ್ತಿ ಯರೂ ಎದುರಿಸಿದ್ದಾರೆ. ಸೀರೆಯ ನಿರಾಕರಣದೊಂದಿಗೇ 'ಗಂಡುಗಚ್ಚೆಯ ತೊಡುವೆ' ಎಂಬ ಪುರುಷ ಪ್ರಾಧಾನ್ಯತೆಯನ್ನು ಅಕ್ಕ ಆರೋಪಿಸಿಕೊಳ್ಳುತ್ತಾಳೆ. ಇಂಥ ತೊಡಕನ್ನು ಬಂಡಾಯ ಸಂದರ್ಭದ ಮಹಿಳಾ ಸಂವೇದನೆ ಪ್ರಧಾನವಾಗಿ ಗ್ರಹಿಸುತ್ತದೆ. ಬಾನು ಮುಷ್ತಾಕರ ಕಥೆಯೊಂದರ ನಾಯಕಿ, ಗೆಳತಿಗೆ ತನ್ನ ಗಂಡನನ್ನು ಪರಿಚಯಿಸುವಾಗ ತಳಮಳವನ್ನು ಅನುಭವಿಸುತ್ತಾಳೆ. ''ಮುಜಾಹಿದ್. ನನ್ನ ಮನೆಯಾತ... ಓ ಇದು ತಪ್ಪು ಮನೆಯಲ್ಲಿರುವಾಕೆ ಹೆಂಡತಿ. ಮುಜಾಹಿದ್ ನನ್ನ ಆಫೀಸಿನಾತ. ಛೇ ! ಆಫೀಸು ನನ್ನದಲ್ಲ.. ಮತ್ತೇನು ? ಯಜಮಾನರು ಅನ್ನಬಹುದು. ಅಂದರೆ ನಾನು ಆಳಾಗಬಹುದು... ಪ್ರಾಣಿಯಾಗಬಹುದು... ನಾಯಿಯಾಗಬಹುದು... ಯಜಮಾನ ಆಳು ಬೇಡ, ಬೇಡ. ಗಂಡ ? ಎಂತಹ ಗಂಡ ? ಯಮಗಂಡ ಅಂತಲೇ ಭಾರೀ ಗಂಡಾಂತರ ಕಾದಿದೆ ಎಂಬರ್ಥವೇ ?.... ಪತಿ ಬಹಳ ಗ್ರಾಂಥಿಕ ಪದ. ಆಡುಮಾತಲ್ಲ. ಪತಿ ಅಂದೊಡನೆ ದೇವರು ಎಂಬುದನ್ನು ಸೇರಿಸುವ ತವಕವಾಗುತ್ತದೆ...'' ಇಲ್ಲಿ, ಏಕಮುಖಿ ಸಂಸ್ಕೃತಿಯ ಭಾಷಿಕ ರೂಪಗಳು ಮಹಿಳೆಗೆ 'ಅನ್ಯ' ಅನ್ನಿಸುತ್ತಿರುವುದರ ವಿವರಣೆಯಿದೆ. ಭಾಷಾ ಅಂತರಂಗದ ಶೋಧ ಸಂವೇದನೆಯ ಮುಖ್ಯ ಲಕ್ಷಣವಾಗಿದೆ.

ಅಧೀನ ಪ್ರಜ್ಞೆ ಹೆಣ್ಣಿನ ಭಾಷೆಯನ್ನು ಸಾಂಕೇತಿಕಗೊಳಿಸಿದೆ. ಸಂಕೀರ್ಣವಾಗಿಸಿದೆ. ದಿನನಿತ್ಯದ ಕೌಟುಂಬಿಕ ಬದುಕಿನಲ್ಲೂ ಮಹಿಳೆಯ ಮಾತು 'ಸುತ್ತುಬಳಸಿನ' ದಾಗಿರುತ್ತದೆ. ಶಬ್ದಾರ್ಥ ಸಾಧ್ಯತೆಗಿಂತ ಲಯದ ಸಾಧ್ಯತೆಯೆಡೆಗೆ ಹೆಚ್ಚು ತುಡಿಯುತ್ತದೆ. ಸಂಜ್ಞೆ, ಸಂಕೇತ, ಹ್ರಸ್ವ, ದೀರ್ಘಗಳ ಶ್ರಮ ಮಹಿಳಾ ಮಾತಿನ ಸ್ಥಿತಿಯಾಗಿದೆ. ಜಾನಪದ ಗರತಿಯರ ಹಾಡು-ಕತೆಗಳಲ್ಲಿ ಸಾಂಕೇತಿಕತೆ ಪ್ರಮುಖ ಪಾತ್ರ ವಹಿಸಿದೆ. ಅಭದ್ರ ಮನಸ್ಥಿತಿಯ ಮಹಿಳಾ ಸಂವೇದನೆ ತನ್ನ ಅಭಿವ್ಯಕ್ತಿಯಲ್ಲಿ ಹೋಲಿಕೆ, ಪುನರುಕ್ತಿ, ಪ್ರಮಾಣ ಎಲ್ಲವನ್ನೂ ನಡೆಸುತ್ತದೆ. ಈ ಭಾಷಿಕ ಮುಜುಗರವನ್ನು ದಾಟುತ್ತ, ವಚನಕಾರ್ತಿಯರ ಸ್ಪಷ್ಟತೆಯ ಕಡೆಗೆ ತುಡಿವ ಪ್ರಯತ್ನ ಬಂಡಾಯ ಕಾಲದ ಮಹಿಳಾ ಬರವಣಿಗೆಯದು.

ಹೆಜ್ಜೆಯಿಡಬೇಕು ಹುಟ್ಟುಡುಗೆ ತೊಟ್ಟು
ಮರೆಯಿಲ್ಲದ ಬಯಲಿದು.
ನನ್ನ ಕವಿತೆಗೆ ಮುಸುಕು ತಿಳಿಯದು.
ಎಂಬ ಧೋರಣೆ ಈ ಕಾಲದ ತಿಳುವಳಿಕೆಯಾಗಿದೆ.

ಹೆಣ್ಣು ಮತ್ತು ಹೆಣ್ಣಿಗೆ ಸಂಬಂಧಿಸಿದ ಪದಗಳು ಅವಮಾನ ಅಸಹ್ಯ ಬಯ್ಗಳಗಳಾಗಿ ಬಳಕೆಗೊಳ್ಳುವಾಗ ಅವುಗಳ ಮರುನಿರ್ಮಾಣ ಆತಂಕಕಾರಿಯಾಗಿತ್ತು. ಭಾಷಾ ಪರಿಸರವನ್ನು ಬದಲಿಸುತ್ತ ಭಾಷಾ ರಚನೆಗಳನ್ನು ಬದಲಿಸಿ ಸಮಾನತೆಯ ಹೊಸ ಸಾಧ್ಯತೆಗಳತ್ತ ಹೊರಳಿಸಿಕೊಳ್ಳುವ ಪ್ರಯತ್ನ ನಡೆದಿದೆ.

೧) ಹಾಡು ನೇಯುವವಳು ಹುಡುಗಿ
ಮುರಿಯುತ್ತ ಮೆಣಸಿನ ಬೊಟ್ಟು
ಆಕಾಶದ ಸದ್ದಿಗೆ ಕಿವಿಯ ತೆರೆದಿಟ್ಟು
ಕಳೆಯುವಳು ಆಯುಷ್ಯ ಬೊಟ್ಟು ಬೊಟ್ಟು.

೨) ಕಾವ್ಯದ ಬಗ್ಗೆ ದೊಡ್ಡಕೆ ತಿಳಿದವರೇ
ಹೇಳಿ, ಗೊತ್ತೆ ತಿಳಿ ಸಾರು ನಿಮಗೆ ?
ಕ್ಷಮಿಸಿ, ಗೊತ್ತಿಲ್ಲ ಕಾವ್ಯ ನನಗೆ.

ಚಾರಿತ್ರಿಕ ಸಂವೇದನೆ ಮತ್ತು ಪದಕೋಶಗಳಿಗೆ ಸ್ವಂತಿಕೆಯ ಹೊಸ ರಕ್ತ ನೀಡಲಾಯಿತು. ಮಹಿಳಾ ದುಡಿಮೆ, ಮಹಿಳಾ ಸಂವಾದ, ಮಹಿಳಾ ಅನುಭವ ವಲಯ ವನ್ನು ಅಪಮೌಲ್ಯಗೊಳಿಸಲಾಗಿತ್ತು. ಹೆಂಗಸರ 'ಹರಟೆ'ಗೆ ಕಾಡು ಹರಟೆ, ಜೊಳ್ಳು ಹರಟೆ ಎಂಬ ಪ್ರತ್ಯಯಗಳಂಟಿದ್ದವು. ತಾತ್ತ್ವಿಕವಾಗಿ ಅವುಗಳನ್ನು ಮೀರುವ ಒತ್ತಾಸೆಯಲ್ಲಿ 'ಸ್ತ್ರೀಲೋಕ'ದಂಥ ಕೃತಿ ರೂಪ ತಾಳುತ್ತದೆ. ಇಂಥ ಪ್ರಯೋಗಶೀಲತೆ, ಮಹಿಳಾ ಸಂವೇದನೆ ಆರೋಪಿತ ಮೌಲ್ಯಗಳಿಂದ ದಾಟಿ ಬರುವ ಪ್ರಕ್ರಿಯೆಯೂ ಆಗಿದೆ. ಹೀಗೆ ಅರ್ಥಪೂರ್ಣ ನೆಲೆಯಲ್ಲಿ ಹೊಸ ಪರಿಭಾಷೆಯ ಶೋಧ ನಡೆದಿದೆ.

ಹೆಣ್ಣಿನ ಅಂತರಗಂದ ಪಿಸುಗುಗಳಿಗೆ ಅಧಿಕೃತತೆ ನೀಡಲು ಬಂಡಾಯ ಸಾಹಿತ್ಯದ ತಾತ್ತ್ವಿಕ ನೆಲೆ ಪೂರಕ ವಾತಾವರಣವನ್ನು ನಿರ್ಮಾಣ ಮಾಡಿದೆ.

ಡಾ|| ವಿನಯಾ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸವಣೂರು ಅಂಚೆ-೫೮೧ ೧೧೮, ಹಾವೇರಿ ಜಿಲ್ಲೆ



ಬಿ. ಸುರೇಶ

# ಟಿ. ವಿ. ಧಾರಾವಾಹಿಗಳು ಸಂಸ್ಕೃತಿ ಮತ್ತು ಕ್ರಿಯಾಶೀಲತೆ

**ಈ**ಚಿನ ದಿನಗಳಲ್ಲಿ ಟೆಲಿವಿಷನ್ ಉದ್ಯಮ ಎಷ್ಟು ಚರ್ಚಿತವಾಗುತ್ತಿದೆಯೆಂದರೆ ಎಲ್ಲಾ ನಿಯತಕಾಲಿಕ ಪತ್ರಿಕೆಗಳಲ್ಲೂ ಈ ಉದ್ಯಮವನ್ನು ಕುರಿತು ವಿಸ್ತೃತ ಲೇಖನಗಳು ಬರುತ್ತಿವೆ. ಕಳೆದ ಕೆಲವು ದಿನಗಳ ಹಿಂದೆ ಮೆಗಾ ಧಾರಾವಾಹಿಯನ್ನು ಕುರಿತು ಮೆಗಾ ನಾಯಕರೊಬ್ಬರ ಮಾತು ದೈನಿಕ ಪತ್ರಿಕೆಗಳ ಮುಖಪುಟದಲ್ಲಿಯೇ ಕಾಣಿಸಿಕೊಂಡಿತ್ತು (೩ ಜನವರಿ ೨೦೦೩; ಶ್ರೀ ವಿಷ್ಣುವರ್ಧನ್ ಅವರ ಹೇಳಿಕೆ). ಇನ್ನೋರ್ವ ಚಲನಚಿತ್ರ ನಿರ್ದೇಶಕರು, 'ಈ ಮೆಗಾ ಧಾರಾವಾಹಿಗಳು ಕ್ರಿಯಾಶೀಲತೆಯನ್ನು ಕೊಲ್ಲುತ್ತವೆ' ಎಂಬ ಮಾತನ್ನು ಆಡಿದ್ದಾರೆ. (೫ ಜನವರಿ ೨೦೦೩; ಕವಿತಾ ಲಂಕೇಶ್ ಅವರ ಹೇಳಿಕೆ). ಇದಲ್ಲದೆ, 'ಅಗ್ನಿ' ಪತ್ರಿಕೆಯಲ್ಲಿ ಬಂದಿರುವ ಲೇಖನ (೧೦ ಜನವರಿ ೨೦೦೩; ಮಂಜುನಾಥ ಅದ್ದೆ ಅವರ ಲೇಖನ) ಮತ್ತು ಟೆಲಿವಿಷನ್ ಕಾರ್ಯಕ್ರಮಗಳನ್ನು ಕುರಿತು 'ಹೊಸತು' ವಿಶೇಷಾಂಕ-೨೦೦೩ರಲ್ಲಿ ಬಂದ ಶಾಂತ ನಾಗರಾಜ್ ಅವರ ಲೇಖನಗಳನ್ನೂ ಗಮನಿಸಬಹುದು. ಇವೆಲ್ಲವುಗಳನ್ನ ಗಮನಿಸಿದಾಗ ಹಲವು ಪ್ರಶ್ನೆಗಳು ಏಳುತ್ತವೆ. ನಮ್ಮ ಟಿ.ವಿ. ಧಾರಾವಾಹಿಗಳು ನಿಜವಾಗಿಯೂ ಅಷ್ಟೊಂದು ಕೆಟ್ಟದಾಗಿವೆಯೇ? ಹಾಗಿದ್ದರೂ ಅವು ಜನಪ್ರಿಯತೆಯನ್ನು ಗಳಿಸಿರುವುದು ಹೇಗೆ? ಅವುಗಳಿಗೆ ಟಿ.ಆರ್.ಪಿ.ಯಲ್ಲಿ ಸ್ಥಾನ ದೊರೆತಿರುವುದು ಹೇಗೆ? ಈಚೆಗೆ ಅತೀ ಚರ್ಚೆಗೆ ಒಳಗಾಗಿರುವ ಮತ್ತು ಮೇಲೆ ತಿಳಿಸಿದ ಎಲ್ಲರ ಬೈಗುಳಗಳನ್ನ ಪಡೆದಿರುವ ಧಾರಾವಾಹಿಗಳು ಇಂದು ಅತೀ ಹೆಚ್ಚು ವೀಕ್ಷಿತ ಧಾರಾವಾಹಿ ಅನ್ನಿಸಿಕೊಂಡಿವೆಯಲ್ಲ? ಅದು ಹೇಗೆ ಸಾಧ್ಯವಾಯಿತು? ಅಂದರೆ, ನಾವು ಧಾರಾವಾಹಿಯೊಂದನ್ನ ತಾತ್ವಿಕ ವಿಮರ್ಶೆಗೆ ಒಳಪಡಿಸಬೇಕೋ ಅಥವಾ ತಾಂತ್ರಿಕ ವಿಮರ್ಶೆಗೆ ಒಳಪಡಿಸಬೇಕೋ, (ಎಲ್ಲ ವಿಮರ್ಶಕರ ಮೆಚ್ಚುಗೆ ಪಡೆದ ಧಾರಾವಾಹಿಯೊಂದು ಜನ ಮೆಚ್ಚುಗೆ ಗಳಿಸದೆ ನಿಂತುಹೋದ ಉದಾಹರಣೆಯನ್ನ ಮತ್ತು ವಿಮರ್ಶಕರ ಬೈಗುಳವನ್ನ ಅತಿ ಹೆಚ್ಚು ಪಡೆದ ಧಾರಾವಾಹಿಯೊಂದು ಅತೀ ಜನಪ್ರಿಯವಾದ ಉದಾಹರಣೆಯನ್ನ ಇಟ್ಟುಕೊಂಡು ಈ ಪ್ರಶ್ನೆಯನ್ನು ಅರ್ಥ ಮಾಡಿಕೊಳ್ಳಬೇಕಾಗುತ್ತದೆ.) ಧಾರಾವಾಹಿಯೊಂದು ನಿರ್ಮಾಪಕನ/ಹಣ - ಹೂಡುವವನ ಹಿತಾಸಕ್ತಿಯನ್ನ ಕಾಪಾಡಬೇಕೊ ಅಥವಾ ವಿಮರ್ಶಕರಿಂದ ಸೈ ಎನಿಸಿಕೊಂಡರೆ ಸಾಕೊ? ಹೀಗೆ ನಮ್ಮೆದುರು ಅನೇಕ ಪ್ರಶ್ನೆಗಳನ್ನ ಸಮಕಾಲೀನ ಧಾರಾವಾಹಿಗಳ ವಿಮರ್ಶೆ ತಂದಿರಿಸಿದೆ. ಈ ದೃಷ್ಟಿಯಿಂದ ಟಿ.ವಿ. ಉದ್ಯಮದಲ್ಲಿ ತೊಡಗಿರುವವರು ಆತ್ಮಾವಲೋಕನದ ಜೊತೆಗೆ ತಮ್ಮ ಕಾರ್ಯಕ್ರಮ ಕುರಿತು ಜನರ ಮನಸ್ಸಲ್ಲಿ ಮೂಡುತ್ತಿರುವ ಭಾವನೆಗಳನ್ನ ಬದಲಿಸಿ, ಅಲ್ಲಿ ಈ ಮೊದಲು ಟೆಲಿವಿಷನ್ ಉದ್ಯಮ ಕುರಿತು ಇದ್ದಂತಹ ಪ್ರೀತಿಯನ್ನ-ಗೌರವವನ್ನ ಮರಳಿ ದೊರಕಿಸಿಕೊಳ್ಳಬೇಕಾದ ಅನಿವಾರ್ಯತೆ ಬಂದಿದೆ ಎನಿಸುತ್ತದೆ.

ಈ ಸಂದರ್ಭದಲ್ಲಿ ತಟ್ಟನೆ ಪ್ರಖ್ಯಾತ ಸಿಮಿಯಾ ಲಜಿಸ್ಟ್ ರೋಲ್ಯಾಂಡ್ ಬಾರ್ತೆಸ್ ತನ್ನ 'ಮೈತಾಲ ಜೀಸ್' ಕೃತಿಯಲ್ಲಿ ಉದಾಹರಿಸುವ ಫ್ರಾನ್ಸ್ ದೇಶದ ಪ್ರಕರಣವೊಂದು ನೆನಪಿಗೆ ಬರುತ್ತಿದೆ. ಆ ದೇಶದ ಡಾಮಿನಿಸಿ ಎಂಬ ರೈತನೊಬ್ಬನಿಗೆ ಆದ ಗಲ್ಲು ಶಿಕ್ಷೆಯನ್ನು ಕುರಿತಾದ್ದು ಈ ಪ್ರಕರಣ. ಪ್ರಕರಣದ ವಿವರ ಇಂತಿದೆ. ಒಂದೊಮ್ಮೆ ಬಡ ಮತ್ತು ಗಿರಿಜನ ವರ್ಗಕ್ಕೆ ಸೇರಿದ ಗಸ್ಟನ್ ಡಾಮಿನಿಸಿಯ ಹೊಲದಲ್ಲಿ ಆ ದೇಶದ ಶ್ರೀಮಂತರುಗಳಲ್ಲಿ ಒಬ್ಬನಾದ ಸರ್ ಜಾಕ್ ಡ್ರಮ್ಮಂಡ್ ಎಂಬಾತ ತನ್ನ ಕುಟುಂಬದವರೊಡನೆ ಊಟಕ್ಕೆ ಕುಳಿತಿದ್ದನಂತೆ. ಅದಕ್ಕಾಗಿ ಆ ಶ್ರೀಮಂತನು ಹೊಲದ ಒಡೆಯನ ಒಪ್ಪಿಗೆ ಪಡೆದಿರಲಿಲ್ಲ, ತನ್ನ ಒಪ್ಪಿಗೆ ಪಡೆಯದೆ ತನ್ನ ಹೊಲವನ್ನು ಬಳಸಿಕೊಳ್ಳುತ್ತಿರುವುದನ್ನು ಕುರಿತು ಡಾಮಿನಿಸಿಯು ಮಾತಾಡಿದ್ದಾನೆ. ಶ್ರೀಮಂತನಿಗೆ ತನ್ನನ್ನ ಒಬ್ಬ ಗಿರಿಜನರವನು ಪ್ರಶ್ನಿಸುತ್ತಿದ್ದಾನಲ್ಲ ಎಂದು ಕೋಪಬಂದಿದೆ. ಆತ ಉದ್ಧಟನಂತೆ ಮಾತಾಡುತ್ತಾನೆ. ಶ್ರೀಮಂತನ ಭಾಷೆ ತಿಳಿಯದ ಗಿರಿಜನರವನಾದ ಡಾಮಿನಿಸಿ ಮತ್ತೇನೊ ಹೇಳುತ್ತಾನೆ. ಮಾತಿಗೆ ಮಾತು ಸೇರಿಕೊಂಡು, ಒಬ್ಬರ ಮಾತು ಮತ್ತೊಬ್ಬರಿಗೆ ಅರ್ಥವಾಗದ ಸ್ಥಿತಿಯಲ್ಲಿಯೇ ಜಗಳ ಆರಂಭವಾಗುತ್ತದೆ. ಶ್ರೀಮಂತನು ಗಿರಿಜನ ರೈತ ಡಾಮಿನಿಸಿಯ ಮೇಲೆ ಕೋವಿ ಎತ್ತಿಕೊಳ್ಳುತ್ತಾನೆ. ಆತ್ಮರಕ್ಷಣೆಗೆ ಡಾಮಿನಿಸಿಯು ತನ್ನ ಕೊಡಲಿ ಬೀಸುತ್ತಾನೆ. ಏಟು ತಿಂದು ಕೆಳಗೆ ಬಿದ್ದಿರುವ ಶ್ರೀಮಂತನ ಮೇಲೆ ಡಾಮಿನಿಸಿಯು ಏರಿ ಹೋಗುತ್ತಾನೆ. ರೈತನ ಶಕ್ತಿಯೆದುರು ಸೋತ ಶ್ರೀಮಂತ ಸಾಯುತ್ತಾನೆ. ವಿಷಯ ನ್ಯಾಯಾಲಯದ ಎದುರಿಗೆ ಬರುತ್ತದೆ. ಆ ನ್ಯಾಯದ ಭಾಷೆ ಅರಿಯದ ಡಾಮಿನಿಸಿ ತನ್ನದೇ ಭಾಷೆಯಲ್ಲಿ ಅನಿಸಿದ್ದನ್ನೆಲ್ಲಾ ಒದರುತ್ತಾನೆ. ನ್ಯಾಯಾಲಯ ಅವನಿಗೆ ಜಿಲೆಟಿನ್ ಶಿಕ್ಷೆಯನ್ನು ವಿಧಿಸುತ್ತದೆ. ಈ ಪ್ರಕರಣವನ್ನು ಉಲ್ಲೇಖಿಸುತ್ತಾ ರೋಲ್ಯಾಂಡ್ ಬಾರ್ತೆಸ್ ಹೀಗೆನ್ನುತ್ತಾನೆ :

We are all potential Domincies, not as murderers but as accused, deprived of language, or worse, rigged out in that of our accusers, humiliated and condemned by it. To rob a man of his language in the very name of language: this is the first step in all legal murders.

('Mythologies' by Roland Barthes; translated from French by Annette Lavers, published by Vintage in 2000 - p. no 46)

ಈ ಮಾತುಗಳು ಇಂದು ಟೆಲಿವಿಷನ್ ಉದ್ಯಮದಲ್ಲಿ ಇರುವವರಿಗೂ ಹೊಂದುವಂತಹದು ಎಂದು ನನ್ನ ಭಾವನೆ. ನಾವುಗಳು ಸಹ ಗಿರಿಜನ ರೈತ ಡಾಮಿನಿಸಿಯಂತೆ ನಮ್ಮ ಭಾಷೆಯನ್ನ ಉಳಿದವರು ಅರ್ಥಮಾಡಿಕೊಳ್ಳದೇ ಆಡುತ್ತಿರುವ ಮಾತುಗಳಿಗೆ ಸಿಕ್ಕುಬಿದ್ದಿದ್ದೇವೆ ಎನಿಸುತ್ತಿದೆ. ನಾವು ನಮ್ಮ ಭಾಷೆಯನ್ನು ಅವರಿಗೆ ಕಲಿಸಬೇಕು ಅಥವಾ ಅವರ ಭಾಷೆಯನ್ನು ನಾವು ಕಲಿತು ಮಾತಾಡಬೇಕು ಎಂಬಂತಹ ಪರಿಸ್ಥಿತಿ ಇಂದು ನಮ್ಮೆದುರಿಗಿದೆ.

**ನಾವೇಕೆ ಡಾಮಿನಿಸಿಗಳು ?**

ಏಕೆಂದರೆ ಈ ಉದ್ಯಮದಲ್ಲಿ ಕಾರ್ಯಕ್ರಮ ಮಾಡುವವರಿಗೆಲ್ಲಾ ಆಯಾ ಛಾನೆಲ್ಲುಗಳಿಂದ ಅಥವಾ ನಿರ್ಮಾಣ ಸಂಸ್ಥೆಗಳಿಂದ ಮಿತಿಗಳನ್ನು ಹೇರಲಾಗುತ್ತದೆ. ಆ ಮಿತಿಗಳ ನಡುವೆಯೇ ತಮ್ಮತನವನ್ನು ಮೆರೆಯುವ ಅನಿವಾರ್ಯ

ಅನೇಕರದ್ದಾಗಿರುತ್ತದೆ. ಕೆಲವರು ಬುದ್ಧಿವಂತರಾಗಿ ಆ ಮಿತಿಗಳನ್ನೇ ತಮ್ಮ ಕಾರ್ಯಕ್ರಮಕ್ಕೆ ವರದಾನ ಎಂಬಂತೆ ಮಾಡಿಕೊಂಡು, ಒಂದು ಮಟ್ಟದ ಗೆಲುವು ಸಾಧಿಸುತ್ತಾರೆ. ಇನ್ನುಳಿದವರು ಆ ಮಿತಿಗಳ ಬಲೆಯಲ್ಲಿ ಸಿಕ್ಕು ನರಳುತ್ತಾ, ಪಾಪಪ್ರಜ್ಞೆಯ ಜೊತೆಗೇ ಕೆಲಸ ಮಾಡುತ್ತಾ ದಿನ ದೂಡುತ್ತಾರೆ. ಇಲ್ಲಿ ಗೆಲುವು ಸಾಧಿಸಿದವನು ದೇವರಂತೆಯೂ, ಮತ್ತೊಬ್ಬ ಹಪಾಪಿ ದಡ್ಡನಂತೆಯೂ ಕಾಣುತ್ತಾನೆ. ಮೊದಲಿನವನಿಗೆ ಗೆಲುವಿಗೆ ಇದೇ ಕಾರಣ ಎಂದು ತಿಳಿಯದು, ಎರಡನೆಯವರಿಗೆ ಸೋಲಿನ ಕಾರಣ ಸ್ಪಷ್ಟವಾಗಿಲ್ಲ. ಹೀಗಾಗಿ ಇಬ್ಬರೂ ಭಾಷೆ ತಿಳಿಯದವರಾಗಿಯೇ ಉಳಿದಿದ್ದಾರೆ ಎನಿಸುತ್ತದೆ. ಆದ್ದರಿಂದಲೇ ಈ ಉದ್ಯಮದವರೆಲ್ಲರೂ ಡಾಮಿನಿಸಿಯ ಸ್ಥಿತಿಯಲ್ಲಿಯೇ ಇದ್ದಾರೆ ಎಂದು ನನ್ನ ಭಾವನೆ.

ಸದ್ಯದ ಸಂದರ್ಭದಲ್ಲಿ, ಎರಡನೆಯ ರೀತಿಯ ಜನರೇ ಹೆಚ್ಚಾಗಿದ್ದಾರೆ. ಆದ್ದರಿಂದಲೇ ನಮ್ಮಲ್ಲಿನ ಮುದ್ರಣ ಮಾಧ್ಯಮಗಳು ಮಾತ್ರವೇ ಅಲ್ಲದೇ, ಸಾಮಾನ್ಯ ಜನ ಸಹ ಇಂದು ಮೆಗಾ ಧಾರಾವಾಹಿಗಳನ್ನು ಹೀಗಳೆದು ಮಾತಾಡತೊಡಗಿದ್ದಾರೆ. ಆದ್ದರಿಂದ ಟಿ.ವಿ. ಉದ್ಯಮದ ಜನ ಆತ್ಮಾವಲೋಕನ ಮಾಡಿಕೊಳ್ಳುವುದು, ತಮ್ಮ ನಿಲುವು-ಸಮಸ್ಯೆಗಳನ್ನ ಅಭ್ಯಸಿಸಿ ಮಿತಿಗಳನ್ನೇ ವರದಾನವಾಗಿಸಿಕೊಳ್ಳುವ ಕಲೆಯನ್ನು ಕಲಿತು ಹೊಸ ದಾರಿ ಹುಡುಕುವುದು ಮತ್ತು ತಮ್ಮದೇ ದೃಷ್ಟಿಕೋನವನ್ನು ಇಟ್ಟು, ಈ ಉದ್ಯಮವನ್ನು ಆಳೆಯುತ್ತಾ ಇರುವವರಿಗೆ ಸ್ಪಷ್ಟ ಉತ್ತರವನ್ನು ಹೇಳಬೇಕಾಗಿದೆ.

**ಸಮಕಾಲೀನ ಸಮಸ್ಯೆಗಳು ಮತ್ತು ಮೆಗಾ ಧಾರಾವಾಹಿಗಳು**

ಮೆಗಾ ಎಂಬ ಕಲ್ಪನೆ ಈ ದೇಶಕ್ಕೆ ಹೊಸದೇನೂ ಅಲ್ಲ. ಮಹಾಕಾವ್ಯಗಳ ಪರಂಪರೆ ಯಿಂದಲೇ ಬೆಳೆದು ಬಂದವರು ನಾವು. ಅಂತೆಯೇ ನಮ್ಮಲ್ಲಿ ರಚಿತವಾಗುವ ಪ್ರತಿ ಕಥೆಗೂ ಜನಪ್ರಿಯ ಪುರಾಣ ಕಾವ್ಯವೊಂದರ ಸಮೀಕರಣ ಸಾಧ್ಯ. ಅಷ್ಟೇ ಅಲ್ಲದೇ, ಕಥನ ಪರಂಪರೆ ಯೊಂದು ಈ ದೇಶದ ಉದ್ದಗಲಕ್ಕೂ ಕಾಲದಿಂದ ಕಾಲಕ್ಕೆ ಹರಿದುಬರುತ್ತಲೇ ಇದೆ. ಆದರೆ ಟಿ.ವಿ. ಎಂಬ ಎಲೆಕ್ಟ್ರಾನಿಕ್ ಮಾಧ್ಯಮ ನಮಗೆ ಹೊಸದು. ಭಾರತದ ಸಂದರ್ಭದಲ್ಲಿ ಟಿ.ವಿ.ಯ ಇತಿಹಾಸ ಸರಿಸುಮಾರು ನಲ್ವತ್ತರ ಪ್ರಾಯದ್ದು. ಇನ್ನು ಕರ್ನಾಟಕದ ಸಂದರ್ಭ ದಲ್ಲಿ ಅದು ಇನ್ನೂ ಹದಿಹರೆಯದ್ದು. (ಪೂರ್ಣಾವಧಿಯ ಕನ್ನಡ ಕಾರ್ಯಕ್ರಮಗಳು ದೂರದರ್ಶನದ ಮೂಲಕ ಬಿತ್ತರವಾಗಲು ಆರಂಭವಾದದ್ದೇ ೧೯೮೫-೮೬ರಲ್ಲಿ.) ಈ ದೃಷ್ಟಿಯಿಂದ ನಮಗೆಲ್ಲರಿಗೂ ಈ ಮಾಧ್ಯಮ ಇನ್ನೂ ಹೊಚ್ಚ ಹೊಸದು. ನಾವು ಈ ಮಾಧ್ಯಮವನ್ನು ಕುರಿತು ತಿಳಿಯಬೇಕಾದ್ದು ಎಷ್ಟಿದೆಯೋ ಈ ಮಾಧ್ಯಮವನ್ನು ದುಡಿಸಿ ಕೊಳ್ಳಲು ನಾವು ಮಾಡಬೇಕಾದ ಕೆಲಸವೂ ಅಷ್ಟೇ ಇದೆ. ಈ ಹಂತದಲ್ಲಿ ನಾವು ನಮ್ಮ ಮಹಾಕಾವ್ಯ ಪರಂಪರೆಯನ್ನ ಒಂದು ಮಟ್ಟಕ್ಕೆ ಮತ್ತು ಅದಾಗಲೇ ಈ ಮಾಧ್ಯಮ ಕುರಿತು ನಮಗಿಂತ ಹೆಚ್ಚು ಅನುಭವವುಳ್ಳ ಪಾಶ್ಚಾತ್ಯರ ನಕಲುಗಳನ್ನು ಒಂದು ಮಟ್ಟಕ್ಕೆ ಮಾಡುತ್ತಾ ಕಾಲ ಹಾಕುತ್ತಿದ್ದೇವೆ. ಇದರೊಂದಿಗೆ ಉತ್ತರ ಭಾರತದ ಭಾಷೆಗಳಲ್ಲಿ ಆದ ಪ್ರಯೋಗಗಳ ನಕಲುಗಳನ್ನು ಸಹ ನಾವು ಮಾಡುತ್ತಿದ್ದೇವೆ. ಆದರೆ ಇವೆಲ್ಲವುಗಳ ನಡುವೆ ಈ ಮಾಧ್ಯಮವನ್ನು ನಮ್ಮದಾಗಿಸಿಕೊಳ್ಳುವ ಪ್ರಯತ್ನಗಳನ್ನು ಎಷ್ಟು ಮಾಡಿದ್ದೇವೆ ಎಂಬುದು ವಿಚಾರ ಮಾಡಬೇಕಾದಂತಹ ವಿಷಯ.

ಇದರಿಂದಾಚೆಗೆ ನಾವು ಕಥೆ ಹೇಳುವ ಭರದಲ್ಲಿ ನಮಗೇ ತಿಳಿಯದೆ (ಇದು ಸಾಮಾನ್ಯ ವಾಗಿ ಮೆಗಾ ಧಾರಾವಾಹಿಗಳನ್ನು ಮಾಡುವವರು ಮಾತ್ರ ಎದುರಿಸುವ ಸಮಸ್ಯೆ) ನಮ್ಮ ಕೆಲಸದಲ್ಲಿ ಕಳೆದುಹೋಗಿ, ನಾವೇ ಹೇಳಲೆಂದು ಹೊರಟ ಕಥೆಗಳಲ್ಲಿ ಸಿದ್ಧ ಸೂತ್ರಗಳನ್ನು ಬಳಸುತ್ತಾ, (ಅತಿಹೆಚ್ಚು ಜನಪ್ರಿಯವಾದ ಸರಕೊಂದರಿಂದ ಆಯ್ದ ಮಾದರಿಗಳನ್ನು ಬಳಸುವ ಅಭ್ಯಾಸವೊಂದಿದೆ. ಅದರಿಂದಲೇ ನಮ್ಮಲ್ಲಿ ಅತ್ತೆ-ಸೊಸೆ ಜಗಳದ, ಅಕ್ಕ-ತಂಗಿಯರ ಈರ್ಷೆಯ ಹೂರಣವನ್ನುಳ್ಳ ಕಥೆಗಳು ಹೆಚ್ಚಾಗಿವೆ ಎಂಬುದು), ನಮ್ಮದು ಎನ್ನುವ ಯಾವ ಗುಣವನ್ನೂ ತಯಾರಿಸುತ್ತಿರುವ ಧಾರಾವಾಹಿಗೆ ಎರೆಯದೆ, ಆ ಧಾರಾವಾಹಿಯನ್ನು ಪರಕೀಯವಾಗಿಸುತ್ತಾ ಇದ್ದೇವಾ ? ಅದರಿಂದಾಗಿಯೇ ಒಂದು ಕಾಲಕ್ಕೆ ಪ್ರತಿ ಸಂಜೆ ಎಲ್ಲಾ ಜನರು ಚರ್ಚಿಸುತ್ತಿದ್ದಂತಹ ಧಾರಾವಾಹಿಯ ಕಥೆಗಳು ಇಂದು ಆ ಚರ್ಚೆಗೆ ಕೂಡ ಗ್ರಾಸ ಒದಗಿಸದಂತಹ ಸ್ಥಿತಿಯನ್ನು ತಲುಪಿವೆಯೇ ? ನಮ್ಮ ಧಾರಾವಾಹಿಗಳಲ್ಲಿ ಸಮಕಾಲೀನ ಸಮಸ್ಯೆ ಗಳಿಗಿಂತ ಹೆಚ್ಚಾಗಿ ಕಳೆದು ಹೋದ ಅಥವಾ ಸವಕಲಾದ ಸಾಮಗ್ರಿಗಳೇ ಹೂರಣವಾಗಿ ಇರುವುದೇ ಇದಕ್ಕೆ ಕಾರಣವೇ ? ಈ ಎಲ್ಲಾ ಪ್ರಶ್ನೆಗಳಿಗೆ ನಾವು ಉತ್ತರ ಕಂಡುಕೊಳ್ಳಬೇಕಿದೆ.

**ಚ್ಯೂಯಿಂಗ್ ಗಮ್**

ಇದೇ ಚರ್ಚೆಯ ಮುಂದುವರಿಕೆಯಾಗಿ ನಾವು ಗಮನಿಸಬೇಕಾದ ಮತ್ತೊಂದು ಅಂಶವಿದೆ. ನಮ್ಮ ದೇಶದ ಅಥವಾ ಏಷ್ಯಾ ಖಂಡದವರ ಗುಣವೊಂದಿದೆ. ಅದು ಕಥೆ ತೋರಿಸುವುದಲ್ಲ- ಹೇಳುವುದು, ಎಂಬ ಅರ್ಥದೊಂದಿಗೆ. ಅಂದರೆ, ಅದಾಗಲೇ ನಾನು ಹೇಳಿದಂತೆ ಮೌಖಿಕವಾಗಿ ಕಥೆ ಹೇಳುವ ಪರಂಪರೆಯುಳ್ಳವರಾದ ನಾವುಗಳು, ನಿರಂತರ ವಾಗಿ ಎಲ್ಲ ಕಥೆಗಳನ್ನು ಪುರಾಣೀಕರಿಸುವ ಅಭ್ಯಾಸದವರು. ಹೀಗಾಗಿಯೇ ಸಹಜವಾಗಿ ಮಾತಾಡುವಾಗ ಸಹ, 'ಅಯ್ಯೋ, ಅಲ್ಲೇನಾಯ್ತು ಗೊತ್ತಾ ?' ಎಂಬ ಉದ್ಗಾರದ ಜೊತೆ ಯಲ್ಲಿಯೇ ಸಣ್ಣ ಅಪಘಾತದ ಸುದ್ದಿಯನ್ನೂ ವೈಭವೀಕರಿಸುವ ಪರಂಪರೆ ನಮ್ಮಲ್ಲಿದೆ. ಪ್ರಾಯಶಃ ಈ ಗುಣದ ಮುಂದುವರಿಕೆ ಎಂಬಂತೆ ನಮ್ಮ ಕಥೆಗಳನ್ನ ಹೇಳಬೇಕಾದಷ್ಟೇ ಹೇಳದೆ ಮುಂದುವರಿಸುವ ಗುಣವೂ ನಮಗಿದೆ. ಹೀಗಾಗಿಯೇ ಅನೇಕ ಮೆಗಾ ಧಾರಾವಾಹಿಗಳು ಇಂದು ಚ್ಯೂಯಿಂಗ್ ಗಮ್ ಎಂಬ ಹೆಸರು ಪಡೆದಿವೆಯೇನೊ ? ಈ ಎಳೆಯುವ ಗುಣಕ್ಕೆ ಈ ಉದ್ಯಮದಲ್ಲಿ ಅನೇಕ ವ್ಯಾವಹಾರಿಕ ಕಾರಣಗಳಿರಬಹುದು. ಅದು ಜನಪ್ರಿಯ ಧಾರಾವಾಹಿ ಯಾಗಿದ್ದು ಆ ಜನಪ್ರಿಯತೆಯ ಲಾಭ ಪಡೆವ ಉದ್ದೇಶದಿಂದ ಛಾನೆಲ್ಲಿನವರು ಅದೇ ಧಾರಾವಾಹಿಯನ್ನ ಇನ್ನಷ್ಟು ಕಂತುಗಳಿಗೆ ಮುಂದುವರೆಸಿ ಎಂದಿರಬಹುದು ಅಥವಾ ನಿರ್ಮಾಪಕ ತಾನಿನ್ನೂ ಬಳಸದೆ ಉಳಿಸಿಕೊಂಡಿರುವ ಫ್ರೀ ಕಮರ್ಷಿಯಲ್ ಟೈಮಿನ ಕಾರಣವಾಗಿ ಧಾರಾವಾಹಿಯನ್ನು ಮುಂದುವರೆಸಿ ಎಂದಿರಬಹುದು. ಈ ಎಲ್ಲಾ ಕಾರಣ ಗಳಿಗಿಂತ ವೀಕ್ಷಕನ ಆಸಕ್ತಿ ಉಳಿಸಿಕೊಳ್ಳುವುದೇ ಮುಖ್ಯ ಎಂಬುದನ್ನು ತಿಳಿದಿರುವ ಧಾರಾವಾಹಿ ತಯಾರಿಸುವ ತಂಡವು, (ಕೆಲವೊಮ್ಮೆ ಹೀಗೆ ಸಮಷ್ಟಿ ಪ್ರಜ್ಞೆಯಿಂದ ತಂಡ ಎನ್ನಲಾಗದು. ಏಕೆಂದರೆ ಕೆಲವು ಧಾರಾವಾಹಿಗಳಲ್ಲಿ ನಿರ್ಧಾರ ತೆಗೆದುಕೊಳ್ಳುವ ಸ್ಥಾನದಲ್ಲಿ ಕೇವಲ ನಿರ್ದೇಶಕನೊ, ಕಥೆಗಾರನೊ ಅಥವಾ ನಿರ್ಮಾಪಕನೊ ಒಬ್ಬನೇ ಇರುವ ಸಾಧ್ಯತೆಯೂ ಇದೆ.) ಇಂತಹ ಸಂದರ್ಭದಲ್ಲಿ ಎಚ್ಚರಿಕೆಯ ತೀರ್ಮಾನಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಆಗ ಮಾತ್ರ ಧಾರಾವಾಹಿಯೊಂದು ಚ್ಯೂಯಿಂಗ್ ಗಮ್ ಆಗುವ ಸಮಸ್ಯೆಯಿಂದ ತಪ್ಪಿಸಿಕೊಳ್ಳ ಬಹುದು. ಆದರೆ ಆ ತೀರ್ಮಾನಗಳು ಯಾವುವು ? ಅದಾಗಲೇ ಮುಕ್ತಾಯದ ಹಂತಕ್ಕೆ ಬಂದ ಕಥೆಯೊಂದನ್ನು ಲಂಬಿಸುವುದು ಹೇಗೆ ? ಈ ಪ್ರಶ್ನೆಗೆ ನಾವು ಉತ್ತರ ಕಂಡುಕೊಳ್ಳಬೇಕಿದೆ.

**ರೀಮೇಕ್ ಮತ್ತು ನಮ್ಮ ಸಂಸ್ಕೃತಿ-ಪರಿಸ್ಥಿತಿ**

ಇದು ಈಗ ಮೆಗಾ ಧಾರಾವಾಹಿಗಳು ಎದುರಿಸುತ್ತಿರುವ ಮತ್ತೊಂದು ಪ್ರಮುಖ ಸಮಸ್ಯೆ. ನಮ್ಮ ನಾಡಿನಲ್ಲಿ ಪರಭಾಷಿಕರು ಬೃಹತ್ ನಿರ್ಮಾಣ ಸಂಸ್ಥೆಗಳನ್ನು ಆರಂಭಿಸಿದ್ದಾರೆ. ಇದರಿಂದಾಗಿ ಈ ನಾಡಿನ ಅನೇಕ ಕಲಾವಿದರು ಮತ್ತು ತಂತ್ರಜ್ಞರಿಗೆ ನೆಮ್ಮದಿ ದೊರೆಯುವಂತಹ ಹಣ ದೊರೆಯುತ್ತಿದೆ. ಆದರೆ ಹೀಗೆ ತಯಾರಾಗುತ್ತಿರುವ ಧಾರಾವಾಹಿಗಳೆಲ್ಲ ಅದಾಗಲೇ ಮತ್ತೊಂದು ಭಾಷೆಯಲ್ಲಿ ತಯಾರಾದಂತಹ ಸರಕುಗಳು. ಅದೇ ಕಥೆಯನ್ನ ನಮ್ಮಲ್ಲಿ ಮಾಡುವುದು ಕ್ರಿಯಾಶೀಲ ವ್ಯಕ್ತಿಗಳಿಗೆ ತಂಗಳನ್ನದಲ್ಲಿ ಚಿತ್ರಾನ್ನ ಮಾಡಿದಂತೆ. ಈ ಕೆಲಸವನ್ನು ಸಹ ಒಬ್ಬ ಸೃಜನಶೀಲ ವ್ಯಕ್ತಿ ಹೊಸದೆನಿಸುವಂತೆ ಮಾಡಬಹುದು ಎನ್ನುವುದಕ್ಕೆ ಅನೇಕ ಉದಾಹರಣೆಗಳಿವೆ. ಹಿಚ್‌ಕಾಕ್‌ನಂತಹ ನಿರ್ದೇಶಕ ತಾನೇ ಒಂದೊಮ್ಮೆ ಚಿತ್ರಿಸಿದ ಕಥೆಯನ್ನು ಅಮೆರಿಕಾ ವರ್ಷನ್ ಎಂದು ಚಿತ್ರಿಸಿದ. ಹಾಗೆ ಚಿತ್ರಿತವಾದದ್ದು ಮೊದಲ ಆವೃತ್ತಿಗಿಂತ ಉತ್ತಮ ವಾದ ಆವೃತ್ತಿ ಎಂದೆನಿಸಿಕೊಂಡಿತ್ತಲ್ಲವೇ ? ಅದೇ ರೀತಿಯಾಗಿ ಕನ್ನಡ ಚಿತ್ರರಂಗದಿಂದಲೂ ಅನೇಕ ಉದಾಹರಣೆಗಳಿವೆ. ಇಲ್ಲಿ ತಯಾರಕನೊಬ್ಬ ಒಂದು ನೆಲದ ಕಥೆಯನ್ನ ತನ್ನ ನೆಲಕ್ಕೆ ಹೊಂದಿಸುವಾಗಲೇ ಕ್ರಿಯಾಶೀಲನಾಗಿಬಿಡುತ್ತಾನೆ. ಆದರೆ ನಮ್ಮ ಎದುರಿಗೆ ಪ್ರಶ್ನೆಯಾಗಿ ನಿಂತಿರುವುದು ತೀರಾ ವಿಭಿನ್ನವಾದ್ದು. ಇಲ್ಲಿ ತಯಾರಾಗುತ್ತಿರುವ ತಂಗಳು ಸರಕುಗಳು ಮೂಲದ ಯಥಾವತ್ ನಕಲಾಗಿ ಮಾತ್ರವೇ ಉಳಿದಿಲ್ಲ. ಅವು ನಮ್ಮದಲ್ಲದ ಸಂಸ್ಕೃತಿಯೊಂದನ್ನ ಇಲ್ಲಿಗೆ ಹಂಚುತ್ತಿವೆ. ಯಾವುದೊ ಮೆಟ್ರೊಗಳಲ್ಲಿ ಇರಬಹುದಾದ ಬದುಕಿನ ರೀತಿಯನ್ನ ನಮ್ಮ ಚಿಕ್ಕನಾಯಕನಹಳ್ಳಿಯ ಕನ್ನಡಿಗ ನೋಡಬೇಕಾಗಿ ಬಂದಿದೆ. ಇದು ನಾವು ತುರ್ತಾಗಿ ಎಚ್ಚರ ವಹಿಸಬೇಕಾದ ಸಂಗತಿ. ನಾವು ಜಾಗೃತರಾಗದೇ ಹೋದರೆ ಈ ಪರಿಸ್ಥಿತಿ ನಮ್ಮ ಸಂಸ್ಕೃತಿಯನ್ನ ನಮ್ಮದು ಎಂದು ಗುರುತಿಸುವ ಶಕ್ತಿಯನ್ನು ಸಹ ಕೊಂದು ಬಿಡಬಹುದು. ಇದು ನಮ್ಮ ನಾಡಿನ ಮೇಲೆ ಬಹು ಎಚ್ಚರದಿಂದಲೇ ಬಹುರಾಷ್ಟ್ರೀಯ ಕಂಪೆನಿಗಳು ಹೇರು ತ್ತಿರುವ ಸರಕು. ''ನಾಡಿನ ಎಚ್ಚರ ಕಾಯುವ ಕಥೆಗಳಿಂದ ಜನ ಜಾಗೃತರಾಗಿ, ಎಲ್ಲವನ್ನೂ ಪ್ರಶ್ನೆ ಮಾಡುವಂತೆ ಆಗುವುದಕ್ಕಿಂತ, ಇಡೀಯ ನಾಡಿನ ಜನ ಯಾವುದೋ ಶ್ರೀಮಂತ ಕುಟುಂಬದ ಒಳಗಿನ ಕಲಹ ನೋಡುತ್ತಾ, ತಮ್ಮ ಸುತ್ತಲ ಸಮಸ್ಯೆಗಳನ್ನು ಮರೆತು ಬಿಡಲಿ. ಆ ಮೂಲಕ ಅವರಿಗೆ ತಮ್ಮ ಸುತ್ತಲ ವಿಷಯಗಳು ಕ್ಷುಲ್ಲಕ ಎನಿಸಿ ಅವರು ಯಾವುದನ್ನೂ ಪ್ರಶ್ನಿಸದೆ, ಯಾರೊಂದಿಗೂ ವಾದಕ್ಕೆ ಇಳಿಯದೆ ಅಫೀಮು ತಿಂದವರಂತೆ ಇರಲಿ'' ಎಂಬುದು ಅಥವಾ ಪ್ರಖ್ಯಾತ ಅರ್ಥ ಶಾಸ್ತ್ರಜ್ಞ ನೋಮ್ ಚೋಮ್‌ಸ್ಕಿ ಹೇಳುವಂತೆ 'ನಡೆದಾಡುವ ಯಂತ್ರಗಳಾಗಲಿ' ('ಕ್ಲಾಸ್ ವಾರ್‌ಫೇರ್' ಹೊತ್ತಿಗೆಯಲ್ಲಿ) ಎಂಬುದೇ ಬಹುರಾಷ್ಟ್ರೀಯ ಕಂಪೆನಿಗಳ ಮೂಲಮಂತ್ರ. ಆ ಕಾರಣಕ್ಕೆ ಅವರು ಟೆಲಿವಿಷನ್ ಪೆಟ್ಟಿಗೆ ಯನ್ನು ಕಂಡುಹಿಡಿದದ್ದು ಕೂಡ. ಆದರೆ ಆ ಟಿ.ವಿ.ಯಿಂದಲೇ ಅನ್ನ ಹುಟ್ಟಿಸಿಕೊಳ್ಳುತ್ತಿರುವ ನಾವು ನಮ್ಮ ತನವನ್ನ ಕಳೆದುಕೊಳ್ಳದಂತೆ ಕ್ರಿಯಾಶೀಲರಾಗಬೇಕಾಗಿದೆ. ಇಲ್ಲದೆ ಹೋದರೆ. ''ಯಾವುದೋ ಭಾಷೆಯ ಕಥೆಯ ಯಥಾವತ್ ನಕಲನ್ನು ನೋಡುವುದೇನು ? ಅದೇ ಭಾಷೆಯಲ್ಲಿಯೇ ಆ ಕಥೆ ನೋಡುತ್ತೇನೆ'' ಎಂಬ ಸ್ಥಿತಿಗೆ ಕನ್ನಡ ಕಾರ್ಯಕ್ರಮಗಳ ವೀಕ್ಷಕ ಬರಲಿದ್ದಾನೆ. ನಂತರ ಈ ರೀಮೇಕ್‌ಗಳ ಮೂಲಕ ಅನ್ನ ಸಂಪಾದಿಸುತ್ತಿರುವ ಅನೇಕರು ನಿರುದ್ಯೋಗಿಗಳಾಗಬೇಕಾಗುತ್ತದೆ. ನಮ್ಮ ಪರಿಸ್ಥಿತಿ ಚಿನ್ನದ ಮೊಟ್ಟೆ ಇಡುವ ಕೋಳಿಯ ಹೊಟ್ಟೆ ಕುಯ್ದವನದ್ದಕ್ಕಿಂತ ಭಿನ್ನವಾಗಿ ಉಳಿಯುವುದಿಲ್ಲ. ಹೀಗಾಗದೆ ಇರುವುದಕ್ಕೆ ನಾವು ಅನೇಕ

ಎಚ್ಚರ ಗಳನ್ನವಹಿಸಬೇಕಾಗುತ್ತದೆ ಮತ್ತು ಈ ಎಲ್ಲಾ ಪ್ರಶ್ನೆಗಳಿಗೆ ಆದಷ್ಟು ಬೇಗ ಉತ್ತರ ಕಂಡುಕೊಳ್ಳಬೇಕಾಗಿದೆ. ರೀಮೇಕ್ ವಿರೋಧಿಗಳಾಗದೆ ಈ ಮೇಕ್‌ಗಳನ್ನು ನಮ್ಮದಾಗಿಸಿಕೊಳ್ಳಬೇಕಿದೆ.

**ತಿಂಗಳ ಸಂಬಳದ ಬೊಂಬೆಗಳು**

ಈ ರೀಮೇಕ್ ಧಾರಾವಾಹಿಗಳಿಗೆ ಸಂಬಂಧಿತ ಪ್ರಶ್ನೆಗಳ ಜೊತೆಯಲ್ಲಿಯೇ ಟಿ.ವಿ. ಉದ್ಯಮಕ್ಕೆ ಸಂಬಂಧಿತವಾದ ಮತ್ತೊಂದಷ್ಟು ಪ್ರಶ್ನೆಗಳು ಹುಟ್ಟಿವೆ. ಈ ರೀಮೇಕ್ ಧಾರಾವಾಹಿಗಳನ್ನ ನಿರ್ಮಿಸುತ್ತ ಇರುವವರು ಅನ್ಯರಾದರೂ ಧಾರಾವಾಹಿಯ ಇತರ ತಾಂತ್ರಿಕ ಕೆಲಸಗಳನ್ನು ಮಾಡುತ್ತಿರುವವರು ನಮ್ಮವರೇ. ಆದರೆ ಇವರುಗಳಿಗೆ ಯಾವ ನಿರ್ಧಾರದ ಸ್ವಾತಂತ್ರ್ಯವೂ ಇಲ್ಲ. ಯಾರದೋ ಕಥೆ, ಯಾರದೋ ಸಂಭಾಷಣೆ, ಯಾರದೋ ನಿರ್ದೇಶನ ಎಂಬಂತಹ ವಾತಾವರಣ. ಇಲ್ಲಿ ಎಲ್ಲಾ ನಿರ್ಧಾರಗಳನ್ನೂ ಮಾಡುವವನು ಅನ್ಯಭಾಷೀಯವಾದ ನಿರ್ಮಾಣ ನಿಯಂತ್ರಕ. ಧಾರಾವಾಹಿಯ ನಿರ್ದೇಶಕನಿಗೆ ತಾನು ನಿರ್ದೇಶಿಸಿದ ಕಾರ್ಯಕ್ರಮವನ್ನು ಸಂಕಲನದ ಹಂತದಲ್ಲಿ ನೋಡುವ ಸ್ವಾತಂತ್ರ್ಯವನ್ನು ಸಹ ಈ ನಿರ್ಮಾಣ ನಿಯಂತ್ರಕ ಕಿತ್ತುಕೊಂಡಿರುತ್ತಾನೆ. ಇಲ್ಲಿ ಎಲ್ಲ ತಂತ್ರಜ್ಞರು ಈ ನಿಯಂತ್ರಕನ ಆಜ್ಞಾನು ವರ್ತಿಗಳು. ಈ ಪರಿಸ್ಥಿತಿಯಲ್ಲಿ ಯಾವ ವ್ಯಕ್ತಿ ಕ್ರಿಯಾಶೀಲನಾಗಲು ಸಾಧ್ಯ? ಎಲ್ಲರೂ ತಿಂಗಳ ಸಂಬಳಕ್ಕೆ ದುಡಿವ ಬೊಂಬೆಗಳಾಗಿರುತ್ತಾರೆ. ಇದು ಬೇಡ ಎಂದು ಒಬ್ಬ ನಿರ್ದೇಶಕನೊ ಅಥವಾ ಸಂಕಲನಕಾರನೊ ನಿರ್ಧರಿಸಿದರೆ ನಿರ್ಮಾಣ ನಿಯಂತ್ರಕ ಚಿಂತೆಗೆ ಒಳಗಾಗುವುದೇ ಇಲ್ಲ. ಆತ ವಿರೋಧಿ ಧ್ವನಿಯನ್ನು ಹೊರಗಟ್ಟಿ ಮತ್ತೊಂದು ಬೊಂಬೆಯನ್ನು ತಂದು ಕೂರಿಸುತ್ತಾನೆ. ಹೀಗಾಗುವುದಕ್ಕಿಂತ ಹಣ ಹಾಕುವವನ ಮರ್ಜಿ ಹಿಡಿದು ಸಾಗೋಣವೆಂದರೆ ಅದಕ್ಕೂ ಕಷ್ಟಗಳಿವೆ. ಆ ನಿರ್ದೇಶಕ ತನ್ನ ಯಾವ ನಿಯಂತ್ರಣಕ್ಕೂ ಒಳಗಾಗದ ಕಥೆಯೊಂದರ ಜನಪ್ರಿಯತೆಗೆ (ಅವೈಜ್ಞಾನಿಕ) ಮಾನದಂಡವಾದ ಟಿ.ಆರ್.ಪಿ. ಎಂಬ ಭೂತಕ್ಕೆ ನೇರ ಹೊಣೆಗಾರಿಕೆಯನ್ನು ಹೊರಬೇಕಾಗುತ್ತದೆ. ನಿರ್ಮಾಣ ನಿಯಂತ್ರಕನಂತೂ ಪ್ರತಿದಿನ ನಿರ್ದೇಶಕನನ್ನ ಈ ಟಿ.ಆರ್.ಪಿ.ಯ ಹೆಸರು ಹೇಳಿ, ಅದು ಕೆಳಗೆ ಬಿದ್ದರೆ ನಿನ್ನನ್ನು ಬದಲಿಸುತ್ತೇನೆ ಎನ್ನುತ್ತಾ ಇರುತ್ತಾನೆ. ಹೀಗಾಗಿ ಈ ರೀಮೇಕ್ ಕಾರ್ಯಕ್ರಮಗಳ ನಿರ್ದೇಶಕರು ರಸ್ತೆಯಲ್ಲಿ ಯಾರೋ ಸಿಕ್ಕು ಅವರ ಹೆಸರಿನ ಕಾರ್ಯಕ್ರಮವನ್ನ ಹೊಗಳಿದರೆ ದೇಶಾವರಿ ನಗು ಬೀರುತ್ತಾರೆ, ಬೈದರೆ ಬೊಟ್ಟನ್ನು ಎತ್ತಲೊ ತೋರಿಸುತ್ತಾರೆ. ಒಟ್ಟಾರೆಯಾಗಿ ಆ ನಿರ್ದೇಶಕರ ಬದುಕು ಸಿಂಬಳದಲ್ಲಿ ಬಿದ್ದ ನೊಣದಂತಾಗಿರುತ್ತದೆ ಎಂದರೆ ತಪ್ಪಾಗಲಾರದೇನೊ. ಈ ಪರಿಸ್ಥಿತಿಯಿಂದ ಅವರು ಹೊರಬರದೆ ಹೋದರೆ ಅವರ ಮನಸ್ಸುಗಳ ಮೇಲೆ ಆಗಬಹುದಾದ ಆಘಾತ ಅಗಾಧವಾದದ್ದು ಎಂದಷ್ಟೇ ಈಗ ಹೇಳಬಹುದು.

ಇನ್ನು ಇಂತಹ ಧಾರಾವಾಹಿಗಳಲ್ಲಿ ಅಭಿನಯಿಸುತ್ತಿರುವವರಿಗೆ ಬರೋಣ. ಇವರು ಆ ಕಂಪೆನಿಗಳಿಗೆ ಜೀತಕ್ಕೆ ಇರುವವರು. ಪ್ರತಿದಿನ ಅವರ ಪಾತ್ರದ ಚಿತ್ರೀಕರಣ ಇರಲಿ, ಇಲ್ಲದಿರಲಿ ಇವರು ಅಲ್ಲಿಗೆ ಹೋಗುತ್ತಾರಂತೆ. ಮೇಕಪ್ ಮಾಡಿಕೊಂಡು ಕೂರುತ್ತಾರಂತೆ. ಅಥವಾ ತಮಗಾಗಿ ಕರೆ ಬರುವವರೆಗೆ ಜಗತ್ತಿನ ಎಲ್ಲಾ ಗಾಳಿಸುದ್ದಿಗಳನ್ನೂ ಕುರಿತು ಹರಟುತ್ತಾರಂತೆ. ಇನ್ನೂ ಕೆಲವರು ಅಲ್ಲೇ ತಮ್ಮ ಚಪ್ಪಾಳೆ ಸ್ಪೋರ್ಟ್ಸ್ ಆರಂಭಿಸುತ್ತಾರಂತೆ. ಅವರ ಈ ಪ್ರಾಮಾಣಿಕತೆಗೆ ತಿಂಗಳ ಸಂಬಳ ಬಂದುಬಿಡುತ್ತದೆ. ಹೀಗೆ ಕಲಾವಿದರು ತಮ್ಮಲ್ಲಿರುವ ಶಕ್ತಿಯೊಂದನ್ನು ಯಾರಿಗೂ ಗುತ್ತಿಗೆಗೆ ಕೊಡುವುದು ತೀರಾ ದೊಡ್ಡ ದುರಂತ ಎಂದು ನನ್ನ ಅಭಿಪ್ರಾಯ. (ಇಲ್ಲಿ ತಟ್ಟನೆ, ಮೂರು ನೂರು ವರ್ಷಗಳ ಹಿಂದೆ ನಮ್ಮ ದೇಶದ ಗುಡಿಕೈಗಾರಿಕೆಯ ಕುಶಲಕರ್ಮಿಗಳನ್ನ ಆಗಿನ ವಸಹಾತುಶಾಹಿಗಳು ದುಡಿಸಿಕೊಂಡ ರೀತಿ, ನಂತರ ಆ ಕುಶಲಕರ್ಮಿಗಳು ಹೇಗೆ ಇಡೀ ನಾಡಿನಿಂದಲೇ ಕಣ್ಮರೆಯಾದರು ಎಂಬ ಪ್ರಸಂಗ ನೆನಪಿಗೆ ಬರುತ್ತಿದೆ. ನಮ್ಮ ಕಲಾವಿದರನ್ನು ಆ ಕುಶಲಕರ್ಮಿಗಳಿಗೆ ಹೋಲಿಸುವುದಕ್ಕೆ ಸಾಧ್ಯವಿಲ್ಲವಾದರೂ ಕಲಾವಿದನೊಬ್ಬ ತನ್ನ ಕಲೆಯನ್ನ ರೂಢಿಸಿ, ಬೆಳೆಸಿಕೊಳ್ಳುವತ್ತ ಗಮನ ಹರಿಸುವ ಬದಲು, ಆರ್ಥಿಕ ಅನುಕೂಲ ಎಂಬ ಒಂದೇ ಕಾರಣಕ್ಕೆ ಜೀತವನ್ನು ಒಪ್ಪಿಕೊಂಡು, ಇನ್ನೆಲ್ಲವನ್ನೂ ಮರೆಯುವತ್ತ ಹೆಜ್ಜೆ ಇಡುವುದಿದೆಯಲ್ಲ ಇದು ಗಾಬರಿ ಹುಟ್ಟಿಸುವ ಸಂಗತಿ. ನಿಧಾನವಾಗಿ ಆ ವ್ಯಕ್ತಿಯೊಳಗಿನ ನಟ ನಾಪತ್ತೆಯಾಗುತ್ತಾನೆ. ಆ ಜಾಗದಲ್ಲಿ ಕೇವಲ ದುಡ್ಡಿಗಾಗಿ ದುಡಿಯುವ ಯಂತ್ರವೊಂದು ತಯಾರಾಗುತ್ತದೆ. ಇದರಿಂದ ಉದ್ಯಮಕ್ಕೆ ದೊಡ್ಡ ತೊಂದರೆಯಾಗದು. ಅದು ಹೊಸ ಕಲಾವಿದರನ್ನು ತಯಾರು ಮಾಡಿಕೊಳ್ಳುತ್ತದೆ. ಆದರೆ ಈ 'ಯಂತ್ರವಾದ' ವ್ಯಕ್ತಿ ನಾಶವಾಗಿರುತ್ತಾನೆ. ಅದಾಗಬಾರದು.) ಒಟ್ಟಾರೆಯಾಗಿ ಈ ಜೀತ ಪದ್ಧತಿಯ ಪರಿಣಾಮವಾಗಿ ಇಡೀ ಉದ್ಯಮದ ಮೇಲೆ ಒಂದು ವಿಚಿತ್ರ ಕರಿನೆರಳು ಹರಡುತ್ತಿದೆ. ಇದನ್ನ ತಪ್ಪಿಸಲು ಏನು ಮಾಡಬೇಕು ಎಂಬುದನ್ನ ಎಲ್ಲರೂ ಆಲೋಚಿಸಬೇಕಾಗಿದೆ.

**ಚಂದನ-ದೂರದರ್ಶನ ಎಂಬ ದಂತಗೋಪುರ**

ಇದು ಸರ್ಕಾರಿ ಛಾನೆಲ್ಲು. ಆದರೆ ಈ ನಾಡಿಗೆ ಮೆಗಾ ಧಾರಾವಾಹಿಗಳ ರುಚಿ ಹತ್ತಿಸಿದ್ದು ಈ ವಾಹಿನಿಯೇ. ಈ ವಾಹಿನಿಯಲ್ಲಿ ಮಧ್ಯಾಹ್ನ ೨.೩೦ರಿಂದ ಸಂಜೆ ೫ರವರೆಗೆ ಬಿತ್ತರವಾಗುತ್ತಿದ್ದ ಧಾರಾವಾಹಿಗಳನ್ನ ನಮ್ಮ ನಾಡಿನ ಜನ ತಮ್ಮ ಕೆಲಸಗಳನ್ನೆಲ್ಲಾ ಬದಿಗಿರಿಸಿ ನೋಡುತ್ತಿದ್ದರು. ಅದರಿಂದಲೇ ಒಂದು ಕಾಲಕ್ಕೆ ದಿನಕ್ಕೆ ನಾಲ್ಕರಂತೆ ಪ್ರಸಾರವಾಗುತ್ತಿದ್ದ ಧಾರಾವಾಹಿಗಳ ಸಂಖ್ಯೆ ಇಂದು ದಿನವೊಂದಕ್ಕೆ ೨೩ರ ಸಂಖ್ಯೆಗೆ ಏರಿರುವುದು. ಒಂದರ್ಥಕ್ಕೆ ಚಂದನ-ದೂರದರ್ಶನವನ್ನು ಮೆಗಾ ಧಾರಾವಾಹಿಗಳ ಮಹಾಮಾತೆ ಎಂದು ಕರೆಯಲು ಅಡ್ಡಿಯಿಲ್ಲ. ಹೀಗೆ ಮೆಗಾ ಧಾರಾವಾಹಿಗಳ ಸಂಖ್ಯೆ ಹೆಚ್ಚಿರುವುದರಿಂದಲೇ ಈ ಹಿಂದೆ ಮಾತಾಡಿದ ರೀಮೇಕ್ ಧಾರಾವಾಹಿಗಳಿಗೂ ದಾರಿಯಾಗಿದೆ ಎನ್ನಬಹುದೇನೊ. ಛಾನೆಲ್ಲುಗಳ ಪ್ರಸಾರದ ವೇಳೆಯನ್ನು ತುಂಬಲು ಹೊಸ ಕಥೆ ಹೊಸೆಯಲು ತಗಲುವ ಸಮಯ ಮತ್ತು ಆಗುವ ಖರ್ಚನ್ನ ಮಾಡುವ ಬದಲು ಇನ್ನೆಲ್ಲೋ ಜನಪ್ರಿಯವಾದುದನ್ನೇ ಉಣಿಸಿ, ಪ್ರಾಜೆಕ್ಟ್ ಒಂದನ್ನ ಸಮಯಕ್ಕೆ ಸರಿಯಾಗಿ ಸರಿದೂಗಿಸಿದೆವು ಎಂಬ ಗುಣ ನಿರ್ಮಾಪಕರುಗಳದ್ದು ಅಥವಾ ನಿರ್ಮಾಣ ಸಂಸ್ಥೆಗಳದ್ದಾಗಿ ಇರಬಹುದು. ಇದು ಅದಾಗಲೇ ಎತ್ತಿರುವ ಪ್ರಶ್ನೆಗೆ ಮತ್ತಷ್ಟು ಗ್ರಾಸ ಮಾತ್ರ. ಆದರೆ ಸದ್ಯದ ಪರಿಸ್ಥಿತಿಯಲ್ಲಿ ಚಂದನ-ದೂರದರ್ಶನಕ್ಕೆ ಧಾರಾವಾಹಿಗಳನ್ನು ತಯಾರಿಸುತ್ತಿರುವವರ ಸಮಸ್ಯೆ ಭಿನ್ನವಾದದ್ದು.

ಈ ವಾಹಿನಿಯಲ್ಲಿ ಈಗ ಬಿಡ್ಡಿಂಗ್ ಎಂಬ ವ್ಯವಸ್ಥೆಯೊಂದು ಜಾರಿಗೆ ಬಂದಿದೆ. ವಾಹಿನಿಗೆ ಅತಿ ಹೆಚ್ಚು ಹಣ ಕಟ್ಟುವ ನಿರ್ಮಾಪಕನಿಗೆ ತನ್ನ ಧಾರಾವಾಹಿಯನ್ನು ಪ್ರಸಾರ ಮಾಡುವ ಹಕ್ಕು ಈ ಮೂಲಕ ದೊರೆಯುತ್ತದೆ. ಇಂತಹ ವ್ಯವಸ್ಥೆಯಿಂದ ವಾಹಿನಿಗೆ ಹೆಚ್ಚು ಹಣ ಬರುತ್ತದೆ ಮತ್ತು ಹಣವುಳ್ಳವರು ಧಾರಾವಾಹಿಗಳನ್ನು ಮಾಡುವುದು ಸಾಧ್ಯವಾಗುತ್ತದೆ. ಆದರೆ ಈ ವ್ಯವಸ್ಥೆಯಿಂದ ಹೊಸ ಸಮಸ್ಯೆಗಳು ತಯಾರಕರಿಗೆ/ತಂತ್ರಜ್ಞರಿಗೆ ಆಗುತ್ತಿವೆ. ತಯಾರಕ ಧಾರಾವಾಹಿಯೊಂದರ ಮಾರುಕಟ್ಟೆಯಿಂದ ಬರುವ ಹಣದಲ್ಲಿ ಪ್ರಮುಖ ಪಾಲನ್ನು ಪ್ರಸಾರ ಶುಲ್ಕಕ್ಕಾಗಿ ವಾಹಿನಿಗೇ ಕಟ್ಟಿಬಿಡುತ್ತಾನೆ. ಇನ್ನು ತನ್ನ ಕಥೆಯನ್ನು ತೆರೆಗೆ ತರುವುದಕ್ಕೆ ಆತನಲ್ಲಿ ಉಳಿಯುವುದು ಅತೀ ಕಡಿಮೆ ಹಣ. ಈ ಹಣದಲ್ಲಿ ತಯಾರಕ ಅನಿವಾರ್ಯವಾಗಿ ದಿನವೊಂದರಲ್ಲಿ ಒಂದು ಅಥವಾ ಕೆಲವೊಮ್ಮೆ ಎರಡು ಪ್ರಕರಣಗಳನ್ನ ಚಿತ್ರಿಸಬೇಕಾದ ಸ್ಥಿತಿ ತಲುಪುತ್ತಾನೆ. ಇಂಥಲ್ಲಿ ಧಾರಾವಾಹಿಯೊಂದರ ಗುಣಮಟ್ಟ ಹೆಚ್ಚಿಸುವ ಚಿಂತೆಗಿಂತ ಆರ್ಥಿಕ ಮಿತಿಗಳನ್ನು ದಾಟಿಕೊಳ್ಳುವುದೇ ಪ್ರಧಾನ ಕೆಲಸವಾಗಿಬಿಡುತ್ತದೆ. ಹೀಗಾಗಿ ತಯಾರಾದ ಧಾರಾವಾಹಿಗಳು ನಿರ್ಜೀವ ವಾಗತೊಡಗುತ್ತವೆ. ಅದರೊಂದಿಗೆ ಧಾರಾವಾಹಿಯ ಜನಪ್ರಿಯತೆ ಕಡಿಮೆಯಾಗುತ್ತದೆ. ಆ ಧಾರಾವಾಹಿಗೆ ಬರುವ ಜಾಹೀರಾತು ಕಡಿಮೆಯಾಗುತ್ತದೆ. ಅಂತಿಮವಾಗಿ ಆ ನಿರ್ಮಾಪಕ ಧಾರಾವಾಹಿಯನ್ನ ನಿಲ್ಲಿಸುವ ಸ್ಥಿತಿಗೆ ಬರುತ್ತಾನೆ. (ಕೆಲವು ನಿರ್ಮಾಪಕರು ಅನೇಕರಿಗೆ ಕೊಡಬೇಕಾದ ಬಾಕಿಗಳ ಜೊತೆಯಲ್ಲಿಯೇ ನಾಪತ್ತೆಯಾಗಿರುವ ಉದಾಹರಣೆಗಳೂ ಇವೆ. ಈ ಉದಾಹರಣೆಗಳು ಕೇವಲ ಚಂದನ-ದೂರದರ್ಶನ ವಾಹಿನಿಗೆ ಸೀಮಿತವಲ್ಲ. ಇತರ ಕನ್ನಡ ವಾಹಿನಿಗಳಲ್ಲಿಯೂ ಇಂತಹ ಅನೇಕ ಪ್ರಕರಣಗಳಾಗಿವೆ.) ಒಟ್ಟಾರೆಯಾಗಿ ಒಂದೊಮ್ಮೆ ಅನೇಕರಿಗೆ ನೆಮ್ಮದಿಯನ್ನು ನೀಡಿದ್ದ ವಾಹಿನಿಯೊಂದು ನೋಡುಗರನ್ನು ಕಳೆದುಕೊಳ್ಳುತ್ತದೆ. ಈ ಉದ್ಯಮ ಮತ್ತೆ, ಚಿನ್ನದ ಮೊಟ್ಟೆಯನ್ನಿಡುವ ಕೋಳಿಯನ್ನ ಕೊಂದವನಂತಾಗುತ್ತದೆ. ಈ ಸ್ಥಿತಿಯನ್ನು ತಲುಪದಿರುವಂತೆ ಮಾಡಲು ನಾವು ಅನೇಕ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಬೇಕಿದೆ ಮತ್ತು ಸರ್ಕಾರಿ ವ್ಯವಸ್ಥೆಯೊಂದನ್ನ ಪ್ರಜಾಸತ್ತಾತ್ಮಕವಾಗಿಯೂ –ಜನರಂಜನೀಯವಾಗಿಯೂ ಉಳಿಸಿಕೊಳ್ಳಲು ಆ ವ್ಯವಸ್ಥೆಯ ಜೊತೆಯಲ್ಲಿಯೇ ಕುಳಿತು ಪರಿಹಾರಗಳನ್ನು ಹುಡುಕಬೇಕಿದೆ.

**ಕ್ರಿಯಾಶೀಲತೆ ಎಂಬ ಮಾಯಾಗನ್ನಡಿ**

ಹೌದು, ಕ್ರಿಯಾಶೀಲತೆ ಎಂಬುದು ಈ ಉದ್ಯಮದವರೆಲ್ಲರ ಎದುರಿಗೂ ಇರುವ ಮಾಯಾಗನ್ನಡಿ. ತಾವು ಮಾಡಿದ ಅಡಿಗೆಯನ್ನ ಪ್ರತಿನಿತ್ಯ ತಾವೇ ಉಣ್ಣುತ್ತಾ, ಅದು ಮತ್ತಷ್ಟು ಜನಾದರ ಪಡೆಯಲಿ ಎಂದು ಬಯಸುತ್ತಾ, ಧಾರಾವಾಹಿಗಳ ತಯಾರಕರು ಕುಳಿತಿದ್ದಾರೆ. ಆದರೆ ಇಲ್ಲಿ ಆತ್ಮರತಿಯ ಸ್ಥಿತಿಗಿಂತ ಆತ್ಮ ವಿಮರ್ಶೆಯ ಸ್ಥಿತಿ ಬರಬೇಕಿದೆ. ಇನ್ನಾರೊ ತಯಾರಿಸಿದ್ದನ್ನ ಹೀಗಳೆಯುವುದರಲ್ಲಿ ಕಾಲ ಹಾಕುವುದಕ್ಕಿಂತ ನಾವು ತಯಾರಿಸಿದ್ದನ್ನ ಸ್ಫಟಿಕಶುದ್ಧ ಮನಸ್ಸಿನಿಂದ ನೋಡಬೇಕಾಗಿದೆ. ಆ ಮೂಲಕ ಈ ಪ್ರಸ್ತಾವನೆಯ ಆರಂಭದಲ್ಲಿ ನಾನು ಹೆಸರಿಸಿದ ಅನೇಕರ ಅಭಿಪ್ರಾಯಗಳನ್ನು ನಾವು ನಮ್ಮ ಕೃತಿಗಳ ಮೂಲಕವೇ ಬದಲಿಸಬೇಕಿದೆ.

ಈ ನಿಟ್ಟಿನಲ್ಲಿ ಟೆಲಿವಿಷನ್ ಉದ್ಯಮದಲ್ಲಿ ಇರುವವ ರೆಲ್ಲರೂ ಇಲ್ಲಿ ಗುರುತಿಸಿರುವ ಕೆಲವು ಪ್ರಶ್ನೆಗಳಿಂದಾಚೆಗೆ ಇನ್ನೂ ಅನೇಕ ಪ್ರಶ್ನೆಗಳನ್ನ ಕೇಳಿಕೊಂಡು, ಉತ್ತರಿಸಲಿ. ಆ ಮೂಲಕ ಈ ನಾಡಿನ ಅನೇಕ ಕಲಾವಿದರ ಬಾಳಿನಲ್ಲಿ ನಗು-ನೆಮ್ಮದಿಯನ್ನು ತಂದುಕೊಟ್ಟಿರುವ ಟೆಲಿವಿಷನ್ ಉದ್ಯಮವನ್ನು ಬಹುಕಾಲ ಉಳಿಸಿಕೊಳ್ಳುವಂತಾಗಲಿ ಎಂದು ನಾನು ಹಾರೈಸುತ್ತೇನೆ.

(ಒಂದು ವಿಚಾರ ಸಂಕಿರಣಕ್ಕೆ ನೀಡಲಾದ ಪ್ರಸ್ತಾವನೆ)

ಬಿ. ಸುರೇಶ

೧೦೪೬, ೧೪ನೇ ಕ್ರಾಸ್, ೨೫ನೇ ಮುಖ್ಯರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು-೫೬೦ ೦೭೦

ಒಳ್ಳೆಯ ಓದು




**ಸುನೀತ ಸಂಪದ** (ಕವನ ಸಂಕಲನ)

ಚೆನ್ನವೀರ ಕಣವಿ

**ಪುಟ : ೨೨೪** ಬೆಲೆ : ರೂ. ೧೦೦

**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಬಳ್ಳಾರಿ - ೫೮೩ ೧೦೩

ಪಶ್ಚಿಮದ ಸಾಹಿತ್ಯ ಪ್ರಕಾರವೆಂದೇ ಪರಿಗಣಿಸಲ್ಪಟ್ಟ ಸಾನೆಟ್‌ಗಳ ರಚನೆ ಕನ್ನಡದಲ್ಲಿ ಸಾಧ್ಯವೆಂದು ತೋರಿಸಿದ ನಾಡಿನ ಹೆಸರಾಂತ ಕವಿ ಚೆನ್ನವೀರ ಕಣವಿ. ಕನ್ನಡಕ್ಕೆ ಹೆಚ್ಚಿನ ಸಂಖ್ಯೆಯ ಸುನೀತಗಳನ್ನು ರಚಿಸುತ್ತ, ಕಾವ್ಯದ ಮೂಲಕ ನಮ್ಮನ್ನು ಭಾವಲೋಕಕ್ಕೆ ಆಮಂತ್ರಿಸುವ ಈ ಕೃತಿ ಅವರ ಸುನೀತಗಳ ಸಂಗ್ರಹ. ನಡೆದ ಒಂದು ಘಟನೆಯಿರಲಿ, ಪುಟ್ಟ ವಸ್ತುವಾಗಲಿ, ವ್ಯಕ್ತಿ ಚಿತ್ರಗಳ ಎತ್ತರದ ಗಾಂಭೀರ್ಯವಿರಲಿ, ಅದನ್ನವರು ತನ್ನ ತೆಕ್ಕೆಗೆ ಎಳೆದುಕೊಂಡು ಅದಕ್ಕೊಂದು ಚೌಕಟ್ಟು ನೀಡಿ ಭದ್ರಪಡಿಸುತ್ತಾರೆ.



**ಸಫ್ದರ್ ಹಾಶ್ಮಿಯವರ ಮಕ್ಕಳ ನಾಟಕಗಳು**

ಅನು : ಕಾಶೀನಾಥ ಅಂಬಲಗೆ

**ಪುಟ : ೪೯** ಬೆಲೆ : ರೂ. ೬೫

**ಪ್ರಗತಿ ಪ್ರಕಾಶನ**, ಜಯನಗರ, ಕಲಬುರ್ಗಿ - ೫೮೫ ೧೦೫

ಪಠ್ಯೇತರ ಚಟುವಟಿಕೆಗಳಲ್ಲಿ ಸಂತೋಷದಿಂದ ತೊಡಗಿಸಿಕೊಳ್ಳುವ ಚಿಣ್ಣರಿಗಾಗಿ ಸೊಗಸಾದ ಐದು ನಾಟಕಗಳು ಹಿಂದಿಯಿಂದ ಅನುವಾದಗೊಂಡಿವೆ. ವರ್ಣಮಯ ಬದುಕು, ಇಂಪಾದ ಸಂಗೀತ, ಪರಸ್ಪರ ಗೌರವಯುತ ಬಾಳ್ವೆ ಇವೆಲ್ಲ ಮುಂದೆ ಚೆನ್ನಾಗಿ ಬಾಳಲಿರುವ ಬದುಕಿಗೆ ಎಷ್ಟು ಅಗತ್ಯವಿದೆಯೆಂದು ಮನವರಿಕೆ ಮಾಡಿಕೊಡುವ ಪ್ರಯತ್ನವಿಲ್ಲಿದೆ. ಕಳೆದುಹೋದ ಉತ್ತಮ ವಿಚಾರಗಳನ್ನು ಹುಡುಕಿ ತನ್ನದಾಗಿಸಿಕೊಳ್ಳಬೇಕೆಂಬ ನೀತಿಪಾಠವಿದೆ.

**ಆಕಾಶಕ್ಕೊಂದು ಏಣಿ** (ಕಥಾ ಸಂಕಲನ)

ಅನು : ಜಯಾ ಎಸ್. ಕುಮಟಾಕರ್

**ಪುಟ : ೧೧೪** ಬೆಲೆ : ರೂ. ೬೦

**ಶ್ರೀ ರಾಘವೇಂದ್ರ ಪ್ರಕಾಶನ**, ಅಂಬಾರ ಕೊಡ್ಲ, ಅಂಕೋಲಾ, ಉತ್ತರ ಕನ್ನಡ - ೫೮೧ ೩೧೪

ಪರಿವರ್ತನಶೀಲ ಸಮಾಜದ ನಾಡಿಮಿಡಿತವನ್ನು ಮೊದಲೇ ಊಹಿಸಿಕೊಂಡು ಸಾಮಾಜಿಕ ಬದುಕನ್ನು ಅಲ್ಲಿ ಕೇಂದ್ರೀಕರಿಸಿ ಕಥೆ ಹೇಳುವ ಜಾಣ್ಮೆ ಇಲ್ಲಿನದು. ಯಾವುದೂ ಇದ್ದಂತಿರುವುದಿಲ್ಲವಾದರೂ ಹೊಸತನಕ್ಕೆ ಹಳೆಯ ನಂಟು ಬೇಕೇ ಬೇಕು. ಇಲ್ಲವಾದಲ್ಲಿ ಬಂಧನಗಳಿಗೆ ಯಾವ ಅರ್ಥವೂ, ಬೆಲೆಯೂ ಬರುವುದಿಲ್ಲ. ಕಥೆಗಳಲ್ಲಿನ ವ್ಯಕ್ತಿಗಳು ಸಹಜವಾಗಿ ಮಾತನಾಡುವರೇ ಹೊರತು ಇತರರ ಒತ್ತಾಯದ ಹೇರಿಕೆಯ ಅಸಹಜ ರೀತಿಯಿಂದಲ್ಲ. ವಸ್ತುಗಳಿಗಾಗಿ ಬಹಳ ತಡಕಾಡದೆ ಮೂಡಿದ ೧೪ ಕಥೆಗಳ ಸಂಕಲನ.



**ಬಾಂಬ್ ವಿರೋಧಿ ಪಾಕಿಸ್ತಾನಿ ಕವಿತೆಗಳು**

ಅನು : ಸರಜೂ ಕಾಟ್ಕರ್

**ಪುಟ : ೫೮** ಬೆಲೆ : ರೂ. ೩೦

**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಬಳ್ಳಾರಿ - ೫೮೩ ೧೦೩

ಬಾಂಬ್ ವಿರೋಧಿ ಧ್ವನಿಗಳು ಭಾರತದಲ್ಲಿ ಮೊಳಗಿದಂತೆ ಪಾಕಿಸ್ತಾನದಲ್ಲೂ ಸಾಕಷ್ಟು ಪ್ರತಿಧ್ವನಿ ಮೂಡಿಸಿದ ಕವಿ-ಸಾಹಿತಿಗಳಿದ್ದಾರೆ. ಅಲ್ಲಿ ಇತ್ತೀಚೆಗೆ ಹೊರಬಂದ ಅಂತಹ ಒಂದು ಕವನ ಸಂಕಲನದ ಆರ್ತನಾದಗಳನ್ನು ನಮಗಾಗಿ ಕನ್ನಡಕ್ಕೆ ತಂದವರು ಸೋದರ ಸರಜೂ ಕಾಟ್ಕರ್. ಬಾಂಬ್ ಸಂಸ್ಕೃತಿಯಿಂದ ಎಂತಹ ಅನಾಹುತ ಆಗಲಿದೆಯೆಂದು ಇಲ್ಲಿನ ಕವಿತೆಗಳು ಸಾವಿರಬಾರಿ ಸಾರಿ ಹೇಳುತ್ತಿವೆ. ಕವಿ-ಲೇಖಕ-ಕಲಾವಿದರಿದ್ದೂ ಬಾಂಬ್ ಸೃಷ್ಟಿಯಾಯಿತೆಂದರೆ ಕವಿಗಳಿಗೇನು ಶಿಕ್ಷೆಯಿದೆ ?



**ಪ್ರೀತಿಯ ಕಣ್ಣು** (ಕಾದಂಬರಿ)

ಶಾಂತಾರಾಮ ಸೋಮಯಾಜಿ

**ಪುಟ : ೨೦೪** ಬೆಲೆ : ರೂ. ೧೦೦

**ಇಂಚರ ಪ್ರಕಾಶನ**, ನಂ. ೧೬೭, ೧೧ನೇ ಮುಖ್ಯರಸ್ತೆ, ಮೂರನೇ ಘಟ್ಟ, ಪೀಣ್ಯ, ಬೆಂಗಳೂರು - ೫೮

ಸದ್ದುಗದ್ದಲವೇನೂ ಇಲ್ಲದ ಒಂದು ಮಧ್ಯಮ ವರ್ಗದ ಆದರ್ಶ ಎನ್ನಬಹುದಾದ ಸಾಂಸಾರಿಕ ಚಿತ್ರಣ ಕೊಡುವ ಸುದೀರ್ಘ ಕಾದಂಬರಿ. ಆದರೆ ಅದು ನಿಧಾನ ಗತಿಯಲ್ಲಿ ಅರಸುತ್ತ ಹೋಗುವ ತಣ್ಣನೆಯ ನೆರಳು ಅಷ್ಟು ಸುಲಭವಾಗಿ ಒದಗದೆ ಹೋದಾಗ ಘರ್ಷಣೆ ಅನಿವಾರ್ಯ. ಆದರೂ ಇಲ್ಲಿನ ಪಾತ್ರಗಳು ಆ ದಾರಿ ಹಿಡಿಯದೆ ವಿವೇಕದಿಂದ ವರ್ತಿಸುತ್ತವೆ. ಆವಸರದ ನಿರ್ಣಯವಿಲ್ಲದೆ ತಿಳಿನೀರನ್ನು ಇನ್ನಷ್ಟು ತಿಳಿಗೊಳಿಸುವ ಛಲ ಇಲ್ಲಿ ಎದ್ದು ಕಾಣುತ್ತದೆ. ಲೇಖಕರ ಇತರ ಕಥೆಗಳಲ್ಲಿನ ಮಾರ್ದವತೆ ಇಲ್ಲಿಯೂ ಪಡಿಮೂಡಿದೆ.



**ನುಡಿಯ ನೆರಳು** (ಪ್ರವಾಸ ಕಥನ)

ಅಮೃತಾ ಪ್ರೀತಮ್ ಅನು : ಶೈಲಜಾ ಉಡಚಣ

**ಪುಟ : ೧೧೬** ಬೆಲೆ : ರೂ. ೮೦

**ಚೇತನ ಪ್ರಕಾಶನ**, ೧-೯೯೧/೪, 'ಚೇತನ', ಓವರ್ ಬ್ರಿಜ್ ಹತ್ತಿರ, ಗುಲಬರ್ಗಾ - ೫೮೫ ೧೦೨

ಅಮೃತಾ ಪ್ರೀತಮ್ ಪಂಜಾಬಿ ಸಾಹಿತ್ಯದಲ್ಲಿ ಭಾರತೀಯ ಜ್ಞಾನಪೀಠ ಪುರಸ್ಕೃತ ಕವಯತ್ರಿ. ಸ್ವಾತಂತ್ರ್ಯ ಸಂಗ್ರಾಮದ ದಂಗೆಯ, ದೇಶ ವಿಭಜನೆಯ ಕರಾಳ ದಿನಗಳಲ್ಲಿ ಕವನಗಳ ಮೂಲಕ ಹಿಂಸೆ-ಕ್ರೌರ್ಯವನ್ನು ಪ್ರತಿಭಟಿಸಿದವರು. ಕಣ್ಮುಂದೆಯೇ ಹಿಂದೂ-ಮುಸ್ಲಿಂ ಬಾಂಧವರ ಘೋರ ಹತ್ಯೆಗಳನ್ನು ಕಂಡು ಅಣ್ಣ-ತಮ್ಮಂದಿರ ಕೈಗಳಲ್ಲೇಕೆ ಶಸ್ತ್ರಾಸ್ತ್ರಗಳೆಂದು ಆಳವಾಗಿ ಚಿಂತಿಸಿದ ಶಾಂತಿಪ್ರಿಯರು. ತಾವು ಎದುರಿಸಿದ ಭಯಾನಕ ಸನ್ನಿವೇಶಗಳನ್ನು ಆತ್ಮಕಥೆಯಂತೆ ಹೇಳಿಕೊಂಡಿದ್ದಾರೆ.

**ಸುಣ್ಣದ ಸುತ್ತು ಮತ್ತು ಅಳಿಲು ರಾಮಾಯಣ** (ಮಕ್ಕಳ ನಾಟಕ)

ಎಚ್. ಎಸ್. ವೆಂಕಟೇಶ ಮೂರ್ತಿ

**ಪುಟ : ೧೨೮** ಬೆಲೆ : ರೂ. ೬೦

**ಲಿಪಿ ಪ್ರಕಾಶನ**, ಬ್ಯೂಗಲ್ ರಾಕ್ ರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

ಎಳೆಯರ ಮನಸ್ಸನ್ನು ಬಹುವಾಗಿ ಆಕರ್ಷಿಸುವ ಇಲ್ಲಿನ ಎರಡು ನಾಟಕಗಳು ಈಗಾಗಲೇ ರಂಗದ ಮೇಲೂ ಅಭಿನಯಿಸಲ್ಪಟ್ಟು ಗಮನ ಸೆಳೆದಿವೆ. ಬ್ರೆಕ್ಟ್‌ನ ಕಕೇಷಿಯನ್ ಚಾಕ್ ಸರ್ಕಲ್ ನಾಟಕದ ಸಂದೇಶ ಹೃದಯಹೀನನಾದವನಿಗೆ ಯಾವುದೂ ದಕ್ಕುವುದಿಲ್ಲವೆಂಬುದು ಇಲ್ಲಿನ ಮೊದಲ ನಾಟಕದ ಧ್ವನಿ. ಇನ್ನೊಂದು ಚಿಕ್ಕ ಅಳಿಲಿನ ಸೇವೆಯೂ ರಾಮಾಯಣದಲ್ಲಿ ಮಹತ್ತರ ಕಾಣಿಕೆಯಾಗಿ ದಾಖಲಾದುದು. ಹೀಗೆ ಮಕ್ಕಳಲ್ಲಿ ಹೃದಯವಂತಿಕೆ - ಸೇವಾ ಮನೋಭಾವ ತಿಳಿಸಿಕೊಡುತ್ತ ಸಾಗುವ ಕಿರುನಾಟಕಗಳಿವು.



**ನರವಿಂಧ್ಯ** (ಕತೆಗಳು)

ಕಂನಾಡಿಗಾ ನಾರಾಯಣ

**ಪುಟ : ೮೮** ಬೆಲೆ : ರೂ. ೭೫

ಸಿ. ವಿ. ಜಿ. **ಪಬ್ಲಿಕೇಷನ್ಸ್**, ನಂ. ೭೦, ಎರಡನೇ ಮೈನ್, ವೈಯಾಲಿಕಾವಲ್, ಬೆಂಗಳೂರು - ೫೬೦ ೦೦೩

ಒಂದು ಗ್ರಾಮೀಣ ಬದುಕಿನ ಹಿನ್ನೆಲೆಯಿರುವ, ಬದುಕಬೇಕಾದ ರೀತಿಯಲ್ಲಿ ಬದುಕಲಾರದ ಮನುಷ್ಯನ ಅಸಹಾಯಕತೆಯ ಸುತ್ತ ಹೆಣೆದಿರುವ ಕತೆಗಳು. ನಾಗರಿಕ ಜೀವನದ ಎಲ್ಲ ಅವಲಕ್ಷಣಗಳನ್ನು ಖಂಡಿಸುತ್ತಿದ್ದಂತೆ ಪರಿಸರದ ಬಗ್ಗೆ ಅತ್ಯಂತ ಕಾಳಜಿ ವಹಿಸುತ್ತ ಹಿಡಿಮಣ್ಣಿಗೂ ಭೂಗೋಳದ ಬೆಲೆಯನ್ನೇ ಕಟ್ಟಲಾಗಿದೆ. ಇಲ್ಲಿನ ಬರವಣಿಗೆಯಲ್ಲಿ ಎಲ್ಲೋ ಅವಿತಿರುವ ಮನುಷ್ಯನ ಒಳ್ಳೆಯತನವನ್ನು ಬಗೆದು ನೋಡುವ ಪ್ರಯತ್ನವಿದೆ. ಆಡುಮಾತಿನ ಶೈಲಿ ಬಲು ಸೊಗಸಾಗಿದೆ.

– ಇಂದಿರಾ ಕುಮಾರಿ



ನಟರಾಜ್ ಹುಳಿಯಾರ್‌ನ ಸಾಂಸ್ಕೃತಿಕ ಬರಹಗಳ ಸಂಕಲನ 'ಗಾಳಿ ಬೆಳಕು' ಈಗ ಪ್ರಕಟವಾಗಿದೆ. ಲಂಕೇಶ್ ಪತ್ರಿಕೆಯಲ್ಲಿ ನಟರಾಜ್ ಬರೆದ ಗಾಳಿ ಬೆಳಕು, ಬರೆವ ಬದುಕು ಸಾಹಿತ್ಯ ಅಂಕಣಗಳ ಆಯ್ದ ಬರಹಗಳ ಸಂಕಲನ ಇದು.

ನಟರಾಜ್ ಬರಹ ನನ್ನನ್ನು ಕಾಡಿಸಲು ಹಲವು ಕಾರಣಗಳಿವೆ. ನಾವಿಬ್ಬರೂ ಒಟ್ಟಿಗೇ ಕವಿತೆ ಕಟ್ಟಿದವರು. ಸಾಹಿತ್ಯವನ್ನು ಮಥಿಸುತ್ತಾ ಒಂದಿಷ್ಟು ಕಾಲ ಓಡಾಡಿದವರು. ಹಾಗಾಗಿ ಇವನ ಬರವಣಿಗೆಯ ಬಗ್ಗೆ ಸದಾ ಕುತೂಹಲದ ಕಣ್ಣು. ಇನ್ನುಳಿದಂತೆ ನಾವಿಬ್ಬರೂ ಒಂದೇ ಕಾಲಮಾನದಲ್ಲಿ ಪಯಣಿಸುತ್ತಿದ್ದೇವೆ. ಮಾರ್ಕ್ಸ್‌ವಾದ - ಲೋಹಿಯಾವಾದ, ಕೆಂಪು ರೈತ ಸಂಘ - ಹಸಿರು ರೈತ ಸಂಘ, ತುರ್ತುಪರಿಸ್ಥಿತಿ ಉಂಟುಮಾಡಿದ ಗಾಯದ ನಂತರದ ಕಾಲದಲ್ಲಿ, ಗುಂಡೂರಾವ್ ಸರ್ಕಾರದ ದಬ್ಬಾಳಿಕೆಯ ಮಧ್ಯೆ, ಪೇಪರ್ ನಂತರದ ಟಿವಿ, ಕಂಪ್ಯೂಟರ್ ಮಾಧ್ಯಮಗಳು ಬಂದಿಳಿದ, ಹೆಗಡೆ ಸರ್ಕಾರ ತಣ್ಣಗೆ ಚಳವಳಿಯ ಚೈತನ್ಯ ಕಸಿದುಕೊಂಡ, ನರಗುಂದ, ನವಲಗುಂದದ ರೈತರ ಹೋರಾಟ, ಕನ್ನಡದ ಗೋಕಾಕ್ ಚಳವಳಿ, ಪತ್ರಿಕೋದ್ಯಮದಲ್ಲಿ ಕ್ಯಾಸೆಟ್ ಲೋಕ ಕಂಡ ಭಿನ್ನ ದನಿ, ಕನ್ನಡ ಕಾವ್ಯದ ಬದಲಾದ ಮುಖಗಳು ಇವೆಲ್ಲವನ್ನೂ ಕಂಡ ತಲೆಮಾರಿನವರು ನಾವು.

ನಾನು ಸಂವಹನದ ವಿದ್ಯಾರ್ಥಿ, ನಟರಾಜ್ ಇಂಗ್ಲಿಷ್ ಸ್ನಾತಕೋತ್ತರ ಅಧ್ಯಯನ ಮಾಡಿದ ಸಾಹಿತ್ಯ ವಿದ್ಯಾರ್ಥಿ. ಹಾಗಾಗಿ ನಾವಿಬ್ಬರೂ ನಮ್ಮದೇ ದಾರಿಗಳಲ್ಲಿ ಈ ಮೇಲಿನ ಎಲ್ಲಾ ಘಟ್ಟಗಳನ್ನು ಅರ್ಥೈಸಿಕೊಳ್ಳಲು ಪ್ರಯತ್ನಿಸುತ್ತಿದ್ದೇವೆ. ನಟರಾಜ್ ಈ ಪ್ರಶ್ನೆಗಳಿಗೆ ಕಂಡುಕೊಳ್ಳುವ ಉತ್ತರಗಳು ಹೇಗಿವೆ ಎಂಬ ಕುತೂಹಲದ ಜೊತೆಗೇ ನಾನು ಕಂಡುಕೊಂಡ ಉತ್ತರಗಳ ಜೊತೆ ತಾಳೆ ನೋಡುವುದೂ ಅಭ್ಯಾಸವಾಗಿದೆ. ನಟರಾಜ್ ಬರೆದ ಬರಹಗಳು ನನ್ನ ತಿಳುವಳಿಕೆಯನ್ನು ವಿಸ್ತರಿಸಿವೆ. 'ಗಾಳಿ ಬೆಳಕು' ಈ ರೀತಿಯಲ್ಲಿ ಪ್ರತಿಯೊಬ್ಬರ ತಿಳುವಳಿಕೆಯನ್ನು ವಿಸ್ತರಿಸುವ ಒಂದು ಮಹತ್ವದ ಪ್ರಯತ್ನ.

ನಟರಾಜ್ ನಮ್ಮ ಇಂದಿನ ಹಲವು ವಿಮರ್ಶಕರಿಗಿಂತ ಭಿನ್ನ. ಸಾಮಾಜಿಕ ಚಳವಳಿಯ ಅಂಗಳದಿಂದ ಈತ ಸಾಹಿತ್ಯ ಕ್ಷೇತ್ರಕ್ಕೆ ಜಿಗಿದ ಕಾರಣ ಈತನ ಬರಹ ಎಲ್ಲಾ ಸಂದರ್ಭದಲ್ಲೂ ಸಮಾಜವನ್ನು ತನ್ನ ಕೇಂದ್ರವಾಗಿಟ್ಟುಕೊಂಡಿದೆ. ಒಂದು ಕೃತಿ, ಒಂದು ಮಾತು, ಒಂದು ಹಾಡು, ಒಬ್ಬ ಸಾಹಿತಿ ಎಲ್ಲರೂ ನಟರಾಜ್‌ನ ಸಮಾಜ ನಿಕಷಕ್ಕೊಡ್ಡಿಕೊಳ್ಳುತ್ತಾರೆ. ಈ ಕಾರಣಕ್ಕಾಗಿಯೇ ನಟರಾಜ್‌ನ ಬರಹ ಇಂದಿನ ದಿನಗಳ ವಿಮರ್ಶೆ ಮಾಡುತ್ತಾ ಮುಂದಿನ ದಿನಗಳಿಗೆ ದಾರಿ ತೋರಿಸುತ್ತದೆ. ನಮ್ಮ ನಡುವಿನದ್ದನ್ನೇ ಮಾತನಾಡುತ್ತಾ ಸಾಹಿತ್ಯದ ಒಳದಾರಿಗಳತ್ತ ಕೈಹಿಡಿದು ನಡೆಸುತ್ತವೆ.



ಪುಟ : ೧೯೫ ಬೆಲೆ : ರೂ. ೭೫

ಚಂದನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್

೬೮೫, ರಾಮಾಂಜನೇಯ ರಸ್ತೆ

ಶ್ರೀನಗರ, ಬೆಂಗಳೂರು - ೫೦

ದಲಿತ ಸಾಹಿತ್ಯ ಕಮ್ಮಟದಲ್ಲಿ ದಲಿತ ಲೇಖಕರೊಬ್ಬರು ಲಂಕೇಶ್ ಪತ್ರಿಕೆ ಅಂಕಣದಲ್ಲಿ ಬೇರೆಯವರ ಬಗ್ಗೆ ಮೃದುವಾಗಿ ಬರೆಯುತ್ತೀಯ, 'ನಮ್ಮವರ' ಬಗ್ಗೆ ಮಾತ್ರ ಕಟುವಾಗಿ ಬರೆಯುತ್ತೀಯ ಎಂದದ್ದು, ಬೆಂಗಳೂರಿನ ಸೆಮಿನಾರೊಂದರಲ್ಲಿ 'ಇವರೆಲ್ಲ ಮಾತನಾಡುವುದನ್ನು ಕೇಳಿದರೆ ಇವರೆಲ್ಲಾ ನಿದ್ದೇನೇ ಮಾಡೋದಿಲ್ಲ ಅನಿಸುತ್ತೆ' ಎನ್ನುವ ಎಂ. ಎ. ವಿದ್ಯಾರ್ಥಿಯ ಮಾತು, ಕವಿ ಸಿದ್ಧಲಿಂಗಯ್ಯನವರನ್ನು ರಿಫ್ರೆಶರ್ ಕೋರ್ಸ್‌ನಲ್ಲಿ ಒಬ್ಬರು ನಿಮ್ಮ ಕವಿತೆಗಳಲ್ಲಿ ಹಳೆಯ ರೊಚ್ಚು ಇಲ್ಲವಲ್ಲ ಎಂದು ಪ್ರಶ್ನಿಸಿದ್ದು, ತುಮಕೂರಿನ ಮೂರ್ತಿ, 'ನಾವು ಬರೆಯೋದು ವಿಮರ್ಶಕರಿಗಲ್ಲ ಕಣಯ್ಯ, ಸಾಮಾನ್ಯ ಓದುಗರಿಗೆ' ಎಂದದ್ದು, ಸ್ವಮರುಕದಲ್ಲಿ ಮುಳುಗಿದ ಕವಿಯೊಬ್ಬ 'ನಾನೊಂದು ಪದ್ಯ ಬರೆದರೆ ಇಲ್ಲಿ ಓದುವವರು ಗತಿಯಿಲ್ಲ' ಎಂದು ಕೊರಗಿದ್ದು, ಎಲ್ಲವೂ ನಟರಾಜರ ಕೃತಿಗಳ ಬರಹಗಳನ್ನು ಪ್ರೇರೇಪಿಸಿವೆ. ಈ ಮಾತುಗಳನ್ನು ಒರೆಗೆ ಹಚ್ಚುತ್ತಾ ನಟರಾಜ್ ನಮ್ಮನ್ನು ಸಾಹಿತ್ಯದ ಲೋಕದೊಳಕ್ಕೆ ಕರೆದೊಯ್ಯುವ ಕ್ರಮ ಇವನ ಹೆಚ್ಚುಗಾರಿಕೆ. ವಿಮರ್ಶೆ ಎನ್ನುವುದು ಒಂದು ಗಂಭೀರ ಅಧ್ಯಯನವಾಗಿ, ಸಾಹಿತ್ಯ ವಿದ್ಯಾರ್ಥಿಗಳ ನಡುವಲ್ಲಿ ಮಾತ್ರ ಉಳಿದಿರುವ, ಗಂಭೀರ ಕಸರತ್ತಿನ ಕ್ರಮವಾಗಿರುವ ಸಂದರ್ಭದಲ್ಲಿ ನಟರಾಜ್ ಹುಳಿಯಾರ್ ನಮ್ಮ ನಡುವಿನಿಂದಲೇ ಆಯ್ದ ಘಟನೆಗಳ ಮೂಲಕ ಸಾಹಿತ್ಯದ ಪರಿಯನ್ನು ಅರ್ಥೈಸುವ, ಪರಿಚಯಿಸುವ ಕ್ರಮ ಸಾಹಿತ್ಯಕ್ಕೆ ಇನ್ನಷ್ಟು ಓದುಗರನ್ನು ದಕ್ಕಿಸಿಕೊಡುತ್ತದೆ.

'ಗಾಳಿ ಬೆಳಕು' ಇಂದಿನ ತುರ್ತುಗಳನ್ನೆಲ್ಲಾ ಕೈಗೆತ್ತಿಕೊಂಡಿದೆ. ಫೈರ್ ಚಲನಚಿತ್ರ ವಿವಾದ, ಧರ್ಮಕಾರಣಕ್ಕೆ ಬಹಿಷ್ಕಾರ, ಮತೀಯವಾದಿ ಲೇಖಕನ ಮನಸ್ಸು, ಸುಗಮ ಸಂಗೀತ, ರೈತ ಸಂಘದ ಒಡಕು, ಬಿಬಿಸಿ ಸಮೀಕ್ಷೆಯಲ್ಲಿ ಕಾರ್ಲ್ ಮಾರ್ಕ್ಸ್ ಶತಮಾನದ ವ್ಯಕ್ತಿಯಾದದ್ದು, ನಾನು ಎನ್ನುವುದು ಅಶ್ಲೀಲವಾದದ್ದು, ಊಟದ ನಂತರವೂ ಆನಂದದಾಯಕವಾಗಿ ಉಳಿದಿರಬಹುದಾದ ಚೈನೀಸ್ ಆಹಾರ ಕ್ರಮದಂತೆ ಓದು ಸಹಾ ಇರಬೇಕು ಎಂಬ, ಡಾಕ್ಟರೇಟ್ ಕೊಡಿಸುವುದೇ ಸಾಮಾಜಿಕ ನ್ಯಾಯ ಆದರೆ ಸರಿಯಾಗಿ ಓದುವ ಕ್ರಮ ಅರಳಿಸುವುದಲ್ಲ ಎಂದು ನಂಬಿರುವ ಎಲ್ಲದರ ಬಗೆಗೂ ನಟರಾಜ್ ಪ್ರಶ್ನೆಗಳನ್ನು ಎತ್ತುತ್ತಾನೆ. ಜಗತ್ತಿನ ಸಾಹಿತ್ಯ, ಸಾಹಿತಿಗಳ ಚಿಂತನೆಗಳನ್ನು ಮಂಡಿಸುತ್ತ ಈ ಪ್ರಶ್ನೆಗಳಿಗೆ ಉತ್ತರ ಹುಡುಕಲು ಪ್ರಯತ್ನಿಸುತ್ತಾನೆ.

ಗಾಂಧಿ ಹಾಗೂ ವಿಮರ್ಶೆಯ ಬಗ್ಗೆ 'ಗಾಳಿ ಬೆಳಕು' ವಿಶೇಷ ಬೆಳಕು ಬೀರಿದೆ. ನಾಥುರಾಮ್ ಮತ್ತು ಕಾನ್ಶಿರಾಂ ಹೇಗೆ ಒಂದೇ ರೀತಿಯ ದಾಳಿಯನ್ನು ಗಾಂಧಿ ಮೇಲೆ ನಡೆಸಿದ್ದಾರೆ ಎಂಬುದನ್ನು ನಟರಾಜ್ ಅರ್ಥೈಸುವ ರೀತಿ ವಿಶೇಷ. ಶ್ರೀರಾಮನನ್ನು ಮೆಟ್ಟಲಾಗಿ ಮಾಡಿ ಕೊಳ್ಳುವವರಂತೆ ಗಾಂಧಿ-ಅಂಬೇಡ್ಕರ್ ಮುಖಾಮುಖಿಯನ್ನು ಮೆಟ್ಟಿಲಾಗಿ ಮಾಡಿಕೊಳ್ಳ ಹೊರಟವರೂ ಅಪಾಯಕಾರಿ ಎನ್ನುತ್ತಾರೆ. ಉತ್ತರಪ್ರದೇಶದ ರಾಜಕೀಯದಿಂದಾಗಿ ಒಟ್ಟಾರೆ ಗೊಂದಲಕ್ಕೆ ಸಿಕ್ಕಿರುವ ದಲಿತ ಚಳವಳಿ ಹಾಗೂ ಅದರ ಬೆಂಬಲಿಗ ಬುದ್ಧಿಜೀವಿಗಳಿಗೆ ನಟರಾಜ್‌ರ ಈ ಲೇಖನ ಉತ್ತರ ಒದಗಿಸುತ್ತದೆ. 'ಮಹಾತ್ಮರ ಗೊಂದಲ ಕಂಡು ಮುದಗೊಳ್ಳುವ ಸಾಮಾನ್ಯರು' ಲೇಖನದಲ್ಲಿ ನಟರಾಜ್ 'ಗಾಂಧಿ ವಿರುದ್ಧ ಗಾಂಧಿ' ನಾಟಕವನ್ನು ಚರ್ಚೆಗೆ ಒಳಪಡಿಸುತ್ತಾರೆ. ಮರಾಠಿಯ ಸಾಹಿತ್ಯ ಲೋಕದಲ್ಲಿ ಅದೂ ನಾಟಕಗಳಲ್ಲಿ ಈಗ ಎದ್ದಿರುವ ಒಬ್ಬನನ್ನು ಮಹಾತ್ಮನಾಗಿಸುವ ಇಲ್ಲವೇ ಖಳನಾಗಿಸುವ ಟ್ರೆಂಡ್ ಪರಿಚಯಿಸುತ್ತಲೇ ಯಾವುದೇ ಒಂದು ಕುಟುಂಬದೊಳಗಿನ ಒತ್ತಡ ಹೇಗೆ ಗಾಂಧಿಯ ಒತ್ತಡವೂ ಆಗಿತ್ತು ಎನ್ನುವುದನ್ನು ವಿವರಿಸುತ್ತಾನೆ. ಗಾಂಧಿಯ ಮೇಲೆ ಸರಳ ರೀತಿಯ ದಾಳಿ ನಡೆಸುವ, ಸುಪ್ತರಂಜನೆ ಒದಗಿಸುವ ಇಂತಹ ನಾಟಕವನ್ನು ರಂಗಭೂಮಿಯ ಮೈಲುಗಲ್ಲು ಎಂದೆಲ್ಲ ಕರೆಯುವವರಿಗೆ ಗಾಂಧಿ ಬಗೆಗಿರಲಿ, ರಂಗ ಭಾಷೆಯ ಹಾಗೂ ರಂಗಭೂಮಿಯ ಸಾಧ್ಯತೆಯ ಬಗ್ಗೆ ಕೂಡಾ ಕನಿಷ್ಠ ತಿಳುವಳಿಕೆ ಇಲ್ಲ ಎಂಬುದನ್ನು ಎತ್ತಿ ತೋರಿಸುತ್ತಾನೆ. ಖಳನನ್ನು ನಾಯಕನಾಗಿಸುವ ವಿಕೃತಿಯ 'ಮೀ ನಾಥೂರಾಂ ಬೋಲ್ತೋಯ್' ನಾಟಕದ ಬಗೆಗಿನ ಒಳನೋಟಗಳೂ ಸಹ ಚಿಂತನೆಗೆ ಹಚ್ಚುವಂತಹದ್ದು. ಗೋಡ್ಸೆ ಕುರಿತ ಈ ನಾಟಕ ಕೊಲೆಗಾರನನ್ನು ಸಮರ್ಥಿಸುವ ನಾಟಕ ಎಂಬುದನ್ನು ವಿವರವಾಗಿ ಬಿಡಿಸಿಡುತ್ತಾನೆ. ಗಾಂಧಿಯನ್ನು ಕೊಲೆ ಮಾಡಿದ ಗೋಡ್ಸೆ ಇದನ್ನು ವಧೆ ಎಂದು ಕರೆಯುತ್ತಾನೆ. ವಧೆ ಎನ್ನುವ ಶಬ್ದ ಮಹಾಕಾವ್ಯಗಳಲ್ಲಿ ಬಳಕೆಯಾಗುವುದು ದುಷ್ಟರ ಅಥವಾ ರಾಕ್ಷಸರ ಸಂಹಾರದ ಸಂದರ್ಭದಲ್ಲಿ ಮತ್ತು ಮಹಾಕಾವ್ಯಗಳು ವಧೆಯನ್ನು ಪವಿತ್ರಕಾರ್ಯ ಎಂದು ಬಿಂಬಿಸುತ್ತವೆ. ಗೋಡ್ಸೆ ಗಾಂಧಿಯನ್ನು ವಧೆ ಮಾಡಿದ್ದೇನೆ ಎನ್ನುವ ಮೂಲಕ ಹೊರಡಿಸುತ್ತಿರುವ ಅರ್ಥ ಏನು ಎಂಬುದನ್ನು ನಟರಾಜ್ ಪ್ರಶ್ನಿಸುತ್ತಾನೆ.

ಇಂತಹ ವಿಚಾರ ಸರಣಿಯೇ ಗಾಳಿ ಬೆಳಕುವಿನ ಯಶಸ್ಸು. ಸೋಯಿಂಕಾ ಬಗ್ಗೆ ಬರೆಯು ವಾಗಲಾಗಲೀ, ಬ್ರೆಕ್ಟ್ ಶತಮಾನೋತ್ಸವದ ಬಗ್ಗೆ ಬರೆಯುವಾಗಲಾಗಲೀ, ರಾಮಚಂದ್ರ ಶರ್ಮ ವಿಮರ್ಶೆಯನ್ನು ಅರಗಿಸಿಕೊಳ್ಳಲಾಗದ್ದರ ಬಗೆಯಾಗಲೀ, ಡಿ. ಆರ್. ನಾಗರಾಜ್ ತನ್ನ ಬಳಿ ಇರುವ ಎಲ್ಲಾ ಪುಸ್ತಕಗಳನ್ನೂ ಓದಿದ್ದೇನೆ ಎನ್ನುವಾಗಲಾಗಲೀ, ನಾವು ಕಂಡ ಶೇಕ್ಸ್‌ಪಿಯರ್‌ಗಿಂತ ಭಿನ್ನವಾಗಿ ಶೇಕ್ಸ್‌ಪಿಯರ್‌ನನ್ನು ಪರಿಚಯಿಸುವಾಗ, ಕೃತಿಗಳಲ್ಲಿ ನಾವು ಎಷ್ಟು ಮಾತ್ರ ಕಂಡುಕೊಳ್ಳಬೇಕು ಎನ್ನುವಾಗಲಾಗಲೀ ನಟರಾಜ್‌ನ ಮಿಂಚಿನ ಪ್ರತಿಭೆಯ ಅರಿವಾಗುತ್ತದೆ. ಲಂಕೇಶ್ ನಟರಾಜ್‌ನನ್ನು ಮಹಾನಿಷ್ಠುರ ವ್ಯಕ್ತಿ ಎಂದು ಬಣ್ಣಿಸಿದ್ದಾರೆ. ಈತ ಉಗ್ರ ಪ್ರಾಮಾಣಿಕ ಎಂದು ಸಾರಿದ್ದಾರೆ. ಕನ್ನಡ ಸಾಹಿತ್ಯ ಲೋಕಕ್ಕೆ ಮಾತ್ರವಲ್ಲ ನಮ್ಮ ಸಮಾಜಕ್ಕೆ ಈಗ ಬೇಕಾಗಿರುವುದು ಇಂತಹ ನಿಷ್ಠುರಿಗಳು. ಈ ಕಾರಣಕ್ಕಾಗಿಯೇ ಗಾಳಿ ಬೆಳಕು ಭಿನ್ನ.

'ಗಾಳಿ ಬೆಳಕು' ಹೊರಬಂದಿರುವ ಸಂದರ್ಭವೂ ನನ್ನನ್ನು ಮತ್ತೆ ಮತ್ತೆ ಯೋಚಿಸುವಂತೆ ಮಾಡಿದೆ. ಕೋಮುವಾದದ ಪತಾರಗಳು ಹಗಲಿರುಳೂ ಕೇವಲ ಮಸೀದಿ, ಮಂದಿರಗಳನ್ನಲ್ಲ ಮನಸ್ಸನ್ನು, ಮನುಷ್ಯ ಸಂಬಂಧವನ್ನೂ ಕೆಡವುತ್ತಿವೆ. ಜಾಗತೀಕರಣ ಹಳ್ಳಿ ನಗರಗಳನ್ನು ಬ್ರಾಂಡ್‌ಗಳನ್ನಾಗಿಸಿ ಜನರನ್ನು ಗಿರಾಕಿಗಳನ್ನಾಗಿಸಿದೆ. ಇಂತಹ ಕಾಲಘಟ್ಟದಲ್ಲಿ 'ಗಾಳಿ ಬೆಳಕು' ಹೊರಬಿದ್ದಿದೆ. ನಟರಾಜ್‌ನ ಈ ಪುಸ್ತಕ ಇಂತಹ ಆತಂಕಗಳ ಮಧ್ಯೆ ಗಾಳಿಯಾಗಿಯೂ ಬೆಳಕಾಗಿಯೂ ಇದೆ. ❑

**ಮೋಹನ್ ಕುಡ್ಲ**



# ಸಿಡಿ

**ವಿಶ್ವಾರಾಧ್ಯ ಸತ್ಯಂಪೇಟೆ**

**ಕ**ಲಬುರ್ಗಿ ಜಿಲ್ಲೆಯ ಜೇವರ್ಗಿ - ಅಫಜಲಪುರ ತಾಲ್ಲೂಕಿನ ಕಟ್ಟ ಕಡೆಯ ಹಳ್ಳಿ ಘತ್ತರಗಿ ಭಾಗಮ್ಮ ಉತ್ತರ ಕರ್ನಾಟಕದ ಹಳ್ಳಿಗಳಲ್ಲೆಲ್ಲ ಪ್ರಸಿದ್ಧ. ಈ ದೇವತೆಗೆ ಹರಕೆ ಹೊತ್ತು ಆಡುವ 'ಸಿಡಿ' ಯಂತೂ ಇನ್ನೂ ಸುಪ್ರಸಿದ್ಧ. ಸಿಡಿಯನ್ನು ಆಡಲೆಂದೇ ಕಲ್ಬುರ್ಗಿ, ರಾಯಚೂರು, ಬೀದರ, ಬಿಜಾಪುರಗಳಲ್ಲದೆ ಗಡಿ ರಾಜ್ಯವಾದ ಮಹಾರಾಷ್ಟ್ರದ ಸೊಲ್ಲಾಪುರ ಮುಂತಾದ ಊರುಗಳಿಂದಲೂ ಜನ ಇಂದಿಗೂ ಬರುತ್ತಾರೆ. ಹಾಗಾಗಿ ಈ ದೇವತೆಯ ಹಲವು ಹತ್ತು ವೈಚಿತ್ರ್ಯ ಹಾಗೂ ಜನಗಳ ಅಂಧಶ್ರದ್ಧೆಗಳನ್ನು ನಮ್ಮ ಓದುಗರಿಗೆ ತಿಳಿಸುವ ಉದ್ದೇಶದಿಂದ ಘತ್ತರಗಿಯತ್ತ ಹೊರಟೆ. ಅಫಜಲಪುರ ಜೇವರ್ಗಿಯ ಸೀಮಾರೇಖೆಯಾಗಿ ಹರಿಯುವ ಭೀಮಾ ನದಿಯ ದಂಡೆಯ ಮೇಲೆ ಪ್ರಕೃತಿ ಸೊಬಗಿನ ಮೂಲೆಯೊಂದರಲ್ಲಿ ನೆಲೆಸಿರುವ ಭಾಗಮ್ಮನದು ಮೂಲತಃ ಹಂಪಿ. ಈಕೆ ಆನೆಗುಂದಿಯ ಅರಸನ ಅಥವಾ ವಿಜಯನಗರ ಸಾಮ್ರಾಜ್ಯದ ಕುಲದೇವತೆ. ಅಲ್ಲಿಯ ಅರಸನೊಬ್ಬ (ಯಾರೆಂಬುದು ಗೊತ್ತಿಲ್ಲ) ಐಶ್ವರ್ಯದ ಮದದಿಂದ ಬಂಗಾರದ ಚಪ್ಪಲಿಗಳನ್ನೇ ಧರಿಸುತ್ತಿದ್ದ. ಇದರಿಂದ ಬೇಸರಗೊಂಡ ಭಾಗಮ್ಮ ಇನ್ನು ತನಗೆ ಇಲ್ಲಿ ಇರೋದು ಅವಮಾನಕರ ಎಂದು ಬಗೆದು ಅಲ್ಲಿಂದ ಯಾರಿಗೂ ಗೊತ್ತಾಗದಂತೆ ಹಾವಾಗಿ ಹರಿದುಕೊಂಡು ದಾರಿಗೆ ಅಡ್ಡವಾಗಿ ಬಂದ ಕೃಷ್ಣೇ-ಭದ್ರೆಯರನ್ನು ಸೀಳಿ ಈಜಿಕೊಂಡು ಸಿಂಧಗಿ ತಾಲ್ಲೂಕಿನ ಹೆಬ್ಬಾಳ ಹಳ್ಳದಲ್ಲಿ ಬಂದು ಭೀಮೆಯನ್ನು ಸೇರಿಕೊಂಡಳು. ಅಲ್ಲಿಂದ ಮುಂದೆ ಎಲ್ಲಿಗೆ ಹೋಗಬೇಕೆಂದು ದಿಕ್ಕು ತೋಚದಾದಾಗ, ಅಲ್ಲೇ ಜಬ್ಬಲ ಬೆಳೆದ (ಗೌಡಪ್ಪಗೌಡರ ಹೊಲದಲ್ಲಿ) ಹೊಂಡದಲ್ಲೇ ನೆಲೆ ನಿಂತಳು.

ಅಲ್ಲಿ ಈಕೆಯನ್ನು ಯಾರೂ ಗುರುತಿಸಲಿಲ್ಲ. ಕರೆದು ಮಾತಾಡಿಸಲಿಲ್ಲ. ಯಾರಾದರು ತನ್ನತ್ತ ಬಂದರೆ, ಅವರಿಗೆ ತಾನು ಯಾರು ? ಎಲ್ಲಿಂದ ಬಂದೆ ? ಈಗ ಈ ಜಬ್ಬಲದಲ್ಲಿ ಕಂಬವಾಗಿ ನಿಂತದ್ದೇಕೆ ? ಎಂದು ಹೇಳಬೇಕೆಂದುಕೊಂಡಳು. ಆದರೆ ಬಹುದಿನಗಳವರೆಗೆ ಯಾರೂ ಈಕೆಯನ್ನು ಗಮನಿಸಲಿಲ್ಲ. ಆಕಸ್ಮಿಕವಾಗಿ ದನ ಕಾಯಲು ಬಂದ ಹುಡುಗನೊಬ್ಬ ಭಾಗಮ್ಮನ ವೃತ್ತಾಂತವನ್ನೆಲ್ಲ ಕೇಳಿ ಊರಿಗೆ ಹೋಗಿ ಹಿರಿಯರೆಲ್ಲರ ಮುಂದೆ ಹೇಳಿದ. ಊರಿನ ಮುಖಂಡರೆಲ್ಲ ಜಮೆಯಾಗಿ ಬಂದು ಈ ಕಂಬದ ಆಕಾರದಲ್ಲಿದ್ದ ಭಾಗಮ್ಮನನ್ನು ತಮ್ಮ ಊರಾದ ಘತ್ತರಗಿಗೆ ಕೊಂಡೊಯ್ದು, ಅಲ್ಲಿಯೇ ಒಂದು ಗುಡಿ ಕಟ್ಟಿಸಿಕೊಂಡರಂತೆ. ಗುಡಿಯ ಬಾಗಿಲು ಉತ್ತರಕ್ಕಿದ್ದರೂ ಭಾಗಮ್ಮನ ಕಂಬದ ಮುಖ ಮಾತ್ರ ದಕ್ಷಿಣಕ್ಕಿದೆ. ಗುಡಿಯ ಹಿಂದೆ ಒಂದು ಸಣ್ಣ ಕಿಂಡಿ ಇದೆ. ಈ ಕಿಂಡಿಯ ಮೂಲಕ ಭಾಗಮ್ಮ ತನ್ನ ತವರೂರ ಕಡೆಗೆ ನಿತ್ಯ ನೋಡುತ್ತ ನಿಂತಿದ್ದಾಳೆ ಎಂದು ಹೇಳುತ್ತಾರೆ. ಇದಿಷ್ಟು ಈ ದೇವತೆಯ ಐತಿಹ್ಯ.

ಈಗ್ಗೆ ೭೦-೮೦ ವರ್ಷಗಳ ಹಿಂದೆ ಘತ್ತರಗಿ ಗ್ರಾಮದ ತಲೆದಿಂಬಿಗೆ ಇರುವ ''ಭೀಮೆ'' ಉಕ್ಕಿ ಹರಿದಳು. ಇಡೀ ಊರಿಗೆ ಊರೇ ಜಲಾವೃತವಾಯಿತು. ಊರಿನ ಕೂಸು-ಕುನ್ನಿ, ದನ-ಕರು ಭೀಮೆಯ ಪಾಲಾದವು. ಮಣ್ಣಿನ ಮನೆಗಳೆಲ್ಲ ನೀರಿನಲ್ಲಿ ಕೂಡಿ ಕರಗಿಹೋದವು. ಆಗ ಸಾಕಷ್ಟು ಪ್ರಾಣಗಳು ಹೋದವು. ಇಂಥ ಬೀಭತ್ಸ ಪ್ರಸಂಗದಲ್ಲಿ ಊರಿನ ಭಕ್ತಿವಂತ(?) ಸಿದ್ದಪ್ಪ ಪೂಜಾರಿ ಭಾಗಮ್ಮನಲ್ಲಿ ಒಂದು ವಿಚಿತ್ರ ಬೇಡಿಕೆ ಮಾಡಿಕೊಂಡ. ''ಭೋರ್ಗರೆಯುತ್ತ ಹರಿಯುತ್ತಿರುವ ಭೀಮೆ ಈಗಿಂದೀಗ್ಗೆ ಜರ್‍ರನೆ ಇಳಿದರೆ, ಭಾಗಮ್ಮನ ಎದುರು ಕಬ್ಬಿಣದ ಕೊಂಡಿಯನ್ನು ಬೆನ್ನಿಗೆ ಸಿಕ್ಕಿಸಿಕೊಂಡು ಊರ ಮಧ್ಯದ (ನಡೂರ ಲಕ್ಷ್ಮೀ) ಗುಡಿಯಿಂದ ಭಾಗಮ್ಮನ ಗುಡಿಯ ತನಕ 'ಸಿಡಿ' ಆಡುವುದಾಗಿ ಬೇಡಿಕೊಂಡನಂತೆ !'' ಆಶ್ಚರ್ಯವೆನ್ನುವಂತೆ ಆರ್ಭಟಿಸುತ್ತ ಹರಿಯುತ್ತಿದ್ದ ಭೀಮೆ ತಕ್ಷಣ ಶಾಂತವಾಗಿ ಸಣ್ಣದಾಗಿ ಹರಿಯತೊಡಗಿದಳಂತೆ !

ಈ ಮೇಲಿನ ಕತೆಯ ಅಂತೆ-ಕಂತೆಗಳೆಲ್ಲ ಪುಂಖಾನುಪುಂಖವಾಗಿ ಬೆಳೆದು ಈಗ ದೀಪಾವಳಿಯ ನೀರು ತುಂಬುವ ಹಬ್ಬದಂದು ಶುರುವಾದ 'ಸಿಡಿ' ಆಡುವ ಕಾರ್ಯ ಕಾರಹುಣ್ಣಿಮೆಯ ಹೊನ್ನುಗ್ಗಿಯ ದಿನಗಳವರೆಗೆ ಸಾಂಗೋಪಾಂಗವಾಗಿ ಜರುಗುತ್ತಿದೆ. ವಾರದ ಪ್ರತಿ ಶುಕ್ರವಾರ ಇಲ್ಲಿ ಸಣ್ಣ ಜಾತ್ರೆಯೇ ನಡೆಯುತ್ತದೆ. ಹತ್ತೆಂಟು ಸಾವಿರ ಜನರು ಇಲ್ಲಿ ಸೇರುತ್ತಾರೆ. ಹೋಟೆಲುಗಳು, ಅಂಗಡಿ ಮುಂಗಟ್ಟು ಮುಂತಾದವರ ವ್ಯಾಪಾರದ ಭರಾಟೆಯಂತೂ ದಿನ ದಿನಕ್ಕೆ ಹೆಚ್ಚುತ್ತಲೇ ಇದೆ. ಹೀಗಾಗಿ ಹಿಂದೊಮ್ಮೆ ದಿಕ್ಕೇಡಿಯಾಗಿದ್ದ ಭಾಗಮ್ಮ ಇಂದು ಸಾವಿರಾರು ಜನ ಭಕ್ತರ ಪ್ರೀತಿಗೆ ಪಾತ್ರಳಾಗಿದ್ದಾಳೆ. ಸರ್ಕಾರವೇ ಎಂಡೋಮೆಂಟ್ ಕಮಿಟಿಯೊಂದನ್ನು ರಚಿಸಿ ಭಾಗಮ್ಮನನ್ನು 'ಭಾಗ್ಯಲಕ್ಷ್ಮೀ'

## ನಮ್ಮ ಮನಸ್ಸುಗಳಿಗೆ ಅಂಟಿದ ಮೌಢ್ಯದ ಜಿಡ್ಡು!

*೨೧ನೇ ಶತಮಾನದ ಕಂಪ್ಯೂಟರ್ ಯುಗದಲ್ಲಿ ನಾವೆಲ್ಲ ವಾಸಿಸುತ್ತಿದ್ದರೂ ನಮ್ಮ ಮನಸ್ಸುಗಳಿಗೆ ಅಂಟಿದ ಮೌಢ್ಯದ ಜಿಡ್ಡು ಇನ್ನೂ ಹೋಗಿಲ್ಲ. ಸಾಮಾನ್ಯವಾಗಿ ಚಿಕ್ಕಮಕ್ಕಳಿಗೆ ಬರುವ ಕಾಯಿಲೆಗಳಾದ ಒಟ್ಟತಟ್ಟು, ನಾಯಿಕೆಮ್ಮು, ದಡಾರ, ಪೋಲಿಯೋ ಮುಂತಾದವುಗಳಿಗೆ ದೇವತೆಗಳು ಮುನಿಸಿಕೊಂಡಿರುವುದೇ ಕಾರಣ ಎಂದು ತಿಳಿಯುತ್ತೇವೆ. ಇವುಗಳಿಗೆ ಕಾರಣವಾದ ಮಾರಮ್ಮ, ಮರಗಮ್ಮ, ದುರುಗಮ್ಮ ಮುಂತಾದ ದೇವತೆಗಳಿಗೆ ಹರಕೆ ಹೊತ್ತು ನೈವೇದ್ಯ ನೀಡಿಬಂದಾಗ ಮಾತ್ರ ಅವರು ಸಂತುಷ್ಟಗೊಳ್ಳುತ್ತಾರೆ ಎಂದು ಭ್ರಮಿಸಿದ್ದೇವೆ.*

*ಇಂಥ ದೇವರುಗಳಲ್ಲಿ ಕೆಲವು ಪ್ಯೂರ್ ವೆಜಿಟೇರಿಯನ್ ಆದರೆ ಇನ್ನು ಹಲವು ''ನಾನ್‌ವೆಜ್''. ಹಲವು ದೇವತೆಗಳಿಗೆ ನಿಮ್ಮ ತಲೆಕೂದಲೇ ಸಾಕು. ಕೆಲವಕ್ಕೆ ನೀವು ಕ್ಯಾಕರಿಸಿ ಉಗುಳಿದರೂ ಅದೇ ನೈವೇದ್ಯವೆಂದು ಅವು ಸಂಭ್ರಮಿಸುತ್ತವೆ.*

*ಹೀಗೆ ನಾವು ಹುಟ್ಟಿಸಿದ ದೇವಾನುದೇವತೆಗಳೆಲ್ಲ 'ಭಯ'ದಿಂದಲೋ ಅಥವಾ ಇನ್ನಾರದೋ ತೆವಲು ತೀರಿಸಲು ಹುಟ್ಟಿದವುಗಳೇ ಆಗಿವೆ. ಇದಕ್ಕೆ ತಾಜಾ ಉದಾಹರಣೆಯಾಗಿ ತೀರಾ ಇತ್ತೀಚೆಗೆ 'ಏಡ್ಸಮ್ಮ' ಎಂಬ ದೇವತೆಯನ್ನು ಹೆಸರಿಸಬಹುದು. 'ಏಡ್ಸ್' ಎಂಬ ಮಾರಕ ರೋಗ ಇಂದು ಜಗತ್ತಿನಾದ್ಯಂತ ಬೆಳೆಯುತ್ತಿದೆ. ಇದನ್ನು ಹತೋಟಿಗೆ ತರಲು ಆಗುತ್ತಿಲ್ಲ. ಈ ರೋಗಕ್ಕೆ ಯಾವ ಮದ್ದೂ ಇಲ್ಲ. ಏಡ್ಸ್‌ಗೆ ತುತ್ತಾದ ವ್ಯಕ್ತಿಯ ಜೀವ ಉಳಿಸುವುದಕ್ಕಂತೂ ಸಾಧ್ಯವೇ ಇಲ್ಲ. ಇಂಥ ಸಂದರ್ಭದಲ್ಲಿ ತೀರಾ ಅಸಹಾಯಕವಾದ ಮನಸ್ಸು ದಿಕ್ಕು ತೋಚದೆ ಕಂಗಾಲಾಗಿ 'ಏಡ್ಸಮ್ಮ' ಎಂಬ ದೇವರನ್ನೆ ಸೃಷ್ಟಿಸಿದೆ. ಮಾತ್ರವಲ್ಲ ಎಲ್ಲ ದೇವತೆಗಳಂತೆ ಈ ಆಧುನಿಕ ದೇವತೆ ಏಡ್ಸಮ್ಮನಿಗೂ ಕಾಯಿ-ಕರ್ಪೂರ ಮುಂತಾದ್ದೆಲ್ಲ ಶುರುವಾಗಿವೆ. ಹರಕೆ ಹೊರೋದಕ್ಕೆ, ದಿಂಡಿರುಳು ಉರುಳೋದಕ್ಕೆ ಆಗಲೇ ಅನೇಕರು ಸಜ್ಜಾಗಿ ನಿಂತಿದ್ದಾರೆ. ಇಂಥದೇ ಯಾವುದೋ ಒಂದು ಭಯಾನಕ ರೋಗ ಅಥವಾ ಪ್ರಕೃತಿ ವಿಕೋಪಗಳ ಹಿನ್ನೆಡೆಯೇ ಈ ಘತ್ತರಗಿ ಭಾಗಮ್ಮನ ಜನನ ಆಗಿರಬಹುದು. ಈ ದೇವತೆ ಮೊದಲು ಬಂದು ನಿಂತ ನೆಲೆ ಜಬ್ಬಲ ! ಇದು ಏನನ್ನೋ ಸಂಕೇತಿಸುತ್ತಿರುವಂತಿದೆ. ಆಮೇಲೆ ಉಕ್ಕಿ ಬಂದ ಭೀಮಾನದಿ ಜರ್‍ರನೆ ಇಳಿದದ್ದು ಇತ್ಯಾದಿಗಳನ್ನೆಲ್ಲ ಅರ್ಥೈಸುವುದು ನಮಗೆ ಸಾಧ್ಯವಾಗುವುದಾದರೆ ಸತ್ಯ ಕಾಣಿಸಿಕೊಂಡೀತು !*

## ಹರಿಜನರನ್ನು ಸೇರಿಸಿಕೊಳ್ಳದ ಭಾಗಮ್ಮ!

ಸಾಮಾನ್ಯವಾಗಿ ದೇವರುಗಳು ಯಾವ ಜಾತಿ ವರ್ಗದವರನ್ನೂ ತಾರತಮ್ಯ ದೃಷ್ಟಿಯಿಂದ ನೋಡಬಾರದು. ಆದರೆ ನಮ್ಮ ದೇಶದಲ್ಲಿಯ ಬಹಳಷ್ಟು ದೇವರುಗಳು ಹರಿಜನ-ಗಿರಿಜನ ಜನಾಂಗದ ವ್ಯಕ್ತಿಗಳ ನೆರಳನ್ನು ಕಂಡರೆ ಕೋಪವನ್ನು ಪ್ರಕಟಿಸುತ್ತವೆ. ಇದನ್ನು ಉಲ್ಲಂಘಿಸಿ ಹೋದವರಿಗೆ ತಕ್ಕ ಶಾಸ್ತಿಯೇ ಕಾದಿದೆ ಎಂಬ ಹುಸಿ ಭಯವನ್ನು ಈಗಾಗಲೇ ಎಲ್ಲಾ ಕಡೆ ಹಬ್ಬಿಸಿದ್ದಾಗಿದೆ.

ಅಂದಂತೆ ಭಾಗಮ್ಮ ದೇವತೆಯ ಸುತ್ತಲೂ ಇಂಥ ಅನೇಕ ಕಟ್ಟು ಕತೆಗಳೂ ಹಬ್ಬಿವೆ. ಹಾಗಾಗಿ ಇಲ್ಲಿಯೂ ಆ ಜನಾಂಗದ ಯಾವುದೇ ವ್ಯಕ್ತಿ ಸಿಡಿ ಆಡುವಂತಿಲ್ಲ. ಹಾಗೊಮ್ಮೆ ಆಡಲೇಬೇಕೆಂದಿದ್ದರೆ ಅಂಥವರ ಬೆನ್ನಿಗೆ ಕಬ್ಬಿಣದ ಕೊಂಡಿಯನ್ನು ಸಿಕ್ಕಿಸಿ, ನಡು ಊರ ಲಕ್ಷ್ಮಿಯ ಗುಡಿಯ ತನಕ ನಡೆಸಿಕೊಂಡೇ ಬರುತ್ತಾರೆ. ಇದನ್ನು 'ನೆಲಸಿಡಿ' ಎಂಬ ಬೇರೆ ಹೆಸರಿನಿಂದ ಕರೆಯುತ್ತಾರೆ. ಈ ಭಾಗಮ್ಮನಿಗೆ ಹರಿಜನರೆಂದರೆ ಅಷ್ಟೇಕೆ ತಾತ್ಸಾರ ?!

ಎಂಬ ಹೊಸ ಹೆಸರಿನಿಂದ ಕರೆಯುತ್ತಿದೆ. ಚಿನ್ನದ ಮೊಟ್ಟೆಯನ್ನೇ ಇಡುವ ಈ ಕೋಳಿ (ಭಾಗಮ್ಮ)ಯ ಸುತ್ತ ಸರ್ಕಾರಿ ಮತ್ತು ಅರೆ ಸರ್ಕಾರಿ ಕಾಕ-ಪ್ರೋಕರೆಲ್ಲ ತುಂಬಿ ಜನಸಾಮಾನ್ಯನ ಜೇಬು ಕತ್ತರಿಸುತ್ತಿದ್ದಾರೆ. ಜೊತೆ-ಜೊತೆಗೆ ಅವಿಚಾರ ಅಂಧಶ್ರದ್ಧೆಗಳನ್ನು ಬೆಳೆಸುತ್ತಿದ್ದಾರೆ. ನಾನು ಘತ್ತರಗಿಯ ಭಾಗಮ್ಮನ ಗುಡಿಯ ಸಮೀಪ ಬರುತ್ತಲೇ ಹತ್ತು ಗಂಟೆಯ ಸಮಯ. ಅದಾಗಲೇ ಸಾವಿರಾರು ಸಂಖ್ಯೆಯಲ್ಲಿ ಜನ ಗುಡಿಯ ಸುತ್ತ-ಮುತ್ತ ನೆರೆದಿದ್ದರು. ಭಾಗ್ಯವಂತಿಯ ಕಥೆ (ಕಟ್ಟುಕತೆ) ಯನ್ನು ಹೇಳುವ ನಾನಾ ಬಗೆಯ ಕ್ಯಾಸೆಟ್ಟುಗಳು, ಸಾವಿರಾರು ಸುಳ್ಳಿನ ಕಂತೆಗಳಿಂದ ಕೂಡಿದ ಪುಸ್ತಕಗಳು, ಬಂಡ್, ಕುಂಕುಮ, ಕರಿದಾರ, ಕಾಯಿ, ಕರ್ಪೂರ, ಊದುಬತ್ತಿ, ಎಣ್ಣೆ ಮಾರುವವರು ಸಜ್ಜಾಗಿ ಬಕರಾಗಳನ್ನೇ ಇದಿರು ನೋಡುತ್ತ ನಿಂತಿದ್ದರು. ಮೇಲ್ನೋಟಕ್ಕೆ ಸುಶಿಕ್ಷಿತರಂತೆ ಕಾಣುವ ಹಲವಾರು ಜನ ಗಂಡು ಮಕ್ಕಳು, ಹೆಣ್ಣು ಮಕ್ಕಳು ಭಾವಪರವಶರಾಗಿ 'ಸಿಡಿ'ಗಾಗಿ ಕಾಯ್ದುಕೊಂಡಿದ್ದಂತೆ ಕಾಣುತ್ತಿತ್ತು.

'ಸಿಡಿ' ಆಡಬೇಕೆಂದು ಬಯಸುವವರು ಒಂದು ವಾರ ಮುಂಚಿತವಾಗಿಯೇ ಬಂದು ಎಂಡೋಮೆಂಟ್ ಕಮಿಟಿ ನೇಮಿಸಿದ ಅಧಿಕಾರಿಗಳನ್ನು ಸಂಪರ್ಕಿಸಬೇಕು. ಮೊದಲನೆಯ 'ಸಿಡಿ' ಆಡಬೇಕೆಂದು ಬಯಸುವವರು ಅಂದು ನಡೆಯುವ ಭಾಗ್ಯವಂತಿಯ 'ಸಿಡಿ' ಹರಾಜಿನಲ್ಲಿ ಪಾಲ್ಗೊಳ್ಳಬೇಕು. ಯಾರು ಹೆಚ್ಚು ಹಣ ನೀಡಲು ಒಪ್ಪಿಕೊಳ್ಳುತ್ತಾರೋ ಅವರು ಆ ದಿನ ಮೊದಲ ಸಿಡಿ ಆಡಲು ಅರ್ಹರಾಗುತ್ತಾರಂತೆ !

ಹಾಗಾಗಿ ನಾನು ಹೋದ ಹಿಂದಿನ ವಾರದ ಶುಕ್ರವಾರದಂದು ಸಿಡಿಯನ್ನು ಮೊದಲಿಗೆ ಆಡಲು ಉತ್ಸುಕರಾಗಿದ್ದ ಕುಟುಂಬದವರೆಲ್ಲ ಗುಡಿಯ ಪೌಳಿಯೊಂದರಲ್ಲಿ ಸಜ್ಜಾಗಿದ್ದರು. ಅವರಿಗೆ 'ಸಿಡಿ'ಯ ಉಡುಗೆಯನ್ನು ಗುಡಿಯ ಪೂಜಾರಿಗಳೇ ತೊಡಿಸುತ್ತಿದ್ದರು. ಹಣೆಗೆ, ಕೈಯಿಗೆ, ಕಾಲಿಗೆ, ಹಸಿ ಕುಂಕುಮ ಹಚ್ಚಿ, ಹಣೆ ತುಂಬ ಅಕ್ಕಿಯನ್ನು ಸವರಿ, ತಲೆಯ ತುಂಬ ಮಲ್ಲಿಗೆ ಹೂ ಮುಡಿಸಿದರು. ಕೈತುಂಬ ಹಸಿರು ಬಳೆ ತೊಡಿಸಿದರು. ಅವರು ತಾವು ತಮ್ಮ ಮನೆಯಿಂದ ತಂದ ಬಂಗಾರದ ಒಡವೆಗಳನ್ನು ಕೊರಳತುಂಬ-ಮೈ-ಕೈ ತುಂಬ ಧರಿಸಿದರು. ಕಣಕದಲ್ಲಿ ಮಾಡಿದ ಪಣತಿಯಲ್ಲಿ ಎಣ್ಣೆ ಹಾಕಿ ಬತ್ತಿ ಹಚ್ಚಿ ತಲೆಯ ಮೇಲೆ ಹೊತ್ತು ಭಾಗಮ್ಮನ ಗುಡಿಯ ಮುಂದಿನ ಕಂಬಕ್ಕೆ ಮೊದಲು ಎರಗಬೇಕು. ನಂತರ ಗುಡಿಯ ಹಿಂಭಾಗದ ಕಿಂಡಿಯಲ್ಲಿ ಕಾಣುವ ಭಾಗಮ್ಮನ ಕಂಬವನ್ನು ನೋಡಬೇಕು.

ನನ್ನ ಸಮಕ್ಷಮದಲ್ಲಿ ಹಿತ್ತಲ ಶಿರೂರ ಗ್ರಾಮದ ಮಾಣಿಕಮ್ಮಳಿಗೆ ಭಾಗಮ್ಮಳ ಕಿಂಡಿಯ ಮುಂದೆ ನಿಂತಿರುವ ಡೊಳ್ಳು ಬಡಿಯುವವನ ಡೊಳ್ಳಿಗೆ ಕೈಯ್ಯಾನಿಸಿ ನಡುಬಾಗಿ ನಿಲ್ಲಲು ಹೇಳಿದರು. ಈಕೆಗೆ ನಾಲ್ಕಾರು ವರ್ಷಗಳ ಹಿಂದೆ ತಲೆಶೂಲೆ ಇತ್ತಂತೆ. ಮೈ-ಕೈ ನೋವು ಜಾಸ್ತಿಯಾಗಿ ಮನಸ್ಸೇ ಒಂಥರಾ ಆಗಿತ್ತಂತೆ. ಯಾವ ಡಾಕ್ಟರುಗಳ ಹತ್ತಿರ ಹೋದರೂ ಅದು ಕಡಿಮೆ ಆಗಿದ್ದಿಲ್ಲವಂತೆ. ಒಂದು ಸಲ ಭಾಗಮ್ಮಳ ಘತ್ತರಗಿಗೆ ಬಂದು ನನ್ನ ಅನಾರೋಗ್ಯ ವಾಸಿಯಾದರೆ ಸಿಡಿ ಆಡುವುದಾಗಿ ಬೇಡಿಕೊಂಡಳಂತೆ. ಹೀಗೆ ಬೇಡಿಕೊಂಡ ಕೆಲವೇ ದಿನಗಳಲ್ಲಿ ತನ್ನ ಆರೋಗ್ಯ ಸುಧಾರಿಸಿತಂತೆ. ಹಾಗಾಗಿ ಮಾಣಿಕಮ್ಮ ಈಗ ಇಲ್ಲಿ ಸಿಡಿ ಆಡಲು ಬಂದಿದ್ದಾಳೆ. ನಡುಬಾಗಿ ನಿಂತ ಮಾಣಿಕಮ್ಮನ ಬೆನ್ನ ಹುರಿಗುಂಟ ಹಬ್ಬಿದ ಚರ್ಮವನ್ನು ಪೂಜಾರಿ ತನ್ನ ಶಕ್ತಿಯನ್ನೆಲ್ಲ ಉಪಯೋಗಿಸಿ ಜಗ್ಗಿ ಹಿಡಿಯುತ್ತಿದ್ದಂತೆಯೇ ಪೂಜಾರಿಗಳು, ವಾಲಗ ಊದುವವರು, ಡೊಳ್ಳು ಬಾರಿಸುವವರು, ವಾತಾವರಣದಲ್ಲಿ ಒಂದು ಬಗೆಯ ಆವೇಶವನ್ನು ತುಂಬತೊಡಗಿದರು. ಕಿವಿ ಪಟಲ ಹರಿಯುವಂತೆ ಬಾರಿಸಿದರು. ಮರು ಯೋಚನೆಗೆ ಅವಕಾಶವಿಲ್ಲದಂತೆ, ಅವಸರ ಅವಸರವಾಗಿ, ಡೊಳ್ಳಿಗೆ ಇನ್ನಷ್ಟು ತಲೆ ಆನಿಸಿ, ಮಾಣಿಕಮ್ಮನನ್ನು ಬೆನ್ನು ಬಾಗಿಸಿ ನಿಲ್ಲಿಸಿದರು. ಬಾಗಿನಿಂತ ವ್ಯಕ್ತಿಗೆ ಇತ್ತ ಏನಾಗುತ್ತದೆಂದು ಕಾಣಿಸುವುದಿಲ್ಲ ಕೂಡ. ಬೆನ್ನ ಹುರಿಯ ಪಕ್ಕದ ನೆಣದ ಭಾಗಕ್ಕೆ ಬೂದಿ ಸವರಿದ ಪೂಜಾರಿಗಳು, ಅದೇ ವೇಗದಿಂದ ಉಕ್ಕಿನ ಕೊಂಡಿಗಳಿಗೆ ಇನ್ನಷ್ಟು ಚೂಪಾದ ಇಂಗ್ಲಿಷ್ 'T' ಆಕಾರದ ಇನ್ನೊಂದು ಟೋಪನ್ (ಉಕ್ಕಿನ) ಸಿಕ್ಕಿಸಿ ಸಜ್ಜಾದರು. ಆಗ ಮತ್ತಷ್ಟು ವಾಲಗಗಳು ಹೊಡಕೊಂಡವು. ಎಲ್ಲರೂ ನೋಡ-ನೋಡುತ್ತಿರುವಂತೆಯೇ ಆ ಪೂಜಾರಿ ಎತ್ತಿ ಹಿಡಿದ ಬೆನ್ನ ತೊಗಲಿನ ಭಾಗಕ್ಕೆ ಚಿತ್ರದಲ್ಲಿ ಕಾಣಿಸುವಂತೆ ಜೋರಾಗಿ ಕೊಂಡಿಯನ್ನು ಚುಚ್ಚಿದರು. ಚುಚ್ಚಿದ ಭಾಗಕ್ಕೆ ರಕ್ತಬಾರದಿರಲೆಂದು ಕೂಡಲೇ ಬೂದಿ ಬಳಿದರು. ಸ್ನಾಯು ನೆಣದಿಂದ ಭರಿತವಾದ ಆ ಭಾಗದಲ್ಲಿ ರಕ್ತನಾಳಗಳು ಇರದ್ದರಿಂದ ಹೆಚ್ಚು ರಕ್ತವೂ ಆಗ ಕಾಣಿಸುವುದಿಲ್ಲ.

ಹೀಗೆ ಕೊಂಡಿ ಹಾಕಿಸಿಕೊಂಡು ಬಂದವರನ್ನು ೪೦೦ ಫೀಟ ದೂರ ಇರುವ ನಡುಊರ ಲಕ್ಷ್ಮಿಯ ಗುಡಿಯ ಹತ್ತಿರದಲ್ಲಿರುವ 'ಸಿಡಿ' ಆಡಲಿರುವ ಕ್ರೇನ್ ರೀತಿಯ ಬಂಡಿಗೆ ಹಗ್ಗದಿಂದ

## ಬೌದ್ಧಿಕ ದಾರಿದ್ರ್ಯವನ್ನು ಬೆಳೆಸುತ್ತಿರುವ ಸರ್ಕಾರ

*ಘತ್ತರಗಿ ಭಾಗ್ಯವಂತಿ ದೇವಿಗೆ ಹರಕೆ ಹೊತ್ತು 'ಸಿಡಿ' ಆಡಲು ಬರುವವರಲ್ಲಿ ಬಹುತೇಕರು ಹೆಣ್ಣು ಮಕ್ಕಳೇ ಆಗಿರುತ್ತಾರೆ. ಅವರಿಗೆ ಆಗಾಗ ದೈಹಿಕವಾಗಿ ಕಾಡುವ ತಲೆನೋವು, ಹೊಟ್ಟೆನೋವು, ವಾಂತಿ ಮುಂತಾದ ಸಣ್ಣ ಪುಟ್ಟ ಅನಾರೋಗ್ಯವನ್ನು ಗುಣಪಡಿಸಬೇಕೆಂದು ಭಾಗಮ್ಮನಲ್ಲಿ ಹರಕೆ ಹೊರುತ್ತಾರೆ. ಕೆಲವರು ತಮ್ಮ ಟ್ರಾನ್ಸ್‌ಫರ್‌ಗಳಿಗಾಗಿಯೋ, ಇಲ್ಲದ ಮಕ್ಕಳಿಗಾಗಿಯೋ ಅಥವಾ ಒಳ್ಳೆಯ ಮನೆತನದ ಗಂಡು ಸಿಗಲೆಂದೋ ಹರಕೆ ಹೊತ್ತಿರುತ್ತಾರೆ.*

*ಕೆಲವು ಜನ ಮಹಾತ್ಮರಂತೂ ತಾವೇ ತಮ್ಮ ಕೈಯಾರೇ ಮಾಡಿದ 'ಖೂನಿ'ಯಿಂದ ಪಾರಾಗಿ, ಯಾವ ಜೇಲು ಕಂಬಿಗಳನ್ನು ಎಣಿಸದೆ ಸಲೀಸಾಗಿ ಹೊರಬಂದರೆ 'ಸಿಡಿ' ಆಡುವುದಾಗಿ ವಾಗ್ದಾನ ಮಾಡಿರುತ್ತಾರೆ. ಕಾಗೆ ಕುಳಿತುಕೊಳ್ಳುವುದಕ್ಕೂ ಟೊಂಗೆ ಬೀಳುವುದಕ್ಕೂ ಸಮನಾಯ್ತು ಎಂಬಂತೆ ತಮ್ಮ ಹಿಂದಿನ ಬೇಡಿಕೆ ಈಡೇರುತ್ತಲೇ ಇಂಥವರು 'ಸಿಡಿ' ಆಡಲು ಘತ್ತರಗಿ ಭಾಗಮ್ಮನಲ್ಲಿಗೆ ಬಂದೇ ಬರುತ್ತಾರೆ. ಒಂದು ವೇಳೆ ಹರಕೆ ಹೊತ್ತವರು ತಮ್ಮ ಇಷ್ಟಾರ್ಥ ಸಿದ್ಧಿಯಾಗಿದ್ದರೂ 'ಸಿಡಿ' ಆಡಲು ಬಾರದಿದ್ದರೆ ಇಂಥವರಿಗೆ ಭಾಗಮ್ಮ ಕಾಟ ಕೊಡಲು ಶುರು ಮಾಡುತ್ತಾಳಂತೆ, ಎಂಬ ವದಂತಿಗಳು ಸಾಕಷ್ಟು ಹಬ್ಬಿವೆ.*

*ಇಂಥ ಕಟ್ಟುಕತೆಗಳಿಂದ ಸುಪ್ರಸಿದ್ಧಳಾದ ಭಾಗಮ್ಮಳ ವರ್ಷದ ೮ ತಿಂಗಳ ಗಳಿಕೆಯೇ ಕೇವಲ ೫-೬ ಲಕ್ಷವಂತೆ! ಇದು ಎಂಡೋಮೆಂಟ್ ಕಮಿಟಿಯವರು ತೋರಿಸುವ ಲೆಕ್ಕ. ತೋರಿಸದ ಲೆಕ್ಕ ಎಷ್ಟಿದೆಯೋ ಬಹುಶಃ ಭಾಗಮ್ಮನಿಗೂ ಗೊತ್ತಾಗುವುದಿಲ್ಲ.*

***ಮತ-ಮೌಢ್ಯ :** ಕುರುಡು ನಂಬಿಕೆ ಇತ್ಯಾದಿಗಳನ್ನು ಪರಿಪೋಷಿಸುವುದು ಘೋರ ಅಪರಾಧವೆಂದು ನಮ್ಮ ಸಂವಿಧಾನದ ೫೧/ಎ. ಪರಿಚ್ಛೇದ ಹೇಳುತ್ತದೆ. ಆದರೆ ಸರಕಾರವೇ ಖುದ್ದಾಗಿ ನಿಂತು ಇಲ್ಲಿ ಇದನ್ನು ನಡೆಸುತ್ತಿದೆ. ಇದು ಏನನ್ನು ತೋರಿಸುತ್ತದೆ ಎಂಬುದನ್ನು ಪ್ರಜಾವಂತರೇ ಅರಿಯಬೇಕು.*

## ಸಾರ್ವಜನಿಕರ ಗಮನಕ್ಕೆ

ನಮ್ಮ ದೇಶದಲ್ಲಿಯೇ ಅತ್ಯಂತ ಶ್ರೀಮಂತ ದೇವರು ಎಂದು ಹೆಸರಾದ ತಿರುಪತಿ ತಿಮ್ಮಪ್ಪ ಈಗಾಗಲೇ ಸಾಕಷ್ಟು ಹೆಸರುವಾಸಿ. ಅಲ್ಲಿ ಸಿಗುವ ಲಾಡು (ಪ್ರಸಾದ)ಗಳನ್ನು ಸೇವಿಸುವುದು ಒಂದು ಪುಣ್ಯವಾದರೆ ಅಲ್ಲಿ ನುಣ್ಣಗೆ ತಲೆ ಬೋಳಿಸಿಕೊಳ್ಳುವುದು ಇನ್ನೊಂದು ಮಹಾಪುಣ್ಯದ ಕೆಲಸವೆಂದೇ ಎಲ್ಲರ ನಂಬುಗೆ.

ಇತ್ತೀಚೆಗೆ ಇಲ್ಲಿ ತಲೆ ಬೋಳಿಸಿಕೊಂಡ ಅನೇಕ ಮಹಾತ್ಮರು ಏಡ್ಸ್‌ಗೆ ಬಲಿಯಾದ ಸಮಾಚಾರಗಳಿವೆ. ಇವನಿಗೆ ತಲೆ ಬೋಡಿಸಿದ ಕತ್ತಿಯೇ ಇನ್ನೊಬ್ಬರಿಗೆ ಮತ್ತೊಬ್ಬರಿಗೆ ಉಪಯೋಗಿಸಿದ್ದರಿಂದ ಅವರೂ ಏಡ್ಸ್ ರೋಗಕ್ಕೆ ತುತ್ತಾಗಿ ಗೊಟಕ್ ಅಂದ ಸಮಾಚಾರಗಳು ಇಂದು ಕೇಳಿಬರುತ್ತಿವೆ.

ಆದರೆ ಘತ್ತರಗಿಯಲ್ಲಿ ಮಾತ್ರ ದಿನಕ್ಕೆ ಕನಿಷ್ಠ ೩೦-೪೦ ಜನರಿಗೆ ಒಂದೇ ಹರಿತವಾದ ಕಬ್ಬಿಣದ ಕೊಂಡಿಗಳಿಂದ ದನಕ್ಕೆ ಚುಚ್ಚಿದಂತೆ ಬೆನ್ನಿನ ಕೆಳಭಾಗದಲ್ಲಿ ಚುಚ್ಚಲಾಗುತ್ತದೆ. ಅದು ನೆಣದ ಭಾಗ ಆಗಿದ್ದರೂ ಅಲ್ಪ ಪ್ರಮಾಣದಲ್ಲಿ ರಕ್ತ ಬಂದೇ ಬರುತ್ತದೆ. ಹೀಗೆ ಬಂದ ರಕ್ತದ ಕೊಂಡಿಯನ್ನೇ ಮತ್ತೊಬ್ಬರಿಗೆ ಉಪಯೋಗಿಸುವುದರಿಂದ ಅವರು ಹೊಂದಿದ ರೋಗ ಅನಾಯಾಸವಾಗಿ ಇನ್ನೊಬ್ಬರಿಗೆ ಹರಡುವುದರಲ್ಲಿ ಸಂಶಯವಿಲ್ಲ.

ಹೀಗಾಗಿ ಏಡ್ಸ್ ಎಂಬ ಮಾರಕ ರೋಗ ಹಬ್ಬುವ ಸಾಧ್ಯತೆ ಇದೆ.

ಕಟ್ಟುತ್ತಾರೆ. ಹೀಗೆ ಕ್ರೇನ್‌ಗೆ ಕಟ್ಟುವಾಗ, ಜೋತಾಡಿಕೊಂಡು ಹೋಗುವಾಗ, ಹೆಚ್ಚು ತೊಂದರೆ ಆಗದಿರಲೆಂದು ಕಾಲುಗಳನ್ನು ಸಮಗೊಳಿಸಿ, ಎರಡೂ ಹೆಬ್ಬೆರಳುಗಳನ್ನು ಹಗ್ಗದಿಂದ ಕಟ್ಟುತ್ತಾರೆ. ಕ್ರೇನ್ ಬಾಗಿಸಿ, ಬೆನ್ನಿಗೆ ಹಾಕಿದ ಕೊಂಡಿಗಳಿಗೆ, ತೊಗಲಿನ ಪಟ್ಟಿಗಳನ್ನು ಹಾಕಿ, ಅದನ್ನು ಕ್ರೇನ್ ತುದಿಗೆ ಬಲವಾಗಿ ಬಿಗಿಯುತ್ತಾರೆ. ಕ್ರೇನ್ ಮೇಲಕ್ಕೇರಲು ಆರಂಭಿಸಿದೊಡನೆ ಜೋಲಿ ಹಿಡಕೊಳ್ಳಲು ತಿಳಿಸುತ್ತಾರೆ. ನಡು ಬೆನ್ನಿನ ಭಾಗಕ್ಕೆ ಕೊಂಡಿ ಹಾಕಿ ತೂಗುಸಿಕ್ಕಿಸಿದ್ದರಿಂದ ದೇಹದ ತೂಕವೂ ಸಮಭಾಗವಾಗಿ ಕೈಯ್ಯ ಹಗ್ಗದ ಮೇಲೆ ಅರ್ಧ ಭಾರ ಬೀಳುತ್ತದೆ. ಯಾರಾದರು ಐವತ್ತು ಕೇಜಿ ತೂಕ ಇದ್ದರೆ, ಅದರಲ್ಲಿ ೨೦-೩೦ ಕೇಜಿ ತೂಕ ಕೈಯ್ಯ ಹಗ್ಗಕ್ಕೆ ಹೋದರೆ ೧೫-೨೦ ಕೇಜಿ ತೂಕ ಬೆನ್ನಿಗೆ ಬೀಳುತ್ತದೆ. ಲಕ್ಷ್ಮೀ ಗುಡಿಯಿಂದ ಭಾಗ್ಯವಂತಿ ಗುಡಿಯವರೆಗಿನ ದಾರಿ ಸ್ವಲ್ಪ ಇಳಿಜಾರಾಗಿ ಇರುವುದರಿಂದ, ಬಂಡಿ ಎಳೆದೊಯ್ಯುವಾಗ, 'ಸಿಡಿ' ಯಲ್ಲಿ ತೂಗಾಡುವವರಿಗೆ ಹೆಚ್ಚು ತೊಂದರೆ ಆಗುವುದಿಲ್ಲ. ಜೋತಾಟ ಸಾಧ್ಯವಾಗುವುದಿಲ್ಲ. ಗುಡಿಯವರೆಗೆ ಕ್ರೇನ್ ಬಂಡಿ ಹೋದೊಡನೆಯೇ ಮೆಲ್ಲಗೆ ಕ್ರೇನ್ ಇಳಿಸಿದಂತೆ, ಬಂಡಿಗೆ ಜೋಡಿಸಿದ ಮೂವತ್ತು ಅಡಿ ಉದ್ದದ ಮರದ ತುಂಡನ್ನು ಇಳಿಸುತ್ತಾರೆ. ಕೊಂಡಿಗೆ ಹಾಕಿ ಕಟ್ಟಿದ ತೊಗಲ ಪಟ್ಟಿಯನ್ನು ಬಿಚ್ಚಿ ಅವರನ್ನು ಗುಡಿಯ ಒಳಕ್ಕೆ ಕರೆದೊಯ್ದು , ಬೋರಲು ಮಲಗಿಸಿ ಕೊಂಡಿಗಳನ್ನು ಕಳಚಿ, ಕೊಂಡಿ ಸಿಕ್ಕಿಸಿದ ಜಾಗಕ್ಕೆ ಪಂಚಲೋಹದ ಪಾತ್ರೆಯೊಂದರಲ್ಲಿ ಸಜ್ಜುಗೊಳಿಸಿದ ಬೂದಿ ಮುಲಾಮನ್ನು ಹಚ್ಚಿ, ವೀಳ್ಯದ ಎಲೆಗೆ ಎಣ್ಣೆ ಹಚ್ಚಿ ಕಾಸಿ, ಅದರ ಮೇಲೆ ಮುಚ್ಚಿ , ಎರಡು ಪದರಿನ ಬಟ್ಟೆಯನ್ನು ಕಟ್ಟುತ್ತಾರೆ.



ದೇವತೆಗೆ ನಮಸ್ಕಾರ ಮಾಡಿ ಹೊರಬರುತ್ತಿದ್ದಂತೆ ಬಾಗಿಲಲ್ಲಿ ಕುಳಿತುಕೊಂಡ ವ್ಯವಸ್ಥಾಪಕರು ಅವರನ್ನು ತರುಬಿ, ಅವರ ಹೆಸರು, ವಿಳಾಸ, ಸಿಡಿ ಆಡಿದ ಕಾರಣ, ಜಾತಿ, ದಿನಾಂಕ ಇತ್ಯಾದಿಗಳನ್ನು ಬರೆದುಕೊಳ್ಳುತ್ತಾರೆ. ಈ ನಡುವೆ ಒಂದು ಒಳ್ಳೆಯ ಸಮಾಚಾರ ವೇನೆಂದರೆ, ಮನಸ್ಸಿನಲ್ಲಿ ತಾವು ಬೇಡಿಕೊಂಡದ್ದನ್ನು ಬಿಟ್ಟು ಬೇರೆ (ಸುಳ್ಳು) ಹೇಳಿದರೆ, ದೇವತೆಯ ಎದುರು ನಡೆಯುವುದಿಲ್ಲವೆಂದೂ, ಅಂಥವರಿಗೆ ಕೇಡು ತಪ್ಪದೆಂದೂ, ಅಲ್ಲದೆ ಕೊಂಡಿಗಳೇ ಬೆನ್ನಿಗೆ ನೆಡುವುದಿಲ್ಲವೆಂದೂ ಬಲವಾಗಿ ನಂಬಿಕೆ ಇರೋದರಿಂದ, ಎಲ್ಲರೂ ನಿಜವಾದ ಕಾರಣಗಳನ್ನೇ ಹೇಳುತ್ತಾರೆ. ಎಲ್ಲೆಲ್ಲೋ ಸುಳ್ಳು ಹೇಳಿ ದಾಟಿಕೊಂಡವರೂ ಇಲ್ಲಿ ನಿಜ ಹೇಳಿದ ಪ್ರಸಂಗಗಳು ಇಲ್ಲಿಯ ದಾಖಲೆಯಲ್ಲಿ ಇವೆ. ಇಷ್ಟೆಲ್ಲ ಖರೆ ಆಡುವವರೂ, ಇದೇ ಸಮಯದಲ್ಲಿ 'ಸಿಡಿ' ಆಡೋದರಿಂದ ತಮಗೆ ಆದ ದೈಹಿಕ ನೋವು, ಭಯ, ಮಾನಸಿಕ ಯಾತನೆ ಇತ್ಯಾದಿಗಳನ್ನು ಮುಚ್ಚಿಟ್ಟು ''ಏನೂ ಆಗೋದಿಲ್ಲ'' ಎಂದು ಸುಳ್ಳು ಹೇಳೋದು ಅಷ್ಟೇ ತಮಾಷೆಯಾಗಿದೆ. ಬೆನ್ನಿಗೆ ಕೊಂಡಿ ಚುಚ್ಚುವಾಗ, ನಾನು ಬಗ್ಗಿ ಅವರ ಮುಖ ನೋಡಿದ್ದೇನೆ. ಕೊಂಡಿ ಚುಚ್ಚಿದಾಗೊಮ್ಮೆ, ನೋವಿನಿಂದ ಮುಖ ಕಿವುಚಿಕೊಂಡದ್ದನ್ನು ಕಣ್ಣಾರೆ ನೋಡಿದ್ದೇನೆ. ಅದೇ ಥರ ಕೊಂಡಿ ಕಳಚುವಾಗಲೂ ಬೋರಲು ಮಲಗಿದವರ, ಮುಖಭಾವ ಚರ್ಯೆಯನ್ನು ಗಮನಿಸಿದ್ದೇನೆ. ಕೊಂಡಿ ಯಾವಾಗ ಕಳಚಿಯಾರು ? ಯಾವಾಗ ಈ ಹಿಂಸೆಯಿಂದ ಪಾರಾಗುತ್ತೇವೆಂದು ಅವರು ಮುಖ ಬಿಳಚಿಕೊಂಡಿರುತ್ತಾರೆ. ಕೆಲವರು ಆ ನೋವಿನಿಂದ ಮುನುಗುವುದನ್ನು ಕಿವಿಯಾರೆ ಕೇಳಿದ್ದೇನೆ. ನೋವೇ ಆಗದಿದ್ದವರು ಹೀಗೇಕೆ ಮಾಡುತ್ತಾರೆ ? ಒಮ್ಮೊಮ್ಮೆ ರಕ್ತವೂ ಬರುವುದುಂಟು. ಸ್ವತಃ ನಾನೇ ಅದನ್ನು ಕೈ ಮುಟ್ಟಿ ಪೂಜಾರಿಗಳಿಗೆ ತೋರಿಸಿದಾಗ ಅವರು ಮೂಕರಾಗಿ ತಮ್ಮ ಪಾಡಿಗೆ ತಾವು ಗಡಿ-ಬಿಡಿಯಲ್ಲಿ ತೊಡಗಿಸಿಕೊಳ್ಳುತ್ತಾರೆ. ನೋವೇ ಆಗದಂತೆ ಮಾಡುವ ಈ ದೇವತೆ ರಕ್ತ ಬರುವಂತೆ ಏಕೆ ಮಾಡುತ್ತಾಳೆ ? ರಕ್ತ ಬಂದರೂ, ತೊಗಲು ಪಟ್ಟಿ ಕಟ್ಟಿಕೊಂಡು ತೂಗು ಹಾಕಿದರೂ ಕಿಂಚಿತ್ತೂ ನೋವಾಗುವುದಿಲ್ಲವೆಂದು ಹಸಿ ಸುಳ್ಳು ಹೇಳಿದರೆ ನಂಬಬಹುದೆ ? ೬೦ ವರ್ಷ ವಯಸ್ಸಿನವರು ಸಿಡಿ ಆಡಲು ಬೇಡಿಕೊಂಡು ಬಂದರೆ ಹೇಗೆ ಎಂದು ಕೇಳಿದ್ದಕ್ಕೆ ಅಲ್ಲಿನ ಕೊಂಡಿ ಹಾಕುವ ಪೂಜಾರಿ (ಶ್ರೀಮಂತ ಕಂಬಾರ) ಅಂಥವರಿಗೆ ಕೊಂಡಿ ಮಾತ್ರ ಹಾಕಿ ನಡೂರ ಲಕ್ಷ್ಮಿಯ ಗುಡಿಯ ತನಕ ನಡೆಸಿಕೊಂಡು ಹೋಗಿ ಮತ್ತೆ ಕರೆದುಕೊಂಡು ಭಾಗಮ್ಮನ ಗುಡಿಗೆ ಬರುತ್ತೇವೆ ಎಂದು ಹೇಳಿದ. ಅವರಿಗೆ ಹೀಗೇಕೆ ಎಂದು ಕೇಳಿದರೆ, ಇದು 'ನೆಲ ಸಿಡಿ' ಎಂದು ಬೇರೆ ಹೆಸರಿಟ್ಟು ಹೇಳಿದ. ಒಂದು ವೇಳೆ ೫೫-೬೦ ವರ್ಷದ ವಯಸ್ಸಿನವರನ್ನು ಎಲ್ಲರಂತೆ ಕ್ರೇನ್‌ಗೆ ತೂಗು ಹಾಕಿ ಸಿಡಿ ಆಡಿಸಿದರೆ ಅವರ ಹಣ್ಣುದೊಗಲು ಕಿತ್ತು ಬಂದು, ಎಲ್ಲರ ಎದುರಾ ಎದುರೇ ಅಮಂಗಳವಾಗುವ ಸಾಧ್ಯತೆ ಇರುತ್ತದೆಂದು ತಿಳಿದ ಇಲ್ಲಿನ ಪೂಜಾರಿಗಳು ಅಂಥವರನ್ನು ಸಾಧ್ಯವಾದಷ್ಟು ಸಿಡಿ ಆಡುವುದರಿಂದ ದೂರವೇ ಇಡುತ್ತಾರೆ. ಅಂದರೆ ಹಣ್ಣು ತೊಗಲಿನ ವಯೋವೃದ್ಧರ ಮೇಲೆ ಭಾಗ್ಯವಂತಿ ದೇವಿಯ ಶಕ್ತಿ ಕೆಲಸ ಮಾಡುವುದಿಲ್ಲವೆ ?

ಭಾರಿ ಮೋಸದ ಸಂಗತಿಯೆಂದರೆ, ಈ ಸಿಡಿ ಕಾರ್ಯಕ್ರಮ ಕಾಲಾನುಕಾಲದಿಂದ ಇಲ್ಲಿ ನಡೆಯುತ್ತ ಬಂದಿದ್ದರೂ, ಬ್ರಾಹ್ಮಣರು ಮಾತ್ರ ಇದರಲ್ಲಿ ಭಾಗವಹಿಸಿಲ್ಲದಿರೋದು. ಇಡೀ ದಾಖಲೆಗಳನ್ನು ತಿರುವಿ ಹಾಕಿದರೆ, ಎಲ್ಲೋ ಒಬ್ಬರು, ಇಬ್ಬರು ಮಾತ್ರ ಸಿಕ್ಕುತ್ತಾರೆ. ವಿಶೇಷವಾಗಿ ಹಿಂದುಳಿದ ಜನಗಳೇ ಇದರಲ್ಲಿ ಭಾಗವಹಿಸಿದ್ದಾರೆ. ಲಿಂಗಾಯತರೂ ಕಡಿಮೆ ಸಂಖ್ಯೆಯೇನಿಲ್ಲ. ಕುರುಬರು, ಕಬ್ಬಲಿಗರು, ಬೇಡರು, ಕಮ್ಮಾರರು, ಬಣಗಾರರು, ಕುಂಬಾರರು, ಸಾಳೇರು, ನಾಯಿಂದ ಸಮಾಜದವರು ಮುಂತಾದವರೆಲ್ಲ ವರ್ಷ ತಪ್ಪಿದರೆ ಮರುವರ್ಷ ಬಂದು ಆಡಿ ಹೋಗುತ್ತಾರೆ. ಮುಸಲ್ಮಾನರಂತೂ ಈ ಸಿಡಿಯ ಹತ್ತಿರ ಹಣಕಿಹಾಕಿಯೂ ನೋಡಿಲ್ಲ. ಹರಿಜನರು ಸಿಡಿ ಆಡುವಂತಿಲ್ಲ. ಅವರನ್ನು ತೂಗುಹಾಕಿ ಆಡಿಸುವುದಿಲ್ಲ. ಸುಮ್ಮನೆ ಕೊಂಡಿ ಹಾಕಿ ನೆಲದ ಮೇಲೆ ನಡೆಸುತ್ತಾರೆ, ಏಕೆ ? ಭಾಗಮ್ಮ ದೇವತೆ ಕೇವಲ ಹಿಂದುಳಿದ ಜನ-ಜಾತಿಗಳಿಗೆ ಮಾತ್ರ ಸಹಾಯ ಮಾಡುವ, ತಪ್ಪಿದರೆ ಅವರನ್ನೆ ಕಾಡುವ ದೇವರೇನು ?

### ಈ ಹಜಾಮತಿ ತಪ್ಪಿಸುವ ಹೊಣೆ ಯಾರದು ?

ಮೇಲು ನೋಟಕ್ಕೆ ಹಿಂದುಳಿದ ಜಾತಿ ಜನಾಂಗದ ದೇವತೆ ಎಂಬಂತೆ ಕಾಣಿಸಿದರೂ ಈ ಭಾಗಮ್ಮ ಉಳ್ಳವರಿಗೆ ಮಾತ್ರ ಎಟುಕುವ ದೇವತೆ ಆಗಿದ್ದಾಳೆ. ಏಕೆಂದರೆ ಒಂದು ಸಲ ಸಿಡಿ ಆಡುವುದಕ್ಕೆ ಕನಿಷ್ಠ ಏನಿಲ್ಲೆಂದರೂ ಹತ್ತೆಂಟು ಸಾವಿರ ಖರ್ಚು ಬರುತ್ತದೆ.

ಮರ ನೋಡಿ ಚೆಕ್ಕಿ ಬಿಡಿಸುವಂತೆ, ಸಿಡಿ ಆಡುವುದಕ್ಕೂ ಟೆಂಡರ್ ಕರೆಯುತ್ತಾರೆ. ಯಾರು ಹೆಚ್ಚು ಹಣ ಕೊಡುತ್ತಾರೋ ಅವರಿಗೆ ಸಿಡಿ ಆಡುವುದಕ್ಕೆ ಅವಕಾಶ ಸಿಗುತ್ತದೆ. ಐದು ಸಾವಿರದಿಂದ ಹತ್ತು ಸಾವಿರದವರೆಗೆ ಟೆಂಡರ್ ಹಿಡಿಯುವವರೇ ಹೆಚ್ಚು ಸಂಖ್ಯೆಯಲ್ಲಿದ್ದಾರೆ.

ಇನ್ನುಳಿದ ಕ್ಷೌರದ ಬಗೆಗಂತೂ ಬರೆಯುವುದೇ ಬೇಡ.

**ಫೋಟೋ ವರದಿ : ವಿಶ್ವಾರಾಧ್ಯ ಸತ್ಯಂಪೇಟೆ**
ಬಸವಮಾರ್ಗ ಪತ್ರಿಕೆ, ಶಹಾಪುರ
ಗುಲ್ಬರ್ಗಾ ಜಿಲ್ಲೆ- ೫೮೫೨೨೩

# ಪ್ರಾಚೀನ ಭಾರತದ ಭೌತವಾದಿ ಪಂಥಗಳು

**೨. 'ವೈಶೇಷಿಕ' ದಾರ್ಶನಿಕ ಪಂಥ**

ಕ್ರಿ.ಪೂ. ಸುಮಾರು ಮೂರನೆಯ ಶತಮಾನದಲ್ಲಿ ಜೀವಿಸಿದ್ದ ಕಣಾದನು ಈ ದಾರ್ಶನಿಕ ಪದ್ಧತಿಯ ಸಂಸ್ಥಾಪಕನೆಂದು ಹೇಳಲಾಗುತ್ತದೆ. ಇವನು 'ವೈಶೇಷಿಕ ಸೂತ್ರ' ಎಂಬ ಗ್ರಂಥದ ರಚಯಿತನೆಂದೂ ಹೇಳಲಾಗುತ್ತದೆ. ಆದರೆ ಈ ಸೂತ್ರಗಳು ಕ್ರಿ.ಶ. ೧ನೆಯ ಶತಮಾನದಲ್ಲಷ್ಟೆ ಅಂತಿಮ ಪರಿಷ್ಕೃತ ರೂಪ ತಳೆದವು.



ವೈಶೇಷಿಕ ದಾರ್ಶನಿಕ ಪದ್ಧತಿಯು ಪುರಾತನ ಭಾರತೀಯರ ಸ್ವಾಭಾವಿಕ ವೈಜ್ಞಾನಿಕ ವಿಚಾರಗಳೊಂದಿಗೆ, ಭೌತವಾದದೊಂದಿಗೆ, ನಿಕಟವಾಗಿ ಸಂಬಂಧಿತವಾಗಿದ್ದಿತು.

ಎರಡು ಪ್ರಪಂಚಗಳು ವಸ್ತುನಿಷ್ಠವಾಗಿ ಅಸ್ತಿತ್ವದಲ್ಲಿವೆ. ಒಂದು ಇಂದ್ರಿಯಗಳಿಗೆ ಗೋಚರಿಸುವ ಪ್ರಪಂಚ. ಇನ್ನೊಂದು ಇಂದ್ರಿಯಗಳ ತಿಳಿವಳಿಕೆಗೂ ಮೀರಿದ ಪ್ರಪಂಚ, ಎಂದು ವೈಶೇಷಿಕರು ಘೋಷಿಸಿದರು. ಅವರು ಲೌಕಿಕ ಜಗತ್ತನ್ನು ಭೌತವಾದಿ ದೃಷ್ಟಿಕೋನದಿಂದಲೂ ಪಾರಲೌಕಿಕ ಜಗತ್ತನ್ನು ದ್ವೈತ ದೃಷ್ಟಿಯಿಂದಲೂ ವಿವರಿಸಿದರು. ಇವರ ವಿಚಾರಧಾರೆಯನ್ನು ಕಣ ಸಿದ್ಧಾಂತ ಎಂದೂ ಕರೆಯಲಾಗುತ್ತದೆ.

ವೈಶೇಷಿಕ ಸೂತ್ರದ ಪ್ರಕಾರ ಐಹಿಕ ಜಗತ್ತು ಬ್ರಹ್ಮಾಂಡದಲ್ಲಿರುವ ಪರಮಾಣುಗಳನ್ನು ಅವಲಂಬಿಸಿಕೊಂಡು ಅಸ್ತಿತ್ವಕ್ಕೆ ಬಂದಿದೆ. ಈ ಪರಮಾಣುಗಳು ಅಸಂಖ್ಯಾತವಾದವು, ಚಿರಂತನವಾದವು. ಈ ಬ್ರಹ್ಮಾಂಡದಲ್ಲಿ ನಾಲ್ಕು ಮೂಲ ಧಾತುಗಳಿವೆ - ನೆಲ, ಜಲ, ಬೆಳಕು, ಗಾಳಿ. ಅಂತೆಯೇ ಪರಮಾಣುಗಳೂ ನೆಲದ, ಜಲದ, ಬೆಳಕಿನ ಹಾಗೂ ಗಾಳಿಯ ಪರಮಾಣುಗಳಾಗಿ ವಿಭಜಿತವಾಗಿವೆ. ಆಕಾಶಕ್ಕೆ ಪರಮಾಣು - ರಚನೆ ಇಲ್ಲ, ಅದು ಪರಮಾಣುಗಳ ನಡುವಿನ ಅಂತರವನ್ನು ತುಂಬುವಂತಹುದು.

ಪರಮಾಣುಗಳು ಅಪಾರಕ, ಅವಿಭಾಜ್ಯ. ಬಟ್ಟೆಯ ಉದಾಹರಣೆ ತೆಗೆದುಕೊಳ್ಳೋಣ. ಬಟ್ಟೆಯನ್ನು ವಿಭಜಿಸಿದಾಗ ಎಳೆಗಳು ಬರುತ್ತವೆ. ಎಳೆಗಳನ್ನು ವಿಭಜಿಸಿದಾಗ ಹತ್ತಿ ಬರುತ್ತದೆ. ಇದನ್ನೂ ಸಣ್ಣ ಸಣ್ಣ ಅಸಂಖ್ಯಾತ ಕಣಗಳನ್ನಾಗಿ ವಿಭಜಿಸಬಹುದು. ಹೀಗೆ ವಿಭಜಿಸುತ್ತ ಹೋದಂತೆ ಕೊನೆಯಲ್ಲಿ ವಿಭಜಿಸಲಾಗದಂಥ ಕಣಗಳು ಕಂಡುಬರುತ್ತವೆ. ಇವೇ ಪರಮಾಣುಗಳು. ಇವುಗಳ ಸಂಯೋಜನೆಯಿಂದಲೇ ಈ ಜಗತ್ತು ರೂಪುಗೊಂಡಿರುವುದು.

ಕಣಾದನ ಸಿದ್ಧಾಂತವು ಪಾಶ್ಚಿಮಾತ್ಯ ತತ್ತ್ವಜ್ಞಾನಿ ಡೆಮೊಕ್ರಿಟಸನ ಪರಮಾಣು ಸಿದ್ಧಾಂತದೊಂದಿಗೆ ಹೋಲಿಕೆ ಹೊಂದಿದ್ದರೂ ವ್ಯತ್ಯಾಸಗಳು ಬಹಳಷ್ಟಿವೆ. ಡೆಮೊಕ್ರಿಟಸನ ಪ್ರಕಾರ ಪರಮಾಣುಗಳು ಅವಿಭಾಜ್ಯ, ಅಪರಿವರ್ತನೀಯ, ಗುಣಾತ್ಮಕವಾಗಿ ಸದೃಶವಾದವು. ಆದರೆ ಪರಿಮಾಣಾತ್ಮಕವಾಗಿ, ಅಂದರೆ ಅವುಗಳ ರೂಪ, ಗಾತ್ರ, ವ್ಯವಸ್ಥೆ, ಸ್ಥಾನ, ಇವುಗಳ ದೃಷ್ಟಿಯಿಂದಷ್ಟೆ, ಬೇರೆ ಬೇರೆಯಾದವು. ಇದೇ ಅವನ ಪ್ರಕಾರ, ಈ ಜಗತ್ತಿನ 'ನಿಯಂತ್ರಣ' ಅಥವಾ 'ನಿಯತಿ' ವಾದಕ್ಕೆ ಮೂಲಾಧಾರವಾದಿ ಅಂಶ. ಈ ಜಗತ್ತಿನಲ್ಲಿ ಪ್ರತಿಯೊಂದು ಘಟನೆಯೂ ಆವಶ್ಯಕತೆಯ ಫಲವಷ್ಟೆ. ಆವಶ್ಯಕವಲ್ಲದ, ಆಕಸ್ಮಾತ್ತಾಗಿ ಜರುಗುವ ವಿದ್ಯಮಾನಗಳು ಯಾವುವೂ ಇಲ್ಲ.

ಮತ್ತೊಬ್ಬ ಪಾಶ್ಚಿಮಾತ್ಯ ದಾರ್ಶನಿಕ ಎಪಿಕ್ಯುರಸನು ಡೆಮೊಕ್ರಟಿಸನ ವಾದ ಸರಣಿಯನ್ನೇ ಮುಂದುವರಿಸಿ, ಪರಮಾಣುಗಳಿಗೆ ತೂಕದ ಗುಣವನ್ನೂ ಹಚ್ಚಿದ. ಪರಮಾಣುಗಳಿಗೆ ಲಂಬ ಚಲನೆಯಷ್ಟೆ ಅಲ್ಲ, ನೇರ ರೇಖೆಯಿಂದ ಅಡ್ಡ ಸರಿಯುವ 'ವಿಚಲನ' ಗುಣವೂ ಇದೆಯೆಂದು ಅವನು ಪ್ರತಿಪಾದಿಸಿದ. ಹಾಗಾಗಿ ಆಕಸ್ಮಿಕದಿಂದ ಆವಶ್ಯಕತೆ ಉಂಟಾಗುತ್ತದೆ, ಪರಮಾಣುಗಳ ಚಲನೆಯಂತೂ ಮುಕ್ತ, ಎಂದವನು ಘೋಷಿಸಿದ.

ಕಣಾದನ ಪ್ರಕಾರ ಪ್ರತಿಯೊಂದು ಪರಮಾಣುವೂ ಇತರೆಲ್ಲ ಪರಮಾಣುಗಳಿಂದ ಗುಣಾತ್ಮಕವಾಗಿ ಭಿನ್ನವಾದುದು. ಒಂದೊಂದೂ ಒಂದೊಂದು ವಿಶೇಷ ಗುಣ ಹೊಂದಿರುತ್ತದೆ. ಹಾಗಾಗಿ ಎಷ್ಟು ಪರಮಾಣುಗಳಿವೆಯೋ ಅವುಗಳ ನಡುವೆ ಅಷ್ಟೇ ವೈವಿಧ್ಯತೆಯೂ ಇದೆ.

ಡೆಮೊಕ್ರಿಟಸನ ಪ್ರಕಾರ ಪರಮಾಣುಗಳು ನಿರಂತರ ಚಲನೆಯಲ್ಲಿ ಇರುತ್ತವಾದರೆ, ಕಣಾದನ ಪ್ರಕಾರ ಪರಮಾಣುಗಳು ಅಪರಿವರ್ತನೀಯ, ಜಡ ಹಾಗೂ ಯಾವುದೇ ರೀತಿಯ ಒಳಚಲನೆಯೂ ಎಲ್ಲದಂತಹವು. ಪರಮಾಣುಗಳ ಚಲನೆಯು, ಅಂದರೆ ಅವುಗಳ ಸಂಯೋಗ, ವಿಯೋಗ ಹಾಗೂ ಸ್ಥಳಾಂತರಗಳು ಬಾಹ್ಯ ಕಾರಣಗಳಿಂದಾಗಿ, ಅಂದರೆ ಬಾಹ್ಯ ವಸ್ತುವೊಂದರ ಕ್ರಿಯೆಯ ಫಲವಾಗಿ, ಜರುಗುತ್ತವೆ. ಇದು 'ದೃಷ್ಟ' ಕಾರಣ. ಕಣಾದನ ಪ್ರಕಾರ, ಇದಲ್ಲದೆ 'ಅ-ದೃಷ್ಟ' ಕಾರಣವೊಂದೂ ಇದೆ. ಇದು ಎಲ್ಲ ಪರಮಾಣುಗಳ ಅಂತಿಮ ಮೂಲ ಕಾರಣ. ಈ 'ಅ-ದೃಷ್ಟ'ದ ಬಲ ಸಹಜವಾದುದು, ದೈವಿಕವಲ್ಲ.

ಹಾಗಾಗಿ ವೈಶೇಷಿಕ ಪರಮಾಣು ಸಿದ್ಧಾಂತವು ಭೌತವಾದಿ ಎಂಬುದು ಸ್ಪಷ್ಟವಾಗುತ್ತದೆ. ವೈಶೇಷಿಕರು ಈ ಜಗತ್ತಿನ ಭೌತಿಕತೆಗೆ ಮನ್ನಣೆ ನೀಡಿದ್ದರು. ಮಾನವನ ವೈಚಾರಿಕತೆಯು (ಪ್ರಜ್ಞೆ ಅಥವಾ ಮನಸು) ಭೌತ ಪರಮಾಣುಗಳ ಉತ್ಪನ್ನವೆಂದೇ ಅವರು ಭಾವಿಸಿದ್ದರು.

**ಕೆ. ಎಲ್. ಗೋಪಾಲಕೃಷ್ಣ ರಾವ್**
೨೬೧, ೨ನೇ ಕ್ರಾಸ್, ಸಿ.ಟಿ.ಬೆಡ್, ತ್ಯಾಗರಾಜನಗರ, ಬೆಂಗಳೂರು-೫೬೦ ೦೨೮

